# ಜಂಬುಖಂಡಿಯ ಸಿಂಹ

(ಭಾವಿಸಮೀರ ಶ್ರೀವಾದಿರಾಜ ಗುರುಸಾರ್ವಭೌಮರ ಭಕ್ತಾಗ್ರಣಿ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರ ಜೀವನ, ಸಾಧನೆ ಮತ್ತು ಮಹಿಮಾ ಪರಿಚಯ)

**ಚಿರಂ ನಿರೂಢಶಿಷ್ಯೋರು ಹೃದ್ಗಧ್ವಾಂತದಿವಾಕರಾನ್ ।**
**ವಾಗ್ಜ್ಯೋತ್ಸ್ನಾಲಸಿತಾನ್ ವಂದೇ ಶ್ರೀಮದ್ಗುರುಸುಧಾಕರಾನ್ ॥**

## ಜಯಸಿಂಹ

(ಶ್ರೀ ತಿರುಮಲೇಶ ಹರಿ ವಿಠಲದಾಸರು)

**ಪರಿಮಳ ಪ್ರಕಾಶನ**
178, 15ನೇ ಮುಖ್ಯರಸ್ತೆ, ಶ್ರೀನಗರ
ಬನಶಂಕರಿ 1ನೇ ಹಂತ, 2ನೇ ಬ್ಲಾಕ್
ಬೆಂಗಳೂರು – 560 050

ಶ್ರೀ ಸೋದೆ ವಾದಿರಾಜ ಮಠ

ಉಡುಪಿ, ದಕ್ಷಿಣ ಕನ್ನಡ

– – – – – –

# ಪರಮಪೂಜ್ಯ
# ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ
# ಅನುಗ್ರಹ ಸಂದೇಶ

**ಸ**ಮೀರಾವತಾರ ಶ್ರೀಮನ್ಮಧ್ವಾಚಾರ್ಯರ ನಂತರ ಕಲ್ಯಾದಿ ದೈತ್ಯರ ಆತಂಕಕಾರಿ ಬಾಧೆಯನ್ನು ದೂರೀಕರಿಸಿ ಸಜ್ಜನ ವೃಂದವನ್ನು ರಕ್ಷಿಸಿದವರು ಕರುಣಾನಿಧಿ ಭಾವಿಸಮೀರ ಶ್ರೀವಾದಿರಾಜ ಗುರುಸಾರ್ವಭೌಮರು. ಶ್ರೀಮಧ್ವರಂತೆ ಅನೇಕ ಅತಿಮಾನುಷ ಮಹಿಮೆಗಳನ್ನು ತೋರಿಸಿ, ಅಮೂಲ್ಯ ಗ್ರಂಥಗಳನ್ನು ರಚಿಸಿ ಅನುಗ್ರಹಿಸಿದವರು ಅವರು. ವಾದಿರಾಜರು ಸಮೀರ ಪದಾರ್ಹರಾದ್ದರಿಂದಲೇ ಇಂತಹ ಲೋಕೋತ್ತರ ಸಜ್ಜನಾನುಗ್ರಹಕಾರ್ಯವು ಅವರಿಂದ ನಡೆಯಿತು. ಆ ಮಹಾನುಭಾವರ ಋಜುತ್ವಮಹಿಮೆ ಮತ್ತು ಭಾವಿಸಮೀರತ್ವವನ್ನು ಶ್ರುತಿ, ಸ್ಮೃತಿ, ಆರ್ಯೋಕ್ತಿಪ್ರಮಾಣ ಗಳಿಂದ ಚೆನ್ನಾಗಿ ಅರಿತು, ಸಮರ್ಥಿಸಿ ಪ್ರಸಾರ ಮಾಡಿದವರು ಜಂಬುಖಂಡಿ ಶ್ರೀವಾದಿರಾಜಾಚಾರ್ಯರು. ಆಚಾರ್ಯರು ಶ್ರೀರಾಜರ ಅಂತರಂಗ ಹಾಗೂ ಏಕಾಂತ ಭಕ್ತೋತ್ತಮರು,

ಶ್ರೀವೃಂದಾವನಾಚಾರ್ಯರ ಅನುಗ್ರಹ ವಿಶೇಷದಿಂದ ಜನಿಸಿದ ಆಚಾರ್ಯರು. ತಮ್ಮ ಜೀವಿತದ ಅಲ್ಪಾವಧಿಯಲ್ಲಿಯೇ ಸಾಧಿಸಿದ ಗುರಿ, ತೋರಿದ ಮಹಿಮೆ ಅತ್ಯಾತಿಶಯವಾದವು. ಅವರ ವೈರಾಗ್ಯ, ಗುರುಭಕ್ತಿ, ಸರ್ವಮೂಲಸುಧಾದಿ ಗ್ರಂಥಗಳ ಕ್ಲುಪ್ತಿ, ಪ್ರೌಢವ್ಯಾಖ್ಯಾನ ಗ್ರಂಥ ರಚನೆ, ದಾಸಸಾಹಿತ್ಯ ಸೇವೆ, ತತ್ತ್ವೋಪದೇಶ, ತತ್ತ್ವದೀಕ್ಷೆ, ಶಿಷ್ಯಾನುಗ್ರಹ, ಭಕ್ತಾನುಕಂಪ ಮುಂತಾದವು ಅನ್ಯಾದೃಶವಾದವು. ರಾಜರ ಭಕ್ತಾಗ್ರಣಿ ಜಂಬುಖಂಡಿ ಆಚಾರ್ಯರ ಮಹಿಮಾಶ್ರವಣವು ಮುಮುಕ್ಷುಗಳಾದ ಸಜ್ಜನರಿಗೆ ಅಮೃತಸ್ರಾವಿಯೂ, ಹರಿಗುರುಭಕ್ತಿ ಉದ್ಬೋಧಕವೂ ಆಗಿದೆ.

ಈಗಾಗಲೇ ಈ ಮಹಾತ್ಮರ ಮಹಿಮಾಬೋಧಕ ಹಲವು ಕೃತಿಗಳು ಅನೇಕ ಆಕರಗಳೊಂದಿಗೆ ನಿರ್ಮಾಣಗೊಂಡು ಪ್ರಕಾಶಿತವಾಗಿವೆ. ಪ್ರಕೃತ ಬೆಂಗಳೂರಿನ ಶ್ರೀಜಯಸಿಂಹ ಅವರು ಈ ಮಹಾಮಹಿಮರ ರೋಚಕ ಜೀವನ-ಸಾಧನೆಯನ್ನು ಬಿಂಬಿಸುವ **'ಜಂಬುಖಂಡಿಯ ಸಿಂಹ'** ಎಂಬ ಗ್ರಂಥವನ್ನು ರಚಿಸಿದ್ದಾರೆ. ಲೇಖಕರ ನಿರೂಪಣಾಶೈಲಿಯು ಸರಳವೂ, ಪ್ರಭಾವಪೂರ್ಣವೂ ಹಾಗೂ ಆಕರ್ಷಕವೂ ಆಗಿದೆ. ಶ್ರೀಯುತರು ವಾದಿರಾಜರ ಅಂತರಂಗಭಕ್ತರಾದ ಶ್ರೀಗುರು ಗೋವಿಂದದಾಸರ ಶಿಷ್ಯಕೋಟಿ ಪ್ರವಿಷ್ಟರು. 'ಶ್ರೀತಿರುಮಲೇಶ ಹರಿವಿಠಲ' ಎಂಬ ಅಂಕಿತ ಪಡೆದಿರುವ ಇವರು ಈಗಾಗಲೇ ಅನೇಕ ಕೃತಿಗಳನ್ನು ರಚಿಸಿ ಸಾರಸ್ವತ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದಾರೆ. ಇವರ ಭಾಷೆಯು ಸಾಹಿತ್ಯಸೊಬಗುಳ್ಳದ್ದಾಗಿ ಸುಲಲಿತವಾಗಿದೆ. ನಿರೂಪಣಾಕ್ರಮವು ಸಾಂಗತ್ಯವುಳ್ಳದ್ದಾಗಿ

ಆನುಪೂರ್ವಿಯುಕ್ತ ಯಥಾರ್ಥಮಹಿಮಾಬೋಧಕವಾಗಿದೆ. ಶ್ರೀಯುತರ ಈ ಕೃತಿ ಶ್ರೀಜಂಬುಖಂಡಿ ಆಚಾರ್ಯರ ಹಿರಿಮೆಯನ್ನು ಹಿರಿದಾಗಿ ತಿಳಿಸುತ್ತಾ ಶ್ರೀವಾದಿರಾಜರ ಭಕ್ತರನ್ನು ಸಂತೋಷಗೊಳಿಸುವಲ್ಲಿ ಸಂದೇಹವಿಲ್ಲ.

ಶ್ರೀಜಯಸಿಂಹ ಅವರಿಂದ ಇಂತಹ ಇನ್ನೂ ಅನೇಕ ಉಪಯುಕ್ತ ಕೃತಿರತ್ನಗಳು ರಚಿತವಾಗಿ ಪ್ರಕಾಶಗೊಳ್ಳಲೆಂದು ಶ್ರೀಮಧ್ವ – ವಾದಿರಾಜವರದ ಶ್ರೀವೇದವ್ಯಾಸ – ಭೂವರಾಹ – ಹಯಗ್ರೀವ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

**ಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರು**

(ಪೂಜ್ಯ ಶ್ರೀಗಳವರು ಸೋದಾ ಕ್ಷೇತ್ರದಲ್ಲಿ ವೃಂದಾವನಸ್ಥರಾಗುವ ಮೊದಲು ಈ ಲೇಖಕನಿಗೆ ನೀಡಿದ ಕೊನೆಯ ಅನುಗ್ರಹ ಸಂದೇಶ)

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಪದವಾಕ್ಯ ಪ್ರಮಾಣಪಾರಾವಾರಪಾರಂಗತ
ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸದೇವದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು
ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ ಸಾಮ್ರಾಜ್ಯ ದಿಗ್ವಿಜಯವಿದ್ಯಾ
ಸಿಂಹಾಸನಾಧೀಶ್ವರರಾದ ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲ
ಸಂಜಾತರಾದ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ

# ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹ ಸಂದೇಶ

**ವೈ**ಷ್ಣವ ಜಗತ್ತಿನಲ್ಲಿ ಪ್ರಜ್ವಲಿಸಿದ ನಯನಮನೋಹರತಾರೆ ಭಾವಿಸಮೀರರಾದ ಶ್ರೀವಾದಿರಾಜರು. ವಿದ್ವತ್ಪೂರ್ಣವಾದ ಗ್ರಂಥಗಳಿಂದ, ಸ್ತೋತ್ರಗಳಿಂದ ವಿಶಿಷ್ಟ ಸ್ಥಾನಗಳಿಸಿರುವ ಶ್ರೀವಾದಿರಾಜರ ಪವಾಡಗಳು ಅಸಂಖ್ಯ. ಕನ್ನಡದ ಸಾಹಿತ್ಯ ಪ್ರಪಂಚದಲ್ಲಿ ಕೂಡಾ ಬಹುದೊಡ್ಡ ಸಾಧನೆಗೈದಿರುವ ಸಾಧನಾಜೀವಿಗಳೂ ಹೌದು. 'ಹಯವದನ' ಅಂಕಿತದಿಂದ, ಕಲಿಯುಗದಲ್ಲಿ ಕಷ್ಟಪಡುತ್ತಿರುವ ಸಾವಿರಾರು ಜೀವರಾಶಿಗಳಿಗೆ ಚೈತನ್ಯ ತುಂಬಿ ವೈಷ್ಣವ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಿರುವ ಅದ್ಭುತ ಸಾತ್ವಿಕಸಂಪತ್ತು; ತರ್ಕತಾಂಡವ, ಚಂದ್ರಿಕಾ, ನ್ಯಾಯಾಮೃತದಂತಹ ವಿಶ್ವವೇ ಬೆರಗಾಗುವಂತಹ ಕೊಡುಗೆಯಿತ್ತ ಶ್ರೀವ್ಯಾಸರಾಜರ ಬಳಿ ಚತುಃಷಷ್ಟಿಕಲಾ ಪೂರ್ಣತೆಯಿಂದ ಬೆಳಗಿದ ಶ್ರೀ ಶ್ರೀ ವಿಜಯೀಂದ್ರರ ಸ್ನೇಹಿತರೂ ಸಹಪಾಠಿಗಳೂ ಎಂಬುದು ಗಮನಾರ್ಹ.

ಋಜುತ್ವೋತ್ಕರ್ಷಮಹಿಮೆ ಶ್ರೀವಾದಿರಾಜರಲ್ಲಿದೆ ಎನ್ನುವ ಪ್ರಬಲ ಸಾತ್ವಿಕ ಗುಂಪಿನಲ್ಲಿ ನಾವೂ ಒಬ್ಬರು. ಈ ನಂಬಿಕೆ ಶ್ರೀಮಧ್ವಾಚಾರ್ಯರ ಮೂಲಪರಂಪರೆಯಲ್ಲಿ ಬಂದಿರುವ ನಾವು ದೃಢವಾಗಿ ಪರಂಪರಾಗತವಾಗಿ ನಡೆಸಿಕೊಂಡು ಬಂದಿರುತ್ತೇವೆ.

ಶ್ರೀಮನ್ಮಧ್ವಾಚಾರ್ಯರು - ಶ್ರೀಜಯತೀರ್ಥರು - ಶ್ರೀವಿಜಯೀಂದ್ರರು-ಶ್ರೀರಾಘವೇಂದ್ರರು ಈ ಭವ್ಯ ನೇರ ಪರಂಪರೆಯಲ್ಲಿ ಬಂದಿರುವ ನಮ್ಮ ಪೂರ್ವೀಕಗುರುಗಳಾದ ಪರಮಪೂಜ್ಯ ಪ್ರಾತಃ ಸ್ಮರಣೀಯರೂ ಆದ ಶ್ರೀ ಶ್ರೀ ಸುಪ್ರಜ್ಞೇಂದ್ರತೀರ್ಥ ಶ್ರೀಪಾದಂಗಳವರು 'ರಾಜರ ಋಜುತ್ವ ಪ್ರತಿಪಾದಕರ ಸೇನಾನಿಯಾದ' ವ್ಯಾಸದಾಸ ಸಾಹಿತ್ಯದಲ್ಲಿ ಅಪಾರವಾದ ಪರಿಣತಿಯನ್ನು ಪಡೆದಿದ್ದ ಜಂಬುಖಂಡಿ ವಾದಿರಾಜಾಚಾರ್ಯರಿಗೆ ಋಜುತ್ವ ಪ್ರತಿಪಾದನಾ ಪ್ರಸಂಗದಲ್ಲಿ ಕೊಟ್ಟ ನಿರೂಪವೇ ಸಾಕು. ಉತ್ತಮಚೇತನರಾದ ಜಂಬುಖಂಡಿ ವಾದಿರಾಜಾಚಾರ್ಯರ ರೋಚಕ ಜೀವನ, ಸಾಧನೆ ಹಾಗೂ ಮಹಿಮೆಗಳನ್ನು ಸಂಗ್ರಹಿಸಿ ನಮ್ಮ ಪ್ರಿಯಶಿಷ್ಯರಾದ ಬೆಂಗಳೂರಿನ ಜಯಸಿಂಹ ಅವರು **'ಜಂಬುಖಂಡಿಯ ಸಿಂಹ'** ಎನ್ನುವ ಕೃತಿಯನ್ನು ರಚಿಸಿ ಸಜ್ಜನವೃಂದಕ್ಕೆ ಮಹೋಪಕಾರ ವನ್ನು ಮಾಡಿದ್ದಾರೆ. ಈಗಾಗಲೇ ಹಲವಾರು ಉತ್ತಮ ಕೃತಿಗಳನ್ನು ರಚಿಸಿ ಸ್ತುತ್ಯಾರ್ಹ ಸಾರಸ್ವತ ಸೇವೆ ಮಾಡುತ್ತಿರುವ ಜಯಸಿಂಹ ಅವರ ಈ ಕೃತಿ ವಿಶೇಷ ಜನಮನ್ನಣೆ ಗಳಿಸಲಿ, ಹಾಗೂ ಇದನ್ನು ಶ್ರದ್ಧೆಯಿಂದ ಓದುವ ಸಮಸ್ತ ಭಕ್ತರಿಗೆ ಭಾವಿ ಸಮೀರರಾದ ಶ್ರೀ ವಾದಿರಾಜರ ಅನುಗ್ರಹವಾಗಲಿ ಎಂದು

ಹಾರೈಸುತ್ತಾ ಕೃತಿಕಾರರಾದ ಶ್ರೀಜಯಸಿಂಹ ಇವರಿಗೆ ಇತ್ಯೋಪ್ಯತಿಶಯವಾದ ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಕೊಟ್ಟು ಸಂರಕ್ಷಿಸಲೆಂದು ಅಸ್ಮದುಪಾಸ್ಯ ಶ್ರೀಮೂಲರಘುಪತಿ ವೇದವ್ಯಾಸರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

29-09-2007 **ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು**

## ಶ್ರೀಕೃಷ್ಣಾಪುರ ಮಠ

ಉಡುಪಿ, ದಕ್ಷಿಣ ಕನ್ನಡ

- - - - - -

# ಪರಮಪೂಜ್ಯ
# ಶ್ರೀ ಶ್ರೀ ವಿದ್ಯಾಸಾಗರತೀರ್ಥ ಶ್ರೀಪಾದಂಗಳವರ
# ಅನುಗ್ರಹ ಸಂದೇಶ

**ವಾ**ಯ್ವಂಶಸಂಭೂತರಾದ ಶ್ರೀಮನ್ಮಧ್ವಾಚಾರ್ಯರಂತೆ ಲಾತವ್ಯ ಋಜುಪುಂಗವರಾದ ಶ್ರೀವಾದಿರಾಜ ಗುರುವರೇಣ್ಯರೂ ಸಹ ಸ್ವೋತ್ತಮರೆಲ್ಲರಿಗೂ ಮುಖ್ಯಗುರುಗಳಾಗಿದ್ದಾರೆ. ವಾದಿರಾಜರ ಅವತಾರದ ಹಿನ್ನೆಲೆ, ಅಮಾನುಷ ಹಾಗೂ ಅದ್ಭುತವಾದ ಜೀವನಕ್ರಮ, ಲೋಕೋತ್ತರಮಹಿಮೆ, ಶತಾಧಿಕಗ್ರಂಥ ರಚನೆ, ತ್ರಿವಿಕ್ರಮೋಪಾಸನೆ, ಸಶರೀರವೃಂದಾವನಪ್ರವೇಶ, ಪಂಚವೃಂದಾವನ, ಬೃಹತ್ ಸ್ವಾಪ್ನಕೃತಿಮುಖೇನ ಸ್ವಸ್ವರೂಪ ಸ್ವವೃಂದಾವನ ಮಹಿಮಾನುವರ್ಣನೆ ಮುಂತಾದ ವಿಲಕ್ಷಣತ್ವ ಸೂಚಕ ಅನೇಕ ಅಂಶಗಳನ್ನು ಪರಿಶೀಲಿಸಿದಾಗ ಅವರು ಭಾವಿಸಮೀರರೆಂಬು ದರಲ್ಲಿ ಅನುಮಾನವಿರುವುದಿಲ್ಲ. ಆದರೂ ಈ ವಿಷಯದಲ್ಲಿ ಗೊಂದಲವುಂಟಾದಾಗ ಹಲವಾರು ಜ್ಞಾನಿವರೇಣ್ಯರು ಅವತರಿಸಿ ಶ್ರುತಿ, ಸ್ಮೃತಿ, ಪುರಾಣ ಹಾಗೂ ಅಪರೋಕ್ಷೀಕೃತ ಪ್ರಮಾಣೋಕ್ತಿ ಗಳನ್ನು ಸಾದರಪಡಿಸಿ ಶ್ರೀವಾದಿರಾಜರನ್ನು ಲಾತವ್ಯನಾಮಕ ಋಜುಗಳೆಂದು ಹಾಗೆಯೇ ಶ್ರೀಮಧ್ವಾಚಾರ್ಯರ

ಯುವರಾಜರಾಗಿ ಮೆರೆದವರೆಂದು ಪ್ರತಿಪಾದಿಸಿದ್ದಾರೆ. ಅಂತಹವರಲ್ಲಿ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರದು ಅಗ್ರಸ್ಥಾನ. 'ರಾಜರ ಋಜುತ್ವಪ್ರತಿಪಾದಕರ ಸೇನಾನಿ' ಎಂದೇ ಖ್ಯಾತರಾದ ಜಂಬುಖಂಡಿ ವಾದಿರಾಜಾಚಾರ್ಯರು ಶತಾಧಿಕ ಪ್ರಮಾಣಗಳನ್ನು ನೀಡಿ ರಾಜರ ಋಜುಮಹಿಮೆಗಳನ್ನು ಎತ್ತಿ ಹಿಡಿದಿದ್ದಾರೆ.

ಇಷ್ಟೇ ಅಲ್ಲದೇ ನಮ್ಮ ಪರಮೇಷ್ಠಿ ಗುರುಗಳಾದ ಶ್ರೀ ಶ್ರೀವಿದ್ಯಾಧೀಶರ ಅಚ್ಚುಮೆಚ್ಚಿನ ಅಂತೇವಾಸಿಯಾಗಿ ಅಪಾರ ಜ್ಞಾನವನ್ನು ಅನುಗ್ರಹಪೂರ್ವಕ ಸಂಪಾದಿಸಿದ್ದು ನಮ್ಮ ಮಠದ ಪರಂಪರೆಯ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಇಂತಹ ಮಹಾನುಭಾವರ ರೋಚಕ ಜೀವನವೃತ್ತಾಂತ ಹಾಗೂ ಮಹಿಮೆಗಳನ್ನು ಬಿಂಬಿಸುವ **'ಜಂಬುಖಂಡಿಯ ಸಿಂಹ'** ಎಂಬ ಕೃತಿಯನ್ನು ಬೆಂಗಳೂರಿನ ಜಯಸಿಂಹ ಅವರು ರಚಿಸಿರುತ್ತಾರೆ. ಇದು ಶ್ಲಾಘನೀಯವಾದ ಕಾರ್ಯವಾಗಿದೆ. ಕೃತಿಕಾರರಾದ ಜಯಸಿಂಹ ಅವರಿಗೆ ಇತ್ಯೋಪ್ಯತಿಶಯವಾದ ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಕೊಟ್ಟು ರಕ್ಷಿಸಲೆಂದೂ ಮತ್ತು ಅವರ ಈ ಪ್ರಯತ್ನ ಸಜ್ಜನ ಭಕ್ತರೆಲ್ಲರಿಗೂ ಸಾತ್ವಿಕಶ್ರದ್ಧೆ ಮತ್ತು ತತ್ತ್ವದೀಕ್ಷೆಗಳನ್ನು ಕರುಣಿಸುವಲ್ಲಿ ಯಶಸ್ವಿಯಾಗಲೆಂದು ಅಸ್ಮದುಪಾಸ್ಯ ಗುರುಮಧ್ವವರದ ಕಾಲೀಯಮರ್ದನ ಶ್ರೀಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

13–10–2007 **ಶ್ರೀ ವಿದ್ಯಾಸಾಗರತೀರ್ಥ ಶ್ರೀಪಾದಂಗಳವರು**

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
**ಶ್ರೀಪದ್ಮನಾಭತೀರ್ಥಪರಂಪರಾ ಶ್ರೀಪಾದರಾಜಮಠ,**
ಮುಳಬಾಗಿಲು.

------

# ಪರಮಪೂಜ್ಯ
# ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರ
# ಅನುಗ್ರಹ ಸಂದೇಶ

**ಹ**ತ್ತೊಂಭತ್ತನೆಯ ಶತಮಾನದಲ್ಲಿ ಜೀವಿಸಿದ್ದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರೆಂಬುವರು ವ್ಯಾಸ-ದಾಸ ಸಾಹಿತ್ಯಗಳಲ್ಲಿ ಅಪರಿಮಿತವಾದ ಪ್ರಭುತ್ವ ಪಡೆದಿದ್ದು, ಹಲವಾರು ಪ್ರೌಢಕೃತಿಗಳನ್ನು ಉಭಯ ಭಾಷೆಯಲ್ಲಿಯೂ ರಚಿಸಿರುತ್ತಾರೆ. ಹರಿಕಥಾಮೃತಸಾರಕ್ಕೆ ಆಚಾರ್ಯರು ರಚಿಸಿರುವ 'ಶ್ರೀವ್ಯಾಸದಾಸ-ಸಿದ್ಧಾಂತಕೌಮುದೀ' ಎಂಬ ಸಂಸ್ಕೃತ ವ್ಯಾಖ್ಯಾನ ಅವರಿಗಿದ್ದ ಉಭಯಭಾಷಾ ಪ್ರೌಢಿಮೆ ಮತ್ತು ಪ್ರಮೇಯಜ್ಞತೆಗೆ ಸಾಕ್ಷಿಯಾಗಿದೆ. ಇದಲ್ಲದೇ ಇನ್ನೂ ಹಲವಾರು ಉತ್ತಮ ಕೃತಿಗಳನ್ನು ರಚಿಸಿರುವ ಜಂಬುಖಂಡಿ ಆಚಾರ್ಯರು ಮಾಡಿರುವ ಮತ್ತೊಂದು ಮಹತ್ವದ ಕಾರ್ಯವೆಂದರೆ 'ಶ್ರೀ ವಾದಿರಾಜರ ಋಜುತ್ವೋತ್ಕರ್ಷ'ವನ್ನು ಶ್ರುತಿ, ಸ್ಮೃತಿ, ಪುರಾಣ, ಆರ್ಯೋಕ್ತಿಗಳ ಆಧಾರಗಳನ್ನು ನೀಡಿ ಸಮರ್ಥಿಸಿರುವುದು.

ಇದಕ್ಕಾಗಿ ಅವರು ರಚಿಸಿರುವ 'ಋಜುತ್ವವಿರೋಧಿ ಕಪೋಲಚಪೇಟಿಕಾ, ಋಜುತ್ವವಿರೋಧಿ ಪರಿಮರ್ದನ' ಮುಂತಾದ ಗ್ರಂಥಗಳು ಅವರ ಋಜುದೀಕ್ಷೆಯನ್ನು ಧ್ವನಿಪೂರ್ಣವಾಗಿ ಬಿಂಬಿಸುತ್ತವೆ. ಕೇವಲ 54 ವರ್ಷಗಳ ಅಲ್ಪಕಾಲ ಜೀವಿಸಿದ್ದ ಅವರು ತಮ್ಮ ಜೀವಿತದಲ್ಲಿ ತಮ್ಮ ಮಠದ ಬಹಿಷ್ಕಾರವೂ ಸೇರಿದಂತೆ ಹಲವಾರು ಕಠಿಣತರ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆದರೆ ಅವರು ಅದ್ಯಾವುದಕ್ಕೂ ಬೆದರದೆ ಸತ್ಯಾನ್ವೇಷಣೆಯ ಬೆಳಕಿನಲ್ಲಿ ತಮ್ಮ ಉದ್ದೇಶ ಕಾರ್ಯವನ್ನು ಸಾಧಿಸಿ ಸಾರಸ್ವತಲೋಕಕ್ಕೆ ಅನಲ್ಪ ಕೊಡುಗೆಯನ್ನು ನೀಡಿದರು.

ಇಂತಹ ಧೀರೋದಾತ್ತ ವ್ಯಕ್ತಿಯನ್ನು ಕುರಿತು ನಮಗೆ ಪ್ರಿಯರಾದ ಶ್ರೀಜಯಸಿಂಹ ಅವರು **'ಜಂಬುಖಂಡಿಯ ಸಿಂಹ'** ಎಂಬ ಕೃತಿಯನ್ನು ರಚಿಸಿ ವಾದಿರಾಜಾಚಾರ್ಯರ ಜೀವನ, ಸಾಧನೆ, ಹಾಗೂ ಮಹಿಮೆಗಳ ವಿವರಗಳನ್ನು ಪರಿಣಾಮಕಾರಿಯಾಗಿ ನೀಡಿದ್ದಾರೆ. ಜಯಸಿಂಹ ಅವರ ಈ ಕೃತಿಯ ಶಿರೋನಾಮೆಯು ಅರ್ಥಗರ್ಭಿತವಾಗಿದೆ. ಸಂಖ್ಯಾ ಶಾಸ್ತ್ರದಿಂದ ವಿಚಾರಮಾಡಲಾಗಿ (ಜಂಬುಖಂಡಿಯ)+(ಸಿಂಹ) ಈ ಎರಡೂ ಪದಗಳಿಂದ ಮೊದಲನೆಯ ಪದವು 9ನೇ ಸಂಖ್ಯೆಯಾಗಿಯೂ, ಸಿಂಹ ಶಬ್ದವು 4ನೆಯ ಸಂಖ್ಯೆ ಯಾಗಿಯೂ ಇದೆ. ಇದರ ಅಂತರಾಳವು ಈ ಕೃತಿಯನ್ನು ಯಾರು ಓದುತ್ತಾರೋ ಅವರಿಗೆ ನವವಿಧಭಕ್ತಿಯು ಪ್ರಾಪ್ತವಾಗಿ ಅದರ ಫಲವಾಗಿ ಚತುರ್ವಿಧಪುರುಷಾರ್ಥವು ಲಭಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ಪರಮಾತ್ಮನ ವಿಶೇಷ ವಿಭೂತಿ

ರೂಪಗಳು ಮೃಗಗಳಲ್ಲಿ 'ಸಿಂಹ'ದಲ್ಲಿರುವ ವಿಭೂತಿ ರೂಪವು – ಮೋಕ್ಷಕ್ಕೆ ಕಾರಣ ಎಂದು ತಿಳಿಸಲು ಹರ್ಷಿಸುತ್ತೇವೆ. ಶ್ರೀಜಯಸಿಂಹ ಅವರು ಈಗಾಗಲೇ ಅನೇಕ ಕೃತಿಗಳನ್ನು ರಚಿಸಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿರುತ್ತಾರೆ. ಇಂತಹ ಕೃತಿಗಳನ್ನು ಬರೆಯುವ ಹವ್ಯಾಸವನ್ನು ಅವರು ಇದೇ ರೀತಿ ಮುಂದುವರೆಸಿಕೊಂಡು ಬರಲೆಂದು ನಮ್ಮ ಉಪಾಸ್ಯ ಮೂರ್ತಿ ಶ್ರೀಹಯವದನ ರಂಗವಿಠಲಾತ್ಮಕ ಗೋಪೀನಾಥ ದೇವರಲ್ಲಿ ಪ್ರಾರ್ಥಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

ಬೆಂಗಳೂರು ಮೊಕ್ಕಾಂ **ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು**
2–10–2007

ಶ್ರೀಮದ್ವ್ಯಾಸರಾಜ ಸಂಸ್ಥಾನಮ್
(ಕುಂದಾಪುರ)

------

# ಪರಮಪೂಜ್ಯ
# ಶ್ರೀ ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರ
# ಅನುಗ್ರಹ ಸಂದೇಶ

**ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟಫಲಪ್ರದಾ ।**
**ತಥಾ ಕಲೌ ವಾದಿರಾಜಶ್ರೀಪಾದೋಽಭೀಷ್ಟದಃ ಸತಾಮ್ ॥**

**ತ**ಪಸ್ಸು, ವಿದ್ಯೆ, ವಿರಕ್ತಿಯೇ ಮೊದಲಾದ ಸಮಸ್ತ ಸದ್ಗುಣಗಳ ಗಣಿಯಾದ ಶ್ರೀವಾದಿರಾಜ ಶ್ರೀಮಚ್ಚರಣರು ತಮ್ಮ ಉಪಾಸ್ಯ-ಮೂರ್ತಿಯಾದ ಹಯಗ್ರೀವ ದೇವರನ್ನು ಸಾಕ್ಷಾತ್ಕರಿಸಿ ಕೊಂಡಿದ್ದ ಮಹಾನುಭಾವರು. ಹೆಸರಿಗೆ ತಕ್ಕ ಹಾಗೆ ವಾದಿರಾಜರೇ ಆಗಿ ಅಹಂಭಾವದಿಂದ ಮತ್ತರಾಗಿದ್ದ ಅನೇಕ ಕುವಾದಿಗಳನ್ನು ವಾದದಲ್ಲಿ ಜಯಿಸಿ ದೇಶದಾದ್ಯಂತ ದ್ವೈತದುಂದುಭಿಯನ್ನು ಸಮರ್ಥವಾಗಿ ಮೊಳಗಿಸಿದವರು. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡಲ್ಲಿಯೂ ನೂರಾರು ಕೃತಿಗಳನ್ನು ರಚಿಸಿ ವ್ಯಾಸದಾಸಸಾಹಿತ್ಯಗಳನ್ನು ಸಮೃದ್ಧಗೊಳಿಸಿ ದರು. ಎಲ್ಲಕ್ಕಿಂತಲೂ ಹೆಚ್ಚಾಗಿ ಮೂವತ್ತೆರಡು ಲಕ್ಷಣಗಳುಳ್ಳ ವಾಯ್ವವತಾರ ಶ್ರೀಮನ್ಮಧ್ವಾಚಾರ್ಯರ ಪ್ರಭಾವ ಪೂರ್ಣ

ವ್ಯಕ್ತಿತ್ವವನ್ನು ಕ್ಷಣಕ್ಷಣಕ್ಕೂ ನೆನಪಿಸುವಂತೆ ಮಹಿಮಾನ್ವಿತ ಬಾಳ್ವೆಯನ್ನು ನಡೆಸಿ ಲೋಕೋತ್ತರಸಾಧನೆ ಮಾಡಿದ ಅವತಾರ ಪುರುಷರು. ಹಾಗಾಗಿಯೇ ಅವರು ತಮ್ಮ ಭಕ್ತವೃಂದದಲ್ಲಿ ಭಾವಿಸಮೀರರೆಂದು ಪ್ರಸಿದ್ಧರಾಗಿದ್ದಾರೆ.

ಶ್ರೀಮದ್ವಾದಿರಾಜಪೂಜ್ಯಚರಣರ ಭಾವಿಸಮೀರತ್ವವನ್ನು ಸಮರ್ಥಿಸುವುದಕ್ಕೇ ಅವತರಿಸಿದವರಲ್ಲಿ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಸುಪ್ರಸಿದ್ಧರು. ರಾಜರ ಋಜು ಮಹಿಮೆಗಳು ಬಹುಪ್ರಮಾಣ ಪ್ರಮಿತವೆಂದು ಸ್ಥಾಪಿಸಲು ಶ್ರುತಿ, ಸ್ಮೃತಿ, ಪುರಾಣೋಕ್ತಿಗಳನ್ನು ಉದಾಹರಿಸಿ ಅವರು ಹಲವಾರು ಪ್ರೌಢ ಗ್ರಂಥಗಳನ್ನು ಸಹ ರಚಿಸಿದರು. ವಾದಿರಾಜಾಚಾರ್ಯರ ಮಹಿಮೆ ಬಹು ರೋಚಕವಾದದ್ದು. ಇಂತಹ ಮಹಾಮಹಿಮರನ್ನು ಕುರಿತು ನಮಗೆ ಪ್ರಿಯರಾದ ಶ್ರೀಜಯಸಿಂಹ ಅವರು **'ಜಂಬುಖಂಡಿಯ ಸಿಂಹ'** ಎಂಬ ಕೃತಿಯನ್ನು ಬರೆದಿರುತ್ತಾರೆ. ಹರಿವಾಯು ಗುರುಗಳ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದ ವಾದಿರಾಜಾಚಾರ್ಯರ ಚರಿತ್ರೆ ಸಜ್ಜನರಿಗೆ ಸ್ಫೂರ್ತಿಪ್ರದವೂ, ಸನ್ಮಾರ್ಗದರ್ಶಕವೂ ಆಗಿದೆ. ಈ ಕೃತಿಯನ್ನು ಬರೆದಿರುವ ಶ್ರೀಜಯಸಿಂಹ ಅವರಿಗೆ ಉತ್ತಮ ಆಯುರಾರೋಗ್ಯ ಭಾಗ್ಯ ಹಾಗೂ ಜ್ಞಾನಭಕ್ತಿ ವೈರಾಗ್ಯಗಳನ್ನು ಕರುಣಿಸಲೆಂದು ನಮ್ಮ ಉಪಾಸ್ಯಮೂರ್ತಿ ಶ್ರೀವ್ಯಾಸಮುನಿವರದ ಶ್ರೀರುಕ್ಮಿಣೀ ಸತ್ಯಭಾಮಾಸಮೇತ ವೇಣುಗೋಪಾಲದೇವರಲ್ಲಿ ಪ್ರಾರ್ಥಿಸುತ್ತೇವೆ.

ಬೆಂಗಳೂರು — ಇತ್ಯನೇಕ ನಾರಾಯಣಸ್ಮರಣೆಗಳು

23–10–2007 — **ಶ್ರೀಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು**

## ಶ್ರೀಮನ್ಮಾಧವತೀರ್ಥ ಮೂಲಸಂಸ್ಥಾನ

ಶ್ರೀಮಾಧವಪುರ, ತಂಬೀಹಳ್ಳಿ, ಕೋಲಾರ ಜಿಲ್ಲೆ.

------

# ಪರಮಪೂಜ್ಯ ಶ್ರೀ ಶ್ರೀ ವಿದ್ಯಾಸಾಗರ ಮಾಧವತೀರ್ಥ ಶ್ರೀಪಾದಂಗಳವರ

## ಅನುಗ್ರಹ ಸಂದೇಶ

**ಅ**ನ್ಯೂನಾತಿರಿಕ್ತವಾಗಿ ಒಂದು ವಿಷಯದ ನಿಜ ಸ್ವರೂಪವನ್ನು ನಿರ್ಣಯ ಮಾಡುವಾಗ ವಾದೋಪವಾದಗಳೂ–ವಾಕ್ಯಾರ್ಥ ಗಳೂ ಅವಸರವೇ. ಇವೆಲ್ಲವೂ ಜ್ಞಾತುಮಿಚ್ಛಾಮರ್ಯಾದೆಗೆ ಒಳಪಟ್ಟು ನಡೆದರೆ ಶೋಭೆ, ಪ್ರಜ್ಞಾವಾದ ಅರ್ಥಾತ್ ಸ್ವಮನೀಷೋತ್ಥ ಕಲ್ಪನೆಗಳಿಂದ ಮಾಡುವ ಹಠವಾದ ಬಹುವಿಧ ವಾದ ವಿಕಾರಗಳಿಗೆ ಕಾರಣವಾಗುತ್ತದೆ. ದ್ವೇಷಾಸೂಯೆಗಳು ಹೊಡೆದಾಟ, ಬಡಿದಾಟಗಳವರೆಗೂ ಹೋಗಬಹುದು.

ಅಪರೋಕ್ಷೀಕೃತಹಯಾಸ್ಯರಾದ ಶ್ರೀಮದ್ವಾದಿರಾಜ ಶ್ರೀಮಚ್ಚರಣರು ಜಗನ್ಮಾನ್ಯ ಯತಿವರ್ಯರು. ಅಂದಿನ ರಾಜಾಭಿಧ ಯತಿತ್ರಯರಲ್ಲಿ ಸೇರಿದವರು.

ಇವರ ಗ್ರಂಥಗಳ ಅಧ್ಯಯನ ಮಾಡುವಾಗ ಇವರ ಅತಿ ಮಾನುಷತ್ವ ಮನೀಷಾತೀತತತ್ವ ದರ್ಶನಗಳು ಕಂಡುಬರುವವು. ಭೂಗೋಳ ವರ್ಣನೆ, ತಾತ್ಪರ್ಯ ನಿರ್ಣಯ, ಭಾವ ಪ್ರಕಾಶಿಕಾ ವ್ಯಾಖ್ಯಾನ, ಭಾರತದ ಲಕ್ಷಾಲಂಕಾರ ಇತ್ಯಾದಿಗಳಲ್ಲಿ ಯಾರೂ

ಊಹಿಸಲೂ ಸಾಧ್ಯವಾಗದ ಅತಿಲೌಕಿಕ ದರ್ಶನದ ವಿವರಣೆಗಳು ನೋಡಿದಾಗ ಇವರ ವಿಶ್ವವ್ಯಾಪ್ತದರ್ಶನ ಹಾಗೂ ವ್ಯಾಪ್ತೋಪಾಸನೆಯ ಗುರುತುಗಳೂ ಅಚ್ಚರಿಗೊಳಿಸುತ್ತವೆ. ಸಮ್ಯಗ್ದೃಷ್ಟಿಯುಳ್ಳವರಿಗೆ ಕಣ್ಣಿಗೆ ಕಾಣುವ ಇವರ ಪಾಂಚಭೌತಿಕ ಅಧಿಷ್ಠಾನ ಮರೆಯಾಗಿ ಮಹೋಜ್ಜ್ವಲ ದಿವ್ಯಮೂರ್ತಿಯ ತೇಜೋರೂಪ ದರ್ಶನವಾಗುತ್ತೆ, ದೊಡ್ಡ ವಿಭೂತಿರೂಪ ಅದು.

ಇಷ್ಟೇ ಮಹಿಮೆ ಸಾಲದೇ?

ಕ್ಷೇತ್ರಜ್ಞನಾದ ಶ್ರೀಹರಿಯನ್ನು ಬಿಟ್ಟರೆ ಸ್ವರೂಪನಿರ್ಣಯ ಮಾಡಲು ನಾವು ಯಾರು? ನಮಗೆ ಆ ಸಾಮರ್ಥ್ಯ ಉಂಟೇ? ಶ್ರೀವಾದಿರಾಜ ತೀರ್ಥರ ಸ್ವರೂಪ ನಿರೂಪಣೆಯ ಕಾಳಗ 1879ರಿಂದ ಇಂದಿನವರೆಗೂ ಸಾಗಿಬಂದಿದೆ. ಅನೇಕ ವಿಕೃತ ಸನ್ನಿವೇಶಗಳನ್ನು ಸೃಷ್ಟಿ ಮಾಡಿದೆ. ವಿದ್ವಾಂಸರೂ ಸಹಿತ ಬೀದಿ ಜಗಳಕ್ಕೆ ಇಳಿಯುವರೆಂಬಷ್ಟು ವಿಕೃತವಾಗಿದೆ. ಒಂದು ಆರಾಧ್ಯ ವಿಷಯದಲ್ಲಿ ಎಲ್ಲರ ದೃಷ್ಟಿ, ಹಾಗೂ ಆರಾಧನೆಗಳು ಒಂದೇ ರೀತಿಯಲ್ಲಿ ಇರಬೇಕಾಗಿಲ್ಲ. ಯಾರ ಯಾರ ಸ್ವರೂಪ ಸ್ವಭಾವಗಳು ಹೇಗೋ ಹಾಗೆ ಆರಾಧನೆ, ಸಾಧನೆ. ಭಗವಂತ ಎಷ್ಟು ಮಾಡಿಸಬೇಕೋ ಅಷ್ಟೇ ಮಾಡಿಸುವವನಾದಾಗ ನಮ್ಮ ಒತ್ತಾಯಗಳು ಸರಿಯೇ?

ಶ್ರೀಮದ್ವಾದಿರಾಜರ ಋಜುತ್ವ ಸ್ಥಾಪನೆಗೆ ಮೂಲಸ್ತಂಭ ದಂತಿರುವ ಗ್ರಂಥ "ಸ್ವಾಪ್ನವೃಂದಾವನಾಖ್ಯಾನ".

'ವೇದನಿಧ್ಯಾಖ್ಯಯತಿನಾ ವಾದಿರಾಜೇನ ಚೋದಿತಮ್ ।
ಸ್ವಾಪ್ನವೃಂದಾವನಾಖ್ಯಾನಂ ಲಿಖಿತಂ ಪ್ರೀತಯೇ ಗುರೋಃ ॥'

ಶ್ರೀಮದ್ವಾದಿರಾಜರಿಂದ ಪ್ರಚೋದಿತರಾಗಿ ವೇದನಿಧಿಗಳೆಂಬ ಯತಿಗಳು ಇದರ ಲೇಖಕರಾದರೆಂದು ತಿಳಿಯುವುದು. ಮೂರು-ನೂರು ವರುಷಗಳಾದ ಮೇಲೆ ಸ್ವಾಪ್ನವೃಂದಾವನಾಖ್ಯಾನ ಬೆಳಕಿಗೆ ಬಂದಿತು. ಶ್ರೀಮದ್ವಾದಿರಾಜರ ಈ ಮಹತ್ಸೇವೆಯನ್ನು ಮಾಡಿದವರು ಶ್ರೀಜಯಸಿಂಹರು ರಚಿಸಿದ ಈ **'ಜಂಬುಖಂಡಿಯ ಸಿಂಹ'** ಗ್ರಂಥನಾಯಕರಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು.

ರಾಜರ ಋಜುತ್ವ ನಿರೂಪಣೆಗೆ ಸುಸಂಸ್ಕೃತ ರೀತಿಯಲ್ಲಿ ವಾದಗಳನ್ನು ಮಂಡಿಸಿ ತಮ್ಮ ಇಡೀ ಜೀವನವನ್ನೇ ಈ ಮಹತ್ಸೇವೆಗೆ ಮುಡುಪಾಗಿಟ್ಟ ಗುರುಭಕ್ತರು ವಾದಿರಾಜಾಚಾರ್ಯರು. ವಿದ್ವತ್ತಿನಿಂದ ತಮ್ಮ ಮಠದ ಹೆಮ್ಮೆಗೆ ಕಾರಣರಾದ ವಾದಿರಾಜಾಚಾರ್ಯರು ರಾಜರ ಋಜುತ್ವ ಸ್ಥಾಪನೆಯ ದೀಕ್ಷೆಯಿಂದಾಗಿ ತಮ್ಮ ಮಠದ ಬಹಿಷ್ಕಾರಕ್ಕೆ ಗುರಿಯಾದರೆಂದು ಕೇಳಿದ್ದೇವೆ. ಇವೆಲ್ಲವೂ ಬಹು ಕುತೂಹಲಜನಕವಾದ ಸನ್ನಿವೇಶಗಳು.

'ಪರಿಮಳ ಗೆಳೆಯರ ಬಳಗ'ದ ಜಯಸಿಂಹರು ಜನಪ್ರಿಯ ಬರಹಗಾರರು. ಈಗಾಗಲೇ 'ಶ್ರೀವಿಜಯೀಂದ್ರವೈಭವಾ'ದಿ ಗ್ರಂಥಗಳನ್ನು ರಚನೆ ಮಾಡಿ ಜನರ ಮೆಚ್ಚುಗೆಗೆ ಪಾತ್ರರಾದವರು.

ಏಕದೇಶವಿವಾದಗ್ರಸ್ತ ವಿದ್ವಾಂಸನಾಯಕರಾದ (partially controversial scholar hero) ಜಂಬುಖಂಡಿ ವಾದಿರಾಜಾಚಾರ್ಯರ ಇತಿಹಾಸವನ್ನು ಕುತೂಹಲದಿಂದ ನಿರೀಕ್ಷಿಸುವ ಪಾಠಕರಿಗೆ ತಮ್ಮ ರಚನಾಕೌಶಲದಿಂದ ತೃಪ್ತಿಪಡಿಸುವರೆಂಬ ವಿಶ್ವಾಸ ನಮಗೆ ಇದೆ.

ಜಯಸಿಂಹರು ಲೌಕಿಕ ವಿದ್ಯೆಯಲ್ಲಿಯೂ, ವೈದಿಕವಿದ್ಯೆಯಲ್ಲಿಯೂ ಸಾಕಷ್ಟು ಪ್ರವೇಶವಿರುವ ಬರಹಗಾರರು. ಇಂದಿನ ಯುವಜನಾಂಗಕ್ಕೆ ಇವರ ರಚನೆಗಳು ಸನ್ಮಾರ್ಗದರ್ಶಕಗಳಾಗಲೆಂದು ನಮ್ಮ ಉಪಾಸ್ಯ ಮೂರ್ತಿ ಸೀತಾಪತಿ ವೀರರಾಮದೇವರಲ್ಲಿ ಪ್ರಾರ್ಥಿಸುತ್ತಾ ಮಾಡುವ,

ನಾರಾಯಣಸ್ಮರಣೆಗಳು

**ಶ್ರೀವಿದ್ಯಾಸಾಗರಮಾಧವತೀರ್ಥ ಶ್ರೀಪಾದಂಗಳವರು**

09–10–2007

॥ ಶ್ರೀಮೂಲರಾಮೋ ವಿಜಯತೇ ॥

# ಪರಮಪೂಜ್ಯ
# ಶ್ರೀಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರ
# ಅನುಗ್ರಹ ಸಂದೇಶ

ಶ್ರೀಮದ್ವಾದಿರಾಜರನ್ನು ಭಾವಿ ಶ್ರೀಮದಾಚಾರ್ಯರೆಂದು ಸಾಧಿಸಿದ ಈ ಕಥಾನಾಯಕರು 'ವಾದಿರಾಜಾಚಾರ್ಯ'ರೆಂಬ ಸಾರ್ಥಕ ನಾಮಧೇಯವುಳ್ಳವರಾಗಿದ್ದಾರೆ. ವಿರೋಧಿಗಳ ಜಂಭವನ್ನು ಖಂಡಿಸಿದ ಇವರು 'ಜಂಬುಖಂಡಿ ಸಿಂಹ' ಎಂದೇ ಖ್ಯಾತರಾಗಿದ್ದಾರೆ. ಈ ಸಿಂಹದ ಪರಿಚಯವನ್ನು ಜಯಸಿಂಹ ಮಾಡಿಕೊಡುತ್ತಿರುವುದು ಔಚಿತ್ಯಪೂರ್ಣವೇ ಆಗಿದೆ. ಸಿಂಹಕ್ಕೆ 'ಪಂಚಾನನ' ಎಂದು ಮತ್ತೊಂದು ಹೆಸರು. ಅದು ಐದು ದಿಕ್ಕಿನಲ್ಲಿ ಮುಖ ಮಾಡಿ ಸಂಚರಿಸುತ್ತದೆ. ಈ ಸಿಂಹಕ್ಕೆ 1. ಶ್ರೀವಾದಿರಾಜರ ಋಜುತ್ವ, 2. ಆಚಾರ್ಯರ ಸರ್ವಮೂಲಗ್ರಂಥಗಳು, 3. ಹರಿಕಥಾಮೃತಸಾರ, 4. ಹರಿವಾಯುಗಳ ಆರಾಧನೆ ಮತ್ತು 5. ತಮ್ಮ ವಿದ್ಯಾ ಗುರುಗಳ ಸೇವೆ ಹೀಗೆ ಐದು ಮುಖಗಳು. ಈ ಪಂಚ ಆನನಗಳನ್ನು ಸಾತ್ತ್ವಿಕ ಪ್ರಪಂಚಕ್ಕೆ ತೋರಿಸಿ ಅಜ್ಞಾನ ಪರಿಹರಿಸುವ ಮೂಲಕ ಜಯಸಿಂಹ ಅವರು ಕೂಡ ಸಾರ್ಥಕ ನಾಮಧೇಯರೇ ಆಗಿದ್ದಾರೆ.

ಈ ಕೃತಿಯಿಂದ ಓದುಗರಲ್ಲಿ ಗುರುಭಕ್ತಿ, ತತ್ತ್ವನಿಷ್ಠೆ, ಧೈರ್ಯ ಸ್ಥೈರ್ಯಾದಿಗಳು ಅಭಿವೃದ್ಧಿಯಾಗಿ ಲೇಖಕರ ಪ್ರಯತ್ನ ಸಾರ್ಥಕವಾಗಲೆಂದು ಶ್ರೀಹರಿವಾಯು ಗುರುಗಳಲ್ಲಿ ಪ್ರಾರ್ಥಿಸುತ್ತೇವೆ.

ಬೆಂಗಳೂರು — ಇತಿ ನಾರಾಯಣ ಸ್ಮರಣೆಗಳು

8 ಅಕ್ಟೋಬರ್ 2007 — ಶ್ರೀಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರು.

## Justice M.N. VENKATACHALAIAH

Former Chief Justice of India

# FOREWORD

I am happy to subscribe this foreword to the eminently readable compilation of Sri Jayasimha on the life and times of one of the great scholars and mystics in the Dvaita Vedanta tradition, Sri Jambukhandi Vadirajacharya. The earlier writings of Sri Jayasimha, presented to readers, the life and works of great mystics and Jnanis', are simple and elegant in style. He has the art and felicity of kinding in the discerning reader the message of the great saints. The success of his earlier publications bear ample testimony to his sincerity and dedication.

The present work **"LION OF JAMBUKHANDI"** deals with the life of a profound and charismatic mystic in the Madhwa's lineage. He was an ardent devotee of the great spiritual colossus Sri Vadiraja Swami - the great saint, scholar, savant and administrator of unparalleled distinction. Sri Vadiraja's very name evokes in the heart of the discerning spiritual aspirants, an emotion, the Bhakti and Reverence that can take them along the path of liberation. The great

Vadiraja Swami (1480-1600) lived for hundred and twenty years and adorned and sanctified everything he touched. His life and times mark, perhaps the most significant era in the history of Dvaita darshana.

Sri Jambukhandi Vadirajacharya, in a short-span of fifty four years of his life, spread the light of Dvaita vedanta and was an eminent and powerful votary of the faith and legend of the RJUTVA of the saint Vadiraja. This drew Sri Jamukhandi Vadirajacharya into the center of many debates. The lives of the great Jnani's are inscrutable to us - the ordinary mortals.

Sri Jayasimha's work unfolds the life and times of the great mystic. The miracles attributed to this extraordinary phenomenon that Sri Jambukhandi Vadirajacharya was, are breath-taking array of spiritual exploits. The reading of this saint's life as presented by Sri Jayasimha, will indeed, be a rewarding and elevating experience.

BANGALORE **M.N. VENKATACHALAIAH**

22nd October 2007

# ಬಿನ್ನಹ

ಶ್ರೀಮದ್ವಾದಿರಾಜ ಪೂಜ್ಯಚರಣರ ಅಂತರಂಗ ಭಕ್ತರಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ವಿಷಯ ನನಗೆ ತಿಳಿದಿದ್ದು ನನ್ನ ಎಳೆಹರೆಯಲ್ಲಿಯೇ. ಮೈಸೂರಿನ ಕೀರ್ತಿಶೇಷ ಶ್ರೀಗುರುಗೋವಿಂದವಿಠಲದಾಸರು ಬರೆದಿರುವ 'ಹರಿಭಕ್ತ ವಿಜಯ ಭಾಗ–1'ರಲ್ಲಿ ಪ್ರಕಟವಾದ ಜಂಬುಖಂಡಿ ವಾದಿರಾಜಾಚಾರ್ಯರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಓದಿದಾಗ ನನಗಿನ್ನೂ ಇಪ್ಪತ್ತರ ಪ್ರಾಯ. ವೀರವೈಷ್ಣವ ಚಿಹ್ನೆಗಳನ್ನು ಧರಿಸಿ, ಗಾಂಭೀರ್ಯವೇ ಮೂರ್ತಿವೆತ್ತಂತೆ ಧೀರಗತ್ತಿನ ಪ್ರಸನ್ನಭಂಗಿಯಲ್ಲಿ, ಸಿಂಹಾಸನದಂತಹ ಕುರ್ಚಿಯ ಮೇಲೆ ಕುಳಿತಿದ್ದ ಅವರ ಭಾವಚಿತ್ರವೂ ಆ ಪುಸ್ತಕದಲ್ಲಿ ಪ್ರಕಟವಾಗಿತ್ತು. ತುರುಷ್ಕರಂತೆ ವೇಷಧಾರಿಗಳಾದ ಅವರ ಉಡುಪನ್ನು ನೋಡಿ ಮೊದಲು ವಿಚಿತ್ರವೆನ್ನಿಸಿದರೂ, ಓದುತ್ತಿದ್ದಂತೆ ಭಾವ ಬದಲಾಗತೊಡಗಿತು. ಅವರ ರೋಮಾಂಚಕರ ಪರಮಸಾತ್ತ್ವಿಕ ಜೀವನ ಚರಿತ್ರೆ ನನ್ನ ಮೇಲೆ ಅಗಾಧವಾದ ಪರಿಣಾಮವನ್ನೇ ಬೀರಿತು. ಸಿಂಹದಂತಹ ಅವರ ಧೀರೋದಾತ್ತ ವ್ಯಕ್ತಿತ್ವ, ಎಂತಹವರೂ ಅಸೂಯೆ ಪಡುವಂತಹ ಅವರ ಅನ್ಯಾದೃಶ ಪ್ರತಿಭೆ, ಸತ್ಯಾನ್ವೇಷಣೆಯ ದೃಷ್ಟಿಕೋನ, ತಾವು ನಂಬಿದ್ದ ತತ್ತ್ವಧಾರೆಯಲ್ಲಿ ಅವರಿಗಿದ್ದ ದಾರ್ಢ್ಯ, ಅದನ್ನು ಸಾದರಪಡಿಸುವಲ್ಲಿ ತೋರುತ್ತಿದ್ದ ಜಾಣ್ಮೆ,

ಹೆಜ್ಜೆ ಹೆಜ್ಜೆಗೂ ಎದುರಾದ ಕಷ್ಟಕೋಟಲೆಯನ್ನು ಲೆಕ್ಕಿಸದೆ ವೀರ ಅಭಿಮನ್ಯುವಿನಂತೆ ಏಕಾಂಗಿಯಾಗಿ ಅವರು ನಡೆಸಿದ ಹೋರಾಟ, ತಮ್ಮ ಗುರಿಸಾಧನೆಯಲ್ಲಿ ಅವರಿಗಿದ್ದ ಛಲ, ಪ್ರಖರ ಮನೋಬಲ, ತಮ್ಮ ಆರಾಧ್ಯ ಗುರುಗಳಲ್ಲಿ ಅವರಿಗಿದ್ದ ಅಪರಿಮಿತಭಕ್ತಿ, ಪ್ರಖರ ಋಜುದೀಕ್ಷೆ, ಪ್ರಗಲ್ಭಪಂಡಿತರಾದರೂ ಅವರು ಹೊಂದಿದ್ದ ಹರಿದಾಸ ಹೃದಯ, ಎಂತಹ ಪರಿಸ್ಥಿತಿಯಲ್ಲಿಯೂ ಅನೃತದೊಂದಿಗೆ ರಾಜಿ ಮಾಡಿಕೊಳ್ಳದ ಅವರ ಪ್ರಾಮಾಣಿಕತೆ, ಸುಕೋಮಲ ಸಾಧು ಸ್ವಭಾವ ಮುಂತಾದವುಗಳೆಲ್ಲವೂ ನನ್ನ ಮೇಲೆ ಮೋಡಿಯನ್ನೇ ಮಾಡಿಬಿಟ್ಟವು. ಕೇವಲ 54 ವರ್ಷಗಳ ಕಾಲ ಜೀವಿಸಿದರೂ ಆಚಾರ್ಯರು ಮಾಡಿದ ಸಾಧನೆ, ಪಡೆದ ಸಿದ್ಧಿ ನನ್ನನ್ನು ಚಕಿತಗೊಳಿಸಿದವು. ಬದುಕಿದರೆ ಹೀಗೆ ಬದುಕಬೇಕು! ಎನ್ನಿಸಿಬಿಟ್ಟಿತು.

ಇದಾದ ಮೇಲೆ ಮತ್ತೆ ಅವರ ಮಹಿಮಾನ್ವಿತ ವ್ಯಕ್ತಿತ್ವವನ್ನು ಕಣ್ಣು ತುಂಬಿಸಿಕೊಳ್ಳುವ ಭಾಗ್ಯ ಸಿಕ್ಕಿದ್ದು ಬಳ್ಳಾರಿಯ ವಿದ್ವನ್ಮಣಿ ಡಾ. ಗುರುರಾಜಾಚಾರ್ಯ ಕೃ. ನಿಪ್ಪಾಣಿ ಅವರು ಸಂಪಾದಿಸಿದ 'ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಾಹಾತ್ಮ್ಯ' ಪುಸ್ತಕವನ್ನು ಓದಿದಾಗ. ಮಾಧ್ವ ಸಮಾಜ ಕಂಡ ಅತ್ಯಪೂರ್ವ ಪ್ರಾಮಾಣಿಕ ಸಂಶೋಧಕರಾದ ಡಾ. ಬಿ.ಎನ್.ಕೆ. ಶರ್ಮ ಅವರ ಪ್ರೌಢ ಮುನ್ನುಡಿಯೊಂದಿಗೆ ಪ್ರಕಟವಾದ ಆ ಪುಸ್ತಕದಲ್ಲಿ ನಿಪ್ಪಾಣಿ ಅವರ ತಾತಂದಿರಾದ ಶ್ರೀಷಟ್ಪುರಾಚಾರ್ಯ ವಿರಚಿತ "ಶ್ರೀಸುಧಾಕರಗುರು ಗುಣರತ್ನಮಾಲಾ' ಎಂಬ ಚಾರಿತ್ರಿಕ ಕೃತಿಯೂ ಅಡಕವಾಗಿತ್ತು. ಈ ಎಲ್ಲಾ ಮಾಹಿತಿಗಳು ನನಗೆ

ಜಂಬುಖಂಡಿ ಆಚಾರ್ಯರನ್ನು ಕುರಿತು ಗಂಭೀರ ಅಧ್ಯಯನ ನಡೆಸಲು ಪ್ರೇರೇಪಿಸಿದವು. ಅದರ ಫಲವೇ ಈ "ಜಂಬುಖಂಡಿಯ ಸಿಂಹ". ಇದರ ರಚನೆಗೆ ಮೇಲ್ಕಂಡ ಕೃತಿಗಳು ನನಗೆ ಅಗತ್ಯ ಸ್ಫೂರ್ತಿ ಹಾಗೂ ನೆರವನ್ನು ನೀಡಿವೆ. ಇದನ್ನು ಕೃತಜ್ಞತೆಯಿಂದ ಸ್ಮರಿಸಿ, ಡಾ.ನಿಪ್ಪಾಣಿ ಅವರಿಗೆ ನಮನಗಳನ್ನು ಸಲ್ಲಿಸುತ್ತೇನೆ. ಹಾಗೇ, ಅದೃಶ್ಯರಾಗಿದ್ದರೂ ನನ್ನನ್ನು ಈ ಹೊತ್ತಿಗೂ ಕೈಹಿಡಿದು ಮುನ್ನಡೆಸುತ್ತಿರುವ ನನ್ನ ಪೂಜ್ಯ ಗುರುಗಳಾದ 'ಹರಿದಾಸ ಕುಲತಿಲಕ' ಶ್ರೀಗುರು ಗೋವಿಂದವಿಠಲದಾಸರಿಗೆ ಮತ್ತು ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಬೃಹತ್ಸಂಹಿತಾ ಮತ್ತು ವ್ಯೋಮ ಸಂಹಿತಾ ಗ್ರಂಥಗಳಿಂದ ಉದ್ಧರಿಸಿದ ಶ್ರೀವಾದಿರಾಜರ ಋಜತ್ವ ದ್ಯೋತಕ ಪ್ರಮಾಣವಚನಗಳನ್ನು ಒದಗಿಸಿ ಉಪಕರಿಸಿದ ಪಂಡಿತವರೇಣ್ಯ ಶ್ರೀ ಆತ್ಮಕೂರು ಆನಂದತೀರ್ಥಾಚಾರ್ಯರಿಗೆ ನನ್ನ ಶಿರಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಜಂಬುಖಂಡಿ ವಾದಿರಾಜಾಚಾರ್ಯರಂತಹ ಜ್ಞಾನನಿಧಿಗಳನ್ನು ಕುರಿತು ಬರೆಯುವ ಯೋಗ್ಯತೆ ಎನಗಿನಿತೂ ಇಲ್ಲ. ಇದು ನನಗೆ ತಿಳಿದಿದೆ. ಆದರೂ ಜನ್ಮಸಾರ್ಥಕ್ಯಕ್ಕೋಸ್ಕರ, ಗುರುಪ್ರೀತಿಗೋಸ್ಕರ, ನನ್ನನ್ನು ಚಕಿತಗೊಳಿಸಿದ ಮಹಾತ್ಮರ ಮಂಗಳಗಾಥೆ ನನ್ನಂತಹ ಸಾಮಾನ್ಯರಿಗೂ ತಿಳಿಯಲಿ ಎಂಬ ಉದ್ದೇಶದಿಂದ ಈ ಸಾಹಸಕ್ಕೆ ಕೈಹಾಕಿದ್ದೇನೆ. ಪ್ರಾಜ್ಞರಾದ ಸಜ್ಜನರು ನನ್ನನ್ನು ಕ್ಷಮಿಸಲಿ.

ಶ್ರೀವಾದಿರಾಜ ಗುರುಸಾರ್ವಭೌಮರ ಸನ್ನಿಧಾನಯುಕ್ತ ಸೋದಾ ಕ್ಷೇತ್ರದಲ್ಲಿ ವೃಂದಾವನಸ್ಥರಾದ ಸೋದೆ

ಶ್ರೀವಾದಿರಾಜ ಮಠದ ಯತಿಪುಂಗವ ಪರಮಪೂಜ್ಯ ಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ಈ ಕೃತಿ ರಚನೆಯ ಪ್ರೇರಕಶಕ್ತಿಯಾಗಿ ತಮ್ಮ 'ಅನುಗ್ರಹ ಸಂದೇಶ'ವನ್ನಿತ್ತು ಆಶೀರ್ವದಿಸಿದ್ದು ನಿಜಕ್ಕೂ ನನ್ನ ಪರಮ ಸೌಭಾಗ್ಯವೆಂದೇ ಭಾವಿಸುತ್ತೇನೆ. ಶ್ರೀಗಳವರಿಗೆ ಜಂಬುಖಂಡಿ ಆಚಾರ್ಯರಲ್ಲಿ ಅಪಾರ ಗೌರವಾದರಗಳಿದ್ದವು. ತಾವು ಯತಿಗಳಾದರೂ ಆಚಾರ್ಯರ ಭಾವಚಿತ್ರಕ್ಕೆ ಅವರು ಮಂಗಳಾರತಿ ಮಾಡುತ್ತಿದ್ದುದ್ದನ್ನು ನೂರಾರು ಜನರು ನೋಡಿದ್ದಾರೆ. ಒಮ್ಮೆ ಅವರು ಹಂಪೆಗೆ ಹೋಗಿದ್ದ ಸಂದರ್ಭದಲ್ಲಿ 'ಆಚಾರ್ಯರ ದೇಹ ಸಂಸ್ಕಾರವಾದ ಸ್ಥಳ'ಕ್ಕೆ ದೀರ್ಘದಂಡ ಪ್ರಣಾಮ ಮಾಡಿದಾಗ 'ಓಂಕಾರ' ಶಬ್ದ ಕೇಳಿಬಂದಿದ್ದಕ್ಕೆ ಹಲವರು ಸಾಕ್ಷಿಯಾಗಿದ್ದಾರೆ. ಈ ಶತಮಾನ ಕಂಡ ಇಂತಹ ಮಹಾಮುನಿಗಳ ಪವಿತ್ರ ಸ್ಮೃತಿಗೆ ಈ ಕಿರುಕೃತಿಯನ್ನು ಭಕ್ತಿಪೂರ್ಣವಾಗಿ ಸಮರ್ಪಿಸಿ ಅವರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತಿದ್ದೇನೆ.

ಈ ಕೃತಿಗೆ ಕಳಶವಿಟ್ಟಂತೆ ತಮ್ಮ 'ಅನುಗ್ರಹ ಸಂದೇಶ'ಗಳನ್ನಿತ್ತು ಆಶೀರ್ವದಿಸಿದ ಮಂತ್ರಾಲಯ ಶ್ರೀರಾಘವೇಂದ್ರ ಸ್ವಾಮಿಗಳವರ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರಿಗೆ, ಉಡುಪಿ ಶ್ರೀಕೃಷ್ಣಾಪುರ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಸಾಗರತೀರ್ಥ ಶ್ರೀಪಾದಂಗಳವರಿಗೆ, ಶ್ರೀ ಶ್ರೀಪಾದರಾಜ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರಿಗೆ, ಕುಂದಾಪುರ ಶ್ರೀವ್ಯಾಸರಾಜ ಸಂಸ್ಥಾನಾಧೀಶ್ವರರಾದ ಪರಮಪೂಜ್ಯ ಶ್ರೀ ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರಿಗೆ, ಶ್ರೀಮಾಧವತೀರ್ಥ

ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀವಿದ್ಯಾಸಾಗರ ಮಾಧವತೀರ್ಥ ಶ್ರೀಪಾದಂಗಳವರಿಗೆ ಮತ್ತು ಪರಮಪೂಜ್ಯ ಶ್ರೀ ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರಿಗೆ ನನ್ನ ಶಿರಃಸಾಷ್ಟಾಂಗ ಭಕ್ತಿಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ತಮ್ಮ ಪ್ರಬುದ್ಧ ಮುನ್ನುಡಿಯಿಂದ ಈ ಪುಸ್ತಕದ ಶೋಭೆಯನ್ನು ಹೆಚ್ಚಿಸಿದ ಭಾರತದ ಸರ್ವೋಚ್ಚ ನ್ಯಾಯಾಧಿಪತಿಗಳಾಗಿದ್ದ ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರಿಗೆ ನನ್ನ ನಮಸ್ಕಾರಗಳು.

ಈ ಪುಸ್ತಕದ ವಿಕಸನ ಸಂದರ್ಭದಲ್ಲಿ ಸ್ಫೂರ್ತಿ ತುಂಬಿ ಪ್ರೋತ್ಸಾಹಿಸಿದ ಮಂತ್ರಾಲಯ ಶ್ರೀಗಳವರ ಆಪ್ತ ಕಾರ್ಯದರ್ಶಿ ಶ್ರೀ ರಾಜಾ. ಎಸ್. ರಾಜಗೋಪಾಲಾಚಾರ್ಯರಿಗೆ, ಜಂಬುಖಂಡಿ ಆಚಾರ್ಯರ ಎಲ್ಲಾ ವಂಶಸ್ಥರಿಗೆ, ಮತ್ತು ತುಂಬು ಹೃದಯದಿಂದ ಸಹಕರಿಸಿದ 'ಪರಿಮಳ ಗೆಳೆಯರ ಬಳಗ'ದ ಎಲ್ಲಾ ಮಿತ್ರರಿಗೆ ನಾನು ಋಣಿ. ಅಂದವಾಗಿ ಮುದ್ರಿಸಿದ ರೀಗಲ್ ಪ್ರಿಂಟ್ ಸರ್ವೀಸ್‌ನ ಶ್ರೀ ಎಂ. ವೆಂಕಟೇಶ್ ಅವರಿಗೆ ನಾನು ಆಭಾರಿ.

**ಗೋವಳರ ಪ್ರಿಯ ಗುರುಗೋವಿಂದವಿಠಲನ।**
**ಭಾವದಲಿ ಕಾಣ್ವಂಥ ಭಾವ ಕೊಡು ಸಂತ ॥**

**ಜಯಸಿಂಹ**

ಬೆಂಗಳೂರು
06.07.2013

(ಶ್ರೀ ತಿರುಮಲೇಶ ಹರಿ ವಿಠಲದಾಸರು)

# ಪರಿವಿಡಿ

# ಹೊಡಿ ನಗಾರಿ ಮೇಲೆ ಕೈಯ್ಯ

**ರಾಗ : ಬೇಹಾಗ್ ತಾಳ : ಆದಿ**

ಹೊಡಿ ನಗಾರಿ ಮೇಲೆ ಕೈಯ್ಯ। ಕಡ ಕಡ,
ಹೊಡೀ ನಗಾರಿ ಮೇಲೆ ಕೈಯ್ಯ ॥ ಪ ॥

ಕಡು ವಾದಿರಾಜರು। ದೃಢ ಋಜುಗತರೆಂದ್ಹೊಡಿ ॥ ಅ.ಪ ॥

ಹಯಮುಖಪದದ್ವಯ ಸೇವಕ, ವರ।
ಜಯಶೀಲರು ನಿಜಭವಹರರೆಂದ್ಹೊಡೀ ॥ 1 ॥

ದೂಷಕರನು ಬಹುಘಾಸಿ ಕೊಟ್ಟು, ನಿಜ।
ದಾಸರ ತೋಷಿಸಿ ಪೋಷಿಪರಿವರೆಂದ್ಹೊಡೀ ॥ 2 ॥

ಮೋದತೀರ್ಥಮತ ಸಾಧಿಸಿ ಮೆರೆಸುವ।
ವಾದಿರಾಜ ಪೂರ್ಣಬೋಧರ ಸಮರೆಂದ್ಹೊಡೀ ॥ 3 ॥

ಇಂದಿರಾಪತಿಯ ಚಂದದಿ ಪೂಜಿಪ।
ನಂದಿವಾಹನಮುಖ್ಯವಂದ್ಯರು ಇವರೆಂದ್ಹೊಡೀ ॥ 4 ॥

ಕಲಿಮುಖ್ಯದಾನವ ಬಲವ ಜಯಿಪ ನಿ–
ಷ್ಕಲುಷಚಿತ್ತ ಯತಿಕುಲ ಭೂಷಣರಿವರೆಂದ್ಹೊಡೀ ॥ 5 ॥

ಕಂಸಾರಿಮುಖಧ್ವಂಸಿ ಸಮೀರಣ –
ಹಂಸವಾಹನಂಶಾಂಶ ಸಹಿತರೆಂದ್ಹೊಡೀ ॥ 6 ॥

ಸುಂದರ ಪಂಚಸುವೃಂದಾವನದೊಳು ।
ವೃಂದಾರಕ ಮುನಿವೃಂದವಂದಿತರೆಂದ್ಹೊಡೀ ॥ 7 ॥

ಲಾತವ್ಯಾತ್ಮಕ ಭೀತಿರಹಿತ, ಮಹ–
ಪಾತಕಹರ ಸುರನಾಥ ಮಹಿಮರೆಂದ್ಹೊಡೀ ॥ 8 ॥

ಭಾವಿಭಾರತಿ ದೇವಿ ಕರಕಮಲ ।
ಸೇವಿತಪದರಾಜೀವದ್ವಯರೆಂದ್ಹೊಡೀ ॥ 9 ॥

ವೃಂದಾವನ ಸದಮಂದಾಖ್ಯಾನವ ಭೂ– ।
ವೃಂದಾರಕರಿಗೆ ತಿಳಿಪರಿವರೆಂದ್ಹೊಡೀ ॥ 10 ॥

ಸಾನುರಾಗದಿ **ಪ್ರಾಣಪತಿವಿಠಲನ** ।
ಧ್ಯಾನದಿಂದ ಸನ್ಮಾನಿತರಿವರೆಂದ್ಹೊಡೀ ॥ 11 ॥



॥ ಶ್ರೀಃ ॥

# ಜಂಬುಖಂಡಿಯ ಸಿಂಹ

ಏಷಾಂ ಸುಪರ್ಣಹರಶಕ್ರಮುಖೇಡ್ಯಪಾದ-
ಶ್ರೀವಾದಿರಾಜಪದಪದ್ಮಮಧುವ್ರತಾನಾಮ್ ।
ಮಾಹಾತ್ಮ್ಯಮದ್ಭುತತಮಂ ನಿಖಿಲಾನುಭೂತಂ
ವಕ್ಷ್ಯೇ ಯಥಾಮತಿ ಮನೋವಚನೋರುಶುದ್ಧ್ಯೈ ॥

**ಸಾ**ಧನ ಭೂಮಿ ಎಂದು ಪ್ರಖ್ಯಾತವಾದ ಭಾರತ ದೇಶದಲ್ಲಿ ವಿವಿಧ ಮತಪಂಥಗಳು ಪ್ರಚಲಿತದಲ್ಲಿವೆ. ಕಾಲಕಾಲಕ್ಕೆ ಇಲ್ಲಿ ವಿವಿಧ ಆಚಾರ್ಯ ಪುರುಷರು ಜನ್ಮ ತಳೆದು ತಮ್ಮದೇ ಆದ ವಿಚಾರಧಾರೆಯನ್ನು ಮಂಡಿಸಿದ್ದಾರೆ. ತಾತ್ತ್ವಿಕ ನೆಲೆಗಟ್ಟಿನ ಮೇಲೆ ಭಾವನಾತ್ಮಕವಾದ ಭದ್ರಸೌಧವನ್ನು ಕಟ್ಟಲು ತಮ್ಮ ಜೀವಿತವನ್ನೇ ಮುಡಿಪಿಟ್ಟು ಶ್ರಮಿಸಿದ್ದಾರೆ. ಜನಮನವನ್ನು ಮುಟ್ಟುವ ತಮ್ಮ ವಿದ್ವತ್ಪೂರ್ಣವಾದ ವಾಣಿಯಿಂದ ಪ್ರಚಲಿತ ಜೀವನ ಪದ್ಧತಿಗೆ ಕ್ರಾಂತಿಕಾರಕ ಸ್ಪರ್ಶ ನೀಡಿ ಹೊಸ ಸಂಪ್ರದಾಯವನ್ನೇ ಸೃಷ್ಟಿಸಿದ್ದಾರೆ. ಸಮಾಜದ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿ ತಮ್ಮದೇ ಆದ ಅನುಯಾಯಿಗಳ ಸಮೂಹವನ್ನೇ ನಿರ್ಮಾಣ ಮಾಡಿದ್ದಾರೆ. ಸತ್ಯಾನ್ವೇಷಣೆಯ ನಿಟ್ಟಿನಿಂದ ನೋಡಿದಾಗ ಭಾರತೀಯ ತತ್ತ್ವಶಾಸ್ತ್ರಕ್ಕೆ ಒಬ್ಬೊಬ್ಬ ಆಚಾರ್ಯ ಪುರುಷರು ನೀಡಿದ ಕೊಡುಗೆಯೂ ಸಹ ಗಮನಾರ್ಹವಾದದ್ದು. ಇತರ ದೇಶಗಳ ತತ್ತ್ವ ಪರಿಸರಕ್ಕೆ ಹೋಲಿಸಿದರೆ ಇಲ್ಲಿನ ಸತ್ಯಾನ್ವೇಷಕರಿಗೆ ಲಭ್ಯವಾಗಿರುವ ಅಭಿಪ್ರಾಯ ಸ್ವಾತಂತ್ರ್ಯವೂ ವಿಶೇಷವಾದದ್ದೇ.

ವೇದ ಮೂಲವಾದ ಭಾರತದ ಸನಾತನ ಸಂಸ್ಕೃತಿಯಲ್ಲಿ ವೇದಗಳನ್ನು ಪ್ರತಿಪಾದಿಸುವ ಮತಗಳಿರುವಂತೆಯೇ ವೇದಗಳನ್ನು ಅಲ್ಲಗಳೆಯುವ ಮತಗಳೂ ಸಾಕಷ್ಟು ಸಂಖ್ಯೆಯಲ್ಲಿವೆ. ಬೌದ್ಧ, ಅರ್ಹತ ಮುಂತಾದ ಮತಾಚಾರ್ಯರು, ವೈದಿಕ ನಂಬಿಕೆಯನ್ನೇ ಬುಡಮೇಲು ಮಾಡಿದರೆ ಪರಮಾತ್ಮನ ಅಸ್ತಿತ್ವದ ಬೇರುಗಳನ್ನೇ ಕತ್ತರಿಸುವ ನಾಸ್ತಿಕ ಮೂಲದ ಚಾರ್ವಾಕರು 'ಯಾವಜ್ಜೀವಂ ಸುಖಂ ಜೀವೇತ್ । ಋಣಂ ಕೃತ್ವಾ ಘೃತಂ ಪಿಬೇತ್ । ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ' ಮುಂತಾದ ಮೋಹಕವಾಕ್ಯ ಜಾಲವನ್ನೇ ಸೃಷ್ಟಿಸಿ, ಭೋಗಪ್ರಧಾನವಾದ ಸ್ವೇಚ್ಛಾಚಾರವನ್ನು ಪ್ರಚೋದಿಸಿದರು. ಸಾಂಖ್ಯ, ಶಾಕ್ತ, ಪಾಶುಪತ, ಯೋಗ, ಮೊದಲಾದವುಗಳನ್ನು ಸ್ಥಾಪಿಸಿದ ಮತಾಚಾರ್ಯರು ವೇದಪ್ರತಿಪಾದ್ಯವಾದ ವಿಷ್ಣು ಸರ್ವೋತ್ತಮತ್ವವನ್ನು ಕಡೆಗಣಿಸಿದರೆ, ವೇದೋದ್ಧಾರಕರೆಂದು ಹೇಳಿಕೊಂಡ ಅದ್ವೈತ ಮತ ಸ್ಥಾಪಕರು ಬೌದ್ಧ ಮತದ ತತ್ತ್ವಗಳನ್ನೇ ಒಂದಿಷ್ಟು ನೇರವಾಗಿಸಿ ದೇವರನ್ನು 'ನಿರ್ಗುಣನೂ, ನಿರಾಕಾರನೆಂದೂ' ಕರೆದರಲ್ಲದೆ, 'ಅಹಂ ಬ್ರಹ್ಮಾಸ್ಮಿ, ತತ್ತ್ವಮಸಿ' ಮುಂತಾದ ವಾಕ್ಯಗಳಿಗೆ ವಿರುದ್ಧಾರ್ಥಗಳನ್ನು ಕಲ್ಪಿಸಿ, ಬ್ರಹ್ಮಾಭೇದವೇ ಮೋಕ್ಷವೆಂದು ಸಾಧಿಸಿದರು. ಕಣ್ಣಿಗೆ ಕಾಣುವ ಜಗತ್ತೂ ಸೇರಿದಂತೆ ಸಮಸ್ತವನ್ನೂ ಮಿಥ್ಯೆಯೆನ್ನುವ; ಸರ್ವೋಚ್ಚ ದೈವವನ್ನು ಗುರುತಿಸುವಲ್ಲಿ ವಿಫಲರಾಗಿ ಕಡೆಗೆ 'ನಾನೇ ದೇವರೆನ್ನುವ' ಭ್ರಮಾಲೋಕವನ್ನೇ ಮಾಯಾವಾದಿಗಳು ನಿರ್ಮಾಣ ಮಾಡಿದ್ದರಿಂದ ಸತ್ಯಾನ್ವೇಷಣೆಯ ಬಾಗಿಲುಗಳೇ ಮುಚ್ಚಿಕೊಂಡವು.

"ಚಿತ್ ಮತ್ತು ಅಚಿತ್ ಪದಾರ್ಥಗಳಿಂದ ವಿಶಿಷ್ಟನಾದ ಶ್ರೀಮನ್ನಾರಾಯಣನೇ ಪರಬ್ರಹ್ಮನು. ಆತನಿಂದ ಭಿನ್ನರಾದ ಚಿದ್ರೂಪಿಗಳಾದ ಜೀವರು ಭಕ್ತಿ ಮತ್ತು ಪ್ರಪತ್ತಿಗಳಿಂದ ಭಗವತ್ಪ್ರಸಾದವನ್ನು ಸಂಪಾದಿಸಿ, ಆನಂದಾನುಭವದ ನಂತರ ತಾರತಮ್ಯ ರಹಿತವಾದ ಮುಕ್ತಿಯನ್ನು ಪಡೆಯುವರು" ಎಂದು ಪ್ರತಿಪಾದಿಸಿದ ವಿಶಿಷ್ಟಾದ್ವೈತ ಮತ ಸ್ಥಾಪಕರು ಪ್ರಾರಂಭದಲ್ಲಿ ಅಪೂರ್ವಭಾವ ಸಂಚಲನವನ್ನು

ಉಂಟುಮಾಡಿದರೂ ಭ್ರಮಾಲೋಕವನ್ನು ನಿರಾಕರಿಸುವ ಸದೃಢ ತಾತ್ತ್ವಿಕ ವೇದಿಕೆಯನ್ನು ನಿರ್ಮಿಸುವುದರಲ್ಲಿ ವಿಫಲರಾದರು. ಭಕ್ತಿಯ ಮಹೋನ್ನತ ಹಿರಿಮೆಯನ್ನು ಸಾರುವ ದಿಶೆಯಲ್ಲಿ ಹರಿಯ ಪಾರಮ್ಯವನ್ನು ಒಪ್ಪಿಕೊಂಡರೂ, ತಾರತಮ್ಯವನ್ನು ಸರಿಯಾಗಿ ಸ್ಪಷ್ಟೀಕರಿಸದೇ ಮೋಕ್ಷ ಜೀವರ ಪರಮಸಾಮ್ಯವನ್ನು ಸಾರಿ, ಅಂತ್ಯದಲ್ಲಿ ಗೊಂದಲವನ್ನೇ ಉಂಟು ಮಾಡಿದರು.

ವೇದ ಮಾರ್ಗಾವಲಂಬಿಗಳಾದ ಕೆಲವರು ಶುದ್ಧ ವೈಷ್ಣವ ತತ್ತ್ವಗಳನ್ನು ತುಚ್ಛೀಕರಿಸಿದರೆ, ವೈಷ್ಣವರೆಂಬ ಹಣೆಪಟ್ಟಿಯಲ್ಲಿ ಕೆಲವರು ಶ್ರುತಿ ಸ್ಮೃತಿಗಳ ಎಲ್ಲೆಯನ್ನೇ ಮೀರಿ ನಡೆದರು. ಕೆಲವು ಆಧುನಿಕರಂತೂ ಭಾರತದ ಸನಾತನ ಅಧ್ಯಾತ್ಮಸೌಧಕ್ಕೆ ಅಡಿಪಾಯವಾದ ವೈದಿಕ ತತ್ತ್ವಪುಂಜವನ್ನೇ ತುಚ್ಛೀಕರಿಸಿ, ಭಕ್ತಿಯ ಹೆಸರಿನಲ್ಲಿ ಸ್ವೇಚ್ಛಾಚಾರಿಗಳಾಗಿ ತಮ್ಮದೇ ಆದ ಚಿತ್ರವಿಚಿತ್ರ ಪಂಥಗಳನ್ನು ಪ್ರಾರಂಭಿಸಿದರು.

ಹೀಗೆ ವಿವಿಧ ಮತ-ಪಂಥಗಳು ಸ್ಥಾಪಿತಗೊಂಡರೂ ಸಜ್ಜನರ ಭ್ರಮೆ ಸಂದೇಹಗಳು ನಿವಾರಣೆಯಾಗದೇ ತತ್ತ್ವ ವಿಪ್ಲವದ ಪರಿಸ್ಥಿತಿಯೇ ನಿರ್ಮಾಣವಾಯಿತು. 'ಕಾಳಿರುಳು ಕಳೆದು ಮುಗಿಲೆಲ್ಲಾ ಹೊಳೆಯ ಬೇಕಾದರೆ, ಸರಿದಿದ್ದ ಸತ್ಯಸೂರ್ಯ ಪ್ರಕಾಶಮಾನವಾಗಿ ಪ್ರಕಟವಾಗಬೇಕು. ಹೃದಯಾಲಯದಲ್ಲಿ ಭಗವತ್ಪಥ ತೋರುವ ಪರಿಶುದ್ಧ ತತ್ತ್ವಗಳ ಹೊಂಬೆಳಕು ಮೂಡಬೇಕು' ಎಂದು ಸಜ್ಜನವೃಂದ ಪರಿತಪಿಸುತ್ತಿತ್ತು. ಇಂತಹ ಸಂದರ್ಭದಲ್ಲಿಯೇ ಬಲ್ಲವರ ಸೊಲ್ಲು ಕೇಳಿದ ಶ್ರೀಹರಿಯ ಕಾರುಣ್ಯ ವಿಶೇಷದಿಂದ ಪುಣ್ಯದೊಡಲು ತುಂಬಿತ್ತು. ಜ್ಞಾನದ ಕಡಲನ್ನು ಹಡೆಯಲು ಪರಶುರಾಮ ಕ್ಷೇತ್ರವೆಂದು ಪ್ರಸಿದ್ಧವಾದ ದಕ್ಷಿಣ ಕನ್ನಡ ಜಿಲ್ಲೆಯ 'ಪಾಜಕ'ವೆಂಬ ಪುಟ್ಟ ನೆಲವು ಸಿದ್ಧವಾಯಿತು. ಭಗವದಾದೇಶದಂತೆ 'ಒಂದಧಿಕವಿಂಶತಿಕುಭಾಷ್ಯ'ಗಳನ್ನು ನಿರಾಕರಿಸಿ ಸಮಸ್ತ ವೇದ ಪ್ರತಿಪಾದ್ಯನಾದ ಶ್ರೀಹರಿಯ ಸರ್ವೋತ್ತಮತ್ವವನ್ನು ಪುನಃ ಸ್ಥಾಪಿಸಲು "ಪೂರ್ಣಪ್ರಜ್ಞ"ರಾಗಿ ವಾಯುದೇವರ ಅವತಾರವಾಯಿತು.

ವೇದವ್ಯಾಸರಿಗೆ ಸಮ್ಮತವಲ್ಲದ ಅವೈದಿಕ ಮತಗಳನ್ನು ಖಂಡಿಸಿ, ವೇದವೇದ್ಯನಾದ ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಸಾರುವ ತತ್ತ್ವ ವಾದವನ್ನು ಪ್ರತಿಪಾದಿಸಲು ಹದಿಮೂರನೆಯ ಶತಮಾನದಲ್ಲಿ "ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ ಮಾನನಿಧಿ ಮಧ್ವಾಖ್ಯನೆಂದೆನಿಸಿದ" ಎಂದು ಶ್ರೀಪಾದರಾಜರು ಹೇಳಿರುವಂತೆ ಸಾಕ್ಷಾತ್ ವಾಯು ದೇವರೇ ಶ್ರೀಮನ್ಮಧ್ವಾಚಾರ್ಯರಾಗಿ ಉಡುಪಿಗೆ ಸಮೀಪದಲ್ಲಿರುವ ಪಾಜಕ ಕ್ಷೇತ್ರದಲ್ಲಿ ಅವತಾರ ಮಾಡಿದರು. ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ಅತ್ಯದ್ಭುತ ಪ್ರತಿಭೆಯನ್ನು ಪ್ರಕಟಪಡಿಸಿದ ಆಚಾರ್ಯರು ತಮ್ಮ ಹನ್ನೊಂದನೆಯ ವಯಸ್ಸಿನಲ್ಲಿ ಶ್ರೀಹಂಸನಾಮಕ ಪರಮಾತ್ಮನ ಪವಿತ್ರ ಪರಂಪರೆಯಲ್ಲಿ ಬಂದ ಶ್ರೀಅಚ್ಯುತಪ್ರೇಕ್ಷರೆಂಬ ಯತಿವರೇಣ್ಯರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ "ಶ್ರೀಮದಾನಂದ ತೀರ್ಥ" ಎಂಬ ಆಶ್ರಮನಾಮವನ್ನು ಪಡೆದುಕೊಂಡರು. ದೇಶದ ಉದ್ದಗಲಕ್ಕೂ ಮಿಂಚಿನಂತೆ ಸಂಚರಿಸಿ ಅನೇಕ ಕುವಾದಿಗಳನ್ನು ವಾಕ್ಯಾರ್ಥದಲ್ಲಿ ಜಯಿಸಿ ಶುದ್ಧ ವೈಷ್ಣವ ತತ್ತ್ವಪ್ರಭೆಯಿಂದ ಪರಿಪೂರ್ಣ ವಾದ ವೈದಿಕ ಧರ್ಮ ಧ್ವಜವನ್ನು ಎತ್ತಿಹಿಡಿದರು.

"ವೇದವೇದ್ಯನಾದ ಶ್ರೀಹರಿಯೇ ಸರ್ವೋತ್ತಮನು. ಕಣ್ಣಿಗೆ ಕಾಣುವ ಈ ಜಗತ್ತು ಅದ್ವೈತಿಗಳು ಹೇಳುವಂತೆ ಮಿಥ್ಯವಲ್ಲ; ಸತ್ಯವಾದದ್ದು. ಪಂಚಭೇದಗಳು ಯಾವ ಕಾಲಕ್ಕೂ ಸತ್ಯವಾದದ್ದು. ಪರಬ್ರಹ್ಮ ಸ್ವರೂಪನಾದ ಶ್ರೀಹರಿಯಿಂದ ಭಿನ್ನರಾದ ಎಲ್ಲಾ ಜೀವರಾಶಿಗಳೂ ಪರಸ್ಪರ ತಾರತಮ್ಯವುಳ್ಳವರು. ಚತುರ್ಮುಖ ಬ್ರಹ್ಮ ರುದ್ರಾದಿಯಾಗಿ ಎಲ್ಲರೂ ಸರ್ವೋತ್ತಮನಾದ ಶ್ರೀಹರಿಯ ದಾಸರು. ಸ್ವರೂಪಭೂತವಾದ ಸುಖಾನುಭವವೇ ಮುಕ್ತಿ. ಇದಕ್ಕೆ ನಿಷ್ಕಲ್ಮಶವಾದ, ಮಹಾತ್ಮ್ಯ ಜ್ಞಾನಪೂರ್ವಕವಾದ ಭಕ್ತಿಯೇ ಮುಖ್ಯ ಸಾಧನ. ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂಬ ಮೂರು ಸಾಧಕ ಪ್ರಮಾಣಗಳಿವೆ. ಸಕಲ ಆಗಮಗಳಿಂದ ಶ್ರೀಹರಿಯೊಬ್ಬನೇ ಪ್ರತಿಪಾದ್ಯನು[1]" ಎಂದು

1. ಮಧ್ವಮತದ ಈ ತತ್ವಗಳನ್ನೇ ಶ್ರೀವ್ಯಾಸರಾಜರು ತಾವು ರಚಿಸಿರುವ ಶ್ಲೋಕವೊಂದರಲ್ಲಿ ಹೀಗೆ ಸುಂದರವಾಗಿ ಹಿಡಿದಿಟ್ಟಿದ್ದಾರೆ :

→

ಶ್ರೀಮಧ್ವಾಚಾರ್ಯರು ಹೋದ ಕಡೆಯಲ್ಲೆಲ್ಲಾ ಪ್ರತಿಪಾದಿಸಿದರು. ಇದಕ್ಕೆ ಪೂರಕವಾಗಿ ಆಚಾರ್ಯರು ಸರ್ವಮೂಲಗಳೆಂದು ಪ್ರಸಿದ್ಧವಾದ ಮೂವತ್ತೇಳು ಅತ್ಯಮೂಲ್ಯ ಗ್ರಂಥಗಳನ್ನು ರಚಿಸಿದರು. ತ್ರೇತೆಯಲ್ಲಿ ಶ್ರೀರಾಮಚಂದ್ರನ ಸಾರ್ವಭೌಮತ್ವವನ್ನು ಸಾರಲು ಅವತರಿಸಿದ ಆಂಜನೇಯನಂತೆ, ದ್ವಾಪರದಲ್ಲಿ ಕೃಷ್ಣಕಾರ್ಯವನ್ನು ಸಾಧಿಸಲು ಬಂದ ಭೀಮಸೇನನಂತೆ, ಈ ಕಲಿಯುಗದಲ್ಲಿ ಶ್ರೀಮಧ್ವಾಚಾರ್ಯರು ಬಾಲಯತಿಯಾಗಿ ಶ್ರೀವೇದವ್ಯಾಸರ ಅಂತರಂಗವನ್ನು ತೆರೆದು ತೋರಿ ಶ್ರೀಹರಿಯ ಪಾರಮ್ಯವನ್ನು ಮೆರೆದರು. ಇಡೀ ಜಗತ್ತು ಆಚಾರ್ಯರ ಗಂಭೀರವಾಣಿಗೆ ಪರವಶವಾಯಿತು. ಸಾವಿರಾರು ಸುಜೀವಿಗಳು ಮಧ್ವಮುನಿಗಳ ತತ್ತ್ವಸುಧೆಯನ್ನು ಸವಿದು ಅವರ ಅನುಯಾಯಿ ಗಳಾದರು. ಅದ್ವೈತ ಮತದ ದಿಗ್ಗಜಗಳಾಗಿದ್ದ ತ್ರಿವಿಕ್ರಮ ಪಂಡಿತಾ ಚಾರ್ಯ, ಶಂಕರಪಂಡಿತ, ಶೋಭನ ಭಟ್ಟ ಮುಂತಾದ ಪಂಡಿತ ವರೇಣ್ಯರು ಅನೇಕ ದಿನಗಳ ಕಾಲ ಸತ್ಯಮಥನಕ್ಕಾಗಿ ವಾಕ್ಯಾರ್ಥ ನಡೆಸಿ, ವಾದದಲ್ಲಿ ಪರಾಜಿತರಾದರೂ ಯಾವುದೇ ಪೂರ್ವಾಗ್ರಹವನ್ನು ಇಟ್ಟುಕೊಳ್ಳದೆ ಧೈರ್ಯದಿಂದ ದ್ವೈತದೀಕ್ಷೆಯನ್ನು ಸ್ವೀಕರಿಸಿ ಆಚಾರ್ಯ ರಲ್ಲಿ ತಮ್ಮ ಸ್ವರೂಪೋದ್ಧಾರಕರಾದ ಗುರುಗಳನ್ನು ಕಂಡುಕೊಂಡರು. ಆಚಾರ್ಯರು ತಮ್ಮ ನಾಲ್ಕು ಜನ ಮುಖ್ಯ ಶಿಷ್ಯರಿಗೆ ತುರ್ಯಾಶ್ರಮವನ್ನು ನೀಡಿ "ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ ಮತ್ತು ಅಕ್ಷೋಭ್ಯತೀರ್ಥ" ಎಂಬ ನಾಮಕರಣ ಮಾಡಿ ತಾವು ಸಂಸ್ಥಾಪಿಸಿದ ದ್ವೈತ ಸಿದ್ಧಾಂತದ ಪ್ರಚಾರಕ್ಕೆ ಅವರನ್ನು ನಿಯೋಜಿಸಿದರು. ಒಮ್ಮೆ ಉಡುಪಿ ಸಮೀಪದ ಕಡಲತೀರದಲ್ಲಿ ದ್ವಾರಕೆಯಿಂದ ಬರುತ್ತಿದ್ದ ಹಡಗೊಂದರಲ್ಲಿ ದೈವದತ್ತವಾಗಿ ಲಭ್ಯವಾದ ಗೋಪಿಚಂದನದಿಂದಾವೃತ್ತ ವಾದ ಬಾಲಕೃಷ್ಣನ ಪುಟ್ಟ ವಿಗ್ರಹವನ್ನು ಉಡುಪಿಯ ಮಧ್ವ ಸರೋವರದ

---

→ "ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂ ಗತಾಃ।
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಮ್
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ॥"

ದಂಡೆಯ ಮೇಲೆ ಆಚಾರ್ಯರು ಪ್ರತಿಷ್ಠಾಪಿಸಿದರು. ಕಡಗೋಲು ಮತ್ತು ಹಗ್ಗವನ್ನು ಹಿಡಿದ ಸಾಲಿಗ್ರಾಮ ಶಿಲೆಯ ಆ ಬಾಲಕೃಷ್ಣನ ಸುಂದರ ವಿಗ್ರಹದ ಪೂಜೆಗಾಗಿ ಶ್ರೀ ಹೃಷೀಕೇಶತೀರ್ಥ, ಶ್ರೀನರಸಿಂಹತೀರ್ಥ, ಶ್ರೀಜನಾರ್ಧನತೀರ್ಥ, ಶ್ರೀಉಪೇಂದ್ರತೀರ್ಥ, ಶ್ರೀವಾಮನತೀರ್ಥ, ಶ್ರೀವಿಷ್ಣುತೀರ್ಥ, ಶ್ರೀರಾಮತೀರ್ಥ ಮತ್ತು ಶ್ರೀಅಧೋಕ್ಷಜತೀರ್ಥರೆಂಬ ತಮ್ಮ ಎಂಟು ಜನ ಸನ್ಯಾಸಿ ಶಿಷ್ಯರನ್ನು ನೇಮಿಸಿ ಅವರು ಎರಡು ತಿಂಗಳಿಗೊಬ್ಬರಂತೆ ಪರ್ಯಾಯ ಕ್ರಮದಲ್ಲಿ ಶ್ರೀಕೃಷ್ಣನನ್ನು ಪೂಜಿಸಬೇಕೆಂದು ಆದೇಶಿಸಿದರು. ತಪೋನಿಧಿಗಳಾಗಿದ್ದ ಆಚಾರ್ಯರ ಆ ಎಂಟು ಮಂದಿ ಶಿಷ್ಯರ ಮಠಗಳೇ ಇಂದು ಕ್ರಮವಾಗಿ ಫಲಿಮಾರು ಮಠ, ಅದಮಾರು ಮಠ, ಕೃಷ್ಣಾಪುರ ಮಠ, ಪುತ್ತಿಗೆ ಮಠ, ಶಿರೂರು ಮಠ, ಸೋದೆ ಮಠ, ಕಾಣಿಯೂರು ಮಠ ಮತ್ತು ಪೇಜಾವರ ಮಠಗಳೆಂದು ಪ್ರಸಿದ್ಧವಾಗಿವೆ.

ಹೀಗೆ ಶ್ರೀಮನ್ಮಧ್ವಾಚಾರ್ಯರಾಗಿ ಅವತಾರ ಮಾಡಿದ ಜೀವೋತ್ತಮರಾದ ವಾಯುದೇವರು ದ್ವೈತ ಸಿದ್ಧಾಂತದ ದುಂದುಭಿಯನ್ನು ಸಮರ್ಥವಾಗಿ ಮೊಳಗಿಸಿ, ಅಸಂಖ್ಯಾತ ಸುಜೀವಿಗಳಿಗೆ ಸಾಧನ ಮಾರ್ಗ ತೋರಿಸಿ ಉಡುಪಿಯ ಶ್ರೀಅನಂತೇಶ್ವರನ ಸನ್ನಿಧಾನದಲ್ಲಿ ಮಾಘ ಶುದ್ಧ ನವಮಿಯ ದಿವಸ ತಮ್ಮ ಶಿಷ್ಯರಿಗೆ ಸಚ್ಛಾಸ್ತ್ರ ಪ್ರವಚನ ಮಾಡುತ್ತಿದ್ದಾಗ ಅದೃಶ್ಯರಾಗಿ ಶ್ರೀವೇದವ್ಯಾಸ ದೇವರ ನಿರಂತರ ಸೇವೆಗಾಗಿ ಬದರಿಕಾಶ್ರಮಕ್ಕೆ ಪ್ರಯಾಣ ಬೆಳೆಸಿದರು.

ಶ್ರೀಮಧ್ವಾಚಾರ್ಯರ ನಂತರ ಅವರಂತೆಯೇ ಪ್ರಭಾವಪೂರ್ಣರಾದ, ಬಹುಮುಖ ಪ್ರತಿಭೆಯುಳ್ಳ ಶಕ ಪುರುಷರೊಬ್ಬರು ಹದಿನೈದು ಹಾಗೂ ಹದಿನಾರನೆಯ ಶತಮಾನದಲ್ಲಿ ಉಡುಪಿಯ ಅಷ್ಟಮಠಗಳಲ್ಲಿ ಅವತರಿಸಿ ಬಂದರು. ಅವರೇ ಶ್ರೀಮಧ್ವಾಚಾರ್ಯರ ಸಹೋದರರೂ, ಪ್ರಿಯ ಶಿಷ್ಯರೂ ಆದ ಶ್ರೀವಿಷ್ಣುತೀರ್ಥರ ಪಾವನ ಪರಂಪರೆಯಲ್ಲಿ ಬಂದ ಸೋದಾ ಮಠಾಧಿಪತಿ ಶ್ರೀವಾದಿರಾಜ ಗುರುಸಾರ್ವಭೌಮರು.

ಸಮೀರಾವತಾರರಾದ ಶ್ರೀಮದಾನಂದತೀರ್ಥರಂತೆ ಆಗಮೋಲ್ಲೇಖ ಅನ್ವರ್ಥ ನಾಮಧೇಯವನ್ನು ಪಡೆದಿದ್ದ ಭಾವಿಸಮೀರರಾದ ಶ್ರೀವಾದಿರಾಜ ಯತಿಪುಂಗವರು[1] ತಮ್ಮನ್ನು ಆಶ್ರಯಿಸಿದ ಸುಜೀವಿಗಳಿಗೆ ಮೋಕ್ಷಪ್ರಾಪಕವಾದ ಜ್ಞಾನಸಂಪತ್ತನ್ನು ಕರುಣಿಸುವುದರಲ್ಲಿ ಅಗ್ರಗಣ್ಯರು.

"ಕಲಿಬಾಧೆಯು ವೆಗ್ಗಳವಾಯಿತು ಎಂದು ।
ಇಳೆಗಿಳಿದೆ ಯತಿಕುಲತಿಲಕ ಕೃಪಾಳೋ"

ಎಂಬ ದಾಸವಾಣಿಯಂತೆ ಅವರು ಕಲಿಯ ಉಪಟಳದ ಹೆಗ್ಗುರುತಾದ ಮಾಯಾವಾದವೇ ಮೊದಲಾದ ದುರ್ಮತಗಳನ್ನು ಮರ್ದಿಸಲೆಂದೇ ಧರೆಯೊಳಗೆ ಅವತಾರ ಮಾಡಿದ ಭಗವದಾಜ್ಞಾಪರರು. ಮೂವತ್ತೆರಡು ದೇವತಾ ಲಕ್ಷಣಗಳುಳ್ಳ ವಾಯ್ವವತಾರರಾದ ಶ್ರೀಮದಾನಂದತೀರ್ಥರ ಭವ್ಯ ವ್ಯಕ್ತಿತ್ವವನ್ನು ಕ್ಷಣ ಕ್ಷಣಕ್ಕೂ ನೆನಪಿಸುವಂತೆ ಮಹಿಮಾನ್ವಿತ ಬಾಳುವೆಯನ್ನು ನಡೆಸಿದ ಶ್ರೀಮದ್ವಾದಿರಾಜ ಪೂಜ್ಯ ಚರಣರು ಆಚಾರ್ಯ ಮಧ್ವರಂತೆಯೇ ದಕ್ಷಿಣ ಕನ್ನಡ ಜಿಲ್ಲೆಯ ಕುಂಭಾಸಿ ಕ್ಷೇತ್ರದ ಸಮೀಪದಲ್ಲಿರುವ ಹೂವಿನಕೆರೆ ಎಂಬ ನಿಸರ್ಗ ರಮಣೀಯ ಪುಟ್ಟ ಗ್ರಾಮದಲ್ಲಿ ಜನಿಸಿದರು. ಆಚಾರ್ಯರಂತೆಯೇ ಪ್ರತಿಭೆಯ ಪುತ್ಥಳಿಯಾಗಿ ಬಾಲ್ಯದಲ್ಲಿ ಅನೇಕ ಅತಿಮಾನುಷ ಲೀಲೆಗಳನ್ನು ತೋರಿ ತಮ್ಮ ಜನ್ಮಾಷ್ಟಮ ದಲ್ಲಿ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಶ್ರೀಸೋದಾ ಮಠವೆಂದು ಮುಂದೆ ಪ್ರಸಿದ್ಧವಾದ ಶ್ರೀಕುಂಭಾಸಿ ಮಠದ ತಪೋನಿಧಿ ಶ್ರೀವಾಗೀಶತೀರ್ಥ ಶ್ರೀಪಾದಂಗಳವರಿಂದ ಸನ್ಯಾಸ ದೀಕ್ಷೆಯನ್ನು ಸ್ವೀಕರಿಸಿ

---

1. "ವಾದಿನಾಂ ಜ್ಞಾನದಾನ್ಯೈಕಶೀಲಾನಾಂ ರಾಜನಂ ಯತಃ ।
ವೇತಿ ಜ್ಞಾನಂ ಸಮುದ್ದಿಷ್ಟಂ ದೇತಿ ದಾನಮುದಾಹೃತಮ್ ॥
ಪ್ರೋಕ್ತಶೀಲ ಇಕಾರೇಣ ರಾಜನಂ ರಾಜಶಬ್ದಿತಮ್ ।
ವಾದಿರಾಜಾಭಿದಂ ರೂಪಂ ದಶಪ್ರಮತಿಸಂಜ್ಞಿತಮ್ ॥
ಪೂರ್ಣಜ್ಞಾನಂ ವಿನಾ ಪ್ರೋಕ್ತರಾಜಾನಂ ತು ಕಥಂ ಭವೇತ್ ॥
ದಶೇತಿ ಪೂರ್ಣಮುದ್ದಿಷ್ಟಂ ಜ್ಞಾನಪ್ರಮತಿರೀರಿತಮ್ ॥"

– ಋಕ್ಸಂಹಿತಾ ಉದಾಹೃತ ಪ್ರಮಾಣ.

"ಶ್ರೀವಾದಿರಾಜತೀರ್ಥ"[1] ಎಂಬ ಆಶ್ರಮನಾಮವನ್ನು ಪಡೆದುಕೊಂಡರು. ಆಚಾರ್ಯ ಮಧ್ವರು ಸ್ಥಾಪಿಸಿದ್ದ ದ್ವೈತ ಸಿದ್ಧಾಂತದ ಪ್ರಚಾರಕ್ಕಾಗಿ ತಮ್ಮ ಬಾಳುವೆಯನ್ನು ಮುಡಿಪಾಗಿಟ್ಟಿದ್ದ "ಮೋದತೀರ್ಥರ ಮತ ಸೇನಾಧಿಪತಿಯಾದ" ಶ್ರೀವಾದಿರಾಜರು ಭಾರತದ ಉದ್ದಗಲಕ್ಕೂ ಹರಡಿರುವ ಹಲವಾರು ಪುಣ್ಯಕ್ಷೇತ್ರಗಳಿಗೆ ಸಂಚಾರ ಕೈಗೊಂಡು ಹೋದ ಕಡೆಗಳಲ್ಲೆಲ್ಲಾ "ಶ್ರೀಹರಿಯೇ ಸರ್ವೋತ್ತಮ"ನೆಂದು ಢಂಗುರ ಹೊಡೆಸಿದರು. ಸಿಂಹದ ಗುಹೆಗೇ ಹೋಗಿ ಗರ್ಜಿಸುವಂತೆ ಅದ್ವೈತ ಮತದ ಪ್ರಮುಖ ಪೀಠವಾದ ಶೃಂಗೇರಿಗೇ ತೆರಳಿ ವಾದ ವೈಭವವನ್ನು ತೋರಿ ಅಲ್ಲಿ ದಿಗ್ವಿಜಯ ಸ್ಥಂಭ ಸ್ಥಾಪಿಸಿದರು.[2] ಹೆಸರಿಗೆ ತಕ್ಕ ಹಾಗೆ ವಾದಿರಾಜರೇ ಆಗಿ ಅಹಂಭಾವದಿಂದ ಮತ್ತರಾದ ಅನೇಕ ಕುವಾದಿಗಳನ್ನು ವಾದದಲ್ಲಿ ಜಯಿಸಿ ಜಗತ್ತಿನಲ್ಲಿ ದ್ವೈತ ದುಂದುಭಿಯನ್ನು ಮೊಳಗಿಸಿದರು. ಜಾತಿ–ಮತ, ಅಂತಸ್ತುಗಳನ್ನು ಗಣನೆಗೆ ತರದೆ ತಮಗೆ ಶರಣಾಗತರಾದ ಆರ್ತರ ನಿರ್ಮಲಾಂತಃಕರಣವನ್ನು ಮಾತ್ರ ಪರಿಗಣಿಸಿ ಅವರಿಗೆ ಅಭಯವಿತ್ತು ಸಂರಕ್ಷಿಸಿದರು.

"Besides Vadiraja was a great Mystic and spiritual Humanist who uplifted many communities in need of spiritual blessings.

---

1. "Sri Vadiraja (1480-1600) is undoubtedly the most outstanding personality among the Pontiffs of the Ashtamathas of Udapi, after the Acharya himself. The 'nirukti' of the name 'Vadiraja' given by Vadiraja himself, in his 'Laksalamkara' throws a hint about his being the heir - apparent of the Acharya as "Bhavisamira".

**- Dr. B.N.K. Sharma**

(ಡಾ. ಗುರುರಾಜಾಚಾರ್ಯ ಕೃ. ನಿಪ್ಪಾಣಿ ಅವರು ಸಂಪಾದಿಸಿರುವ "ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ"ಯ ಮುನ್ನುಡಿಯಲ್ಲಿ).

2. "ರಂಗ ಮಂಗಳ ಉತ್ತುಂಗ ವಿಕ್ರಮಯೆನುತ
ಶೃಂಗೇರಿ ಮಠದಿ ಜಯನಿಕೇತನ ಹಾಕಿದ"

– "ವಾದಿರಾಜ ಧೀರ ಯತಿವರ ವಾದದಲ್ಲಿ ಶೂರ"
ಎಂಬ ಶ್ರೀವಿಜಯದಾಸರ ಕೀರ್ತನೆಯ ಎರಡನೆಯ ನುಡಿ.

He carried the message of Vaishnavism to Gujarat and Brindavana and converted many local people to his fold" ಎಂಬ ಡಾ. ಬಿ.ಎನ್.ಕೆ. ಶರ್ಮ ಅವರ ಅಭಿಪ್ರಾಯದಂತೆ ಕೆಳಸ್ತರದ ವಿವಿಧ ಜನಾಂಗದವರಿಗೆ ಆಶಾಕಿರಣವಾಗಿ ಅವರಿಗೆ ನೈತಿಕ ಸ್ಥೈರ್ಯ ತುಂಬಿದ ಶ್ರೀವಾದಿರಾಜರು ಉತ್ತರ ಭಾರತದ ಅನೇಕ ಪ್ರದೇಶಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ಗುಜರಾತ್, ಬೃಂದಾವನ ಮುಂತಾದ ಕಡೆ ಮಧ್ವಸಿದ್ಧಾಂತವನ್ನು ವ್ಯಾಪಕವಾಗಿ ಪ್ರಚಾರಮಾಡಿ ಅನೇಕರಿಗೆ ವೈಷ್ಣವ ದೀಕ್ಷೆಯನ್ನಿತ್ತರು. "ರುಕ್ಮಿಣೀಶ ವಿಜಯ, ಯುಕ್ತಿಮಲ್ಲಿಕಾ, ನ್ಯಾಯ ರತ್ನಾವಳಿ, ಸರಸಭಾರತೀ ವಿಲಾಸ, ತೀರ್ಥ ಪ್ರಬಂಧ, ಗುರ್ವರ್ಥ ದೀಪಿಕಾ, ಚಕ್ರ ಮೀಮಾಂಸ, ಲಕ್ಷಾಲಂಕಾರ" ಮುಂತಾದ ಅನೇಕ ಪ್ರೌಢ ಶೈಲಿಯ ಗ್ರಂಥಗಳನ್ನು ರಚಿಸಿ ಸಂಸ್ಕೃತ ವಾಙ್ಮಯವನ್ನು ಶ್ರೀಮಂತಗೊಳಿಸಿದರಲ್ಲದೇ ಕನ್ನಡ ಭಾಷೆಯಲ್ಲಿಯೂ ಸಹ "ಗುಂಡಕ್ರಿಯೆ, ವೈಕುಂಠ ವರ್ಣನೆ, ಲಕ್ಷ್ಮೀ ಶೋಭಾನೆ, ಸ್ವಪ್ನಪದ, ಭ್ರಮರ ಗೀತೆ, ನಾರದ ಕೊರವಂಜಿ" ಮೊದಲಾದವುಗಳನ್ನು ರಚಿಸಿ ಕನ್ನಡ ಸಾರಸ್ವತ ಭಂಡಾರವನ್ನು ಸಮೃದ್ಧಗೊಳಿಸಿದರು. ದಕ್ಷಿಣ ಕನ್ನಡದ ಆಡು ಭಾಷೆಯಾದ ತುಳುವಿನಲ್ಲಿಯೂ ಸಹ ವಾದಿರಾಜರು ಹಲವಾರು ಕೃತಿಗಳನ್ನು ರಚಿಸಿದರೆಂಬ ಐತಿಹ್ಯವಿದೆ. ಶ್ರೀಮದಾನಂದ ತೀರ್ಥರು ಅವತಾರತ್ರಯ ರೂಪದಿಂದ ಪ್ರತಿನಿತ್ಯವೂ ರಾಮ, ಕೃಷ್ಣ ಮತ್ತು ವೇದವ್ಯಾಸರಿಗೆ ಪ್ರತ್ಯಕ್ಷವಾಗಿ ನೈವೇದ್ಯವನ್ನು ಸಮರ್ಪಿಸುತ್ತಿದ್ದಂತೆಯೇ ಶ್ರೀವಾದಿರಾಜ ಗುರುವರ್ಯರೂ ಸಹ ತಮ್ಮ ಸಂಸ್ಥಾನದ ಮುಖ್ಯ ಪ್ರತಿಮೆಗಳಾದ ಭೂವರಾಹಾದಿ ಭಗವದ್ರೂಪಗಳಿಗೆ, ಅದರಲ್ಲೂ ವಿಶೇಷವಾಗಿ ತಮಗೆ ಒಲಿದು ಬಂದ ಹಯಗ್ರೀವ ರೂಪಿ ಶ್ರೀಹರಿಗೆ ಪ್ರತಿನಿತ್ಯವೂ ಪ್ರತ್ಯಕ್ಷವಾಗಿ ಕಡಲೆಯ ಹೂರಣವನ್ನು ಅರ್ಪಿಸುತ್ತಿದ್ದರಲ್ಲದೆ "ಹಯವದನ" ಎಂಬ ಅಂಕಿತದಿಂದ ಭಕ್ತಿರಸ ಭರಿತವಾದ ನೂರಾರು ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳನ್ನು ರಚಿಸಿ ಸಾಧಕರ ಕೈದೀವಿಗೆಯಾದರು. ಹಾವು ಕಚ್ಚಿ ಮೃತವಾದ ಎತ್ತನ್ನು ಬದುಕಿಸಲು ಶ್ರೀಮನ್ಮಧ್ವಾಚಾರ್ಯರು ಮಂತ್ರೋದಕ ಪ್ರೋಕ್ಷಿಸಿ "ದ್ವಾದಶಸ್ತೋತ್ರ"ವನ್ನು

ರಚಿಸಿದ ಹಾಗೆ ವಾದಿರಾಜ ಗುರುವರ್ಯರೂ ಸಹ ಪೇಟದಲ್ಲಿ ಸೇರಿಕೊಂಡಿದ್ದ ಮಿಡಿನಾಗರದ ಕಡಿತದಿಂದ ಸತ್ತ ಮದುಮಗನನ್ನು ಬದುಕಿಸಲು ಮಂತ್ರೋದಕವನ್ನು ಪ್ರೋಕ್ಷಿಸಿ "ಲಕ್ಷ್ಮೀ ಶೋಭಾನೆ" ಎಂಬ ಸರಳ ಸುಂದರವಾದ ಕನ್ನಡ ಕೃತಿಯನ್ನು ರಚಿಸಿದರು. "ಕಡಗೋಲು ನೇಣು ಪಿಡಿದುಡುಪಿಯೊಳಗೆ ನಿಂದ" ಉಡುಪಿಯ ಕ್ಷೇತ್ರ ಪ್ರಭುವಾದ ಶ್ರೀಕೃಷ್ಣನ ಪೂಜಾ ವಿಧಾನಗಳು ಸಮರ್ಪಕವಾಗಿ ನಡೆಯಲು ಸೂಕ್ತ ಕ್ರಮ ಕೈಗೊಂಡ ಶ್ರೀವಾದಿರಾಜರು ಶ್ರೀಮಧ್ವಾಚಾರ್ಯರು ನಿರ್ದೇಶಿಸಿದ್ದ ಎರಡು ತಿಂಗಳ ಪರ್ಯಾಯದ ಅವಧಿಯನ್ನು ಕಾಲಧರ್ಮಕ್ಕನು ಗುಣವಾಗಿ ಎರಡು ವರ್ಷಗಳಿಗೆ ವಿಸ್ತರಿಸಿ ತನ್ಮೂಲಕ ತಾವು ಶ್ರೀಮದಾ ಚಾರ್ಯರಿಗೆ ಸರಿ ಸಮಾನರಾದ ಪ್ರಭಾವಶಾಲಿಗಳೆಂದು ತೋರಿಕೊಟ್ಟರು. ಶ್ರೀಮದಾನಂದತೀರ್ಥರು ತ್ರೇತಾಯುಗದಲ್ಲಿ ಹನುಮಂತನಾಗಿ ಅವತರಿಸಿದ್ದಾಗ ಶ್ರೀರಾಮಚಂದ್ರನ ಆದೇಶದಂತೆ ಸಮುದ್ರವನ್ನುಲಂಘಿಸಿ, ಲಂಕಾ ಪಟ್ಟಣದಲ್ಲಿ ಪತಿವಿರಹದಿಂದ ದುಃಖತಪ್ತಳಾಗಿ ಕುಳಿತಿದ್ದ ಸೀತಾದೇವಿಗೆ ರಾಮ ಸಂದೇಶವನ್ನು ಸಾರುವ ಮುದ್ರಿಕೆಯನ್ನಿತ್ತು ಸಂತೋಷಪಡಿಸಿದಂತೆ, ವಾದಿರಾಜ ಗುರುವರ್ಯರೂ ಸಹ ದ್ವಾಪರ ಯುಗದಲ್ಲಿ ದ್ವಿಜರಾಗಿ ಜನ್ಮತಳೆದು ಕೃಷ್ಣನನ್ನು ಸೇರಲು ಹಂಬಲಿಸುತ್ತಿದ್ದ ರುಕ್ಮಿಣೀದೇವಿಯ ಪತ್ರವನ್ನು ದ್ವಾರಕಾಪತಿಯಾದ ಶ್ರೀಕೃಷ್ಣನಿಗೆ ತಲುಪಿಸಿ ಅವರ ಸಮಾಗಮಕ್ಕೆ ಕಾರಣರಾದರು.[1] ಹಿಂದೆ ಜಯಸಿಂಹರಾಜನಿಂದ ಶ್ರೀಮದಾನಂದತೀರ್ಥರು ಸನ್ಮಾನಿತರಾದಂತೆ ಶ್ರೀವಾದಿರಾಜರೂ ಸಹ

---

1. "ಪೃಥ್ವಿಪಾಲನ ಪುತ್ರಿ ಬರೆದ ಶುಭ–
ಪತ್ರವ ಲಕುಮಿಕಳತ್ರನಿಗಿತ್ತೆ"
(ಶ್ರೀಪತಿವಿಠಲದಾಸರು, "ವಾದಿರಾಜ । ವಾದಿರಾಜ" ಎಂಬ ಕೀರ್ತನೆಯಲ್ಲಿ.)

– "ಸುದತಿ ಭೈಷ್ಮಿ ನೀಡಿದ ಓಲೆಯ ತಂದು ।
ಯದುಪತಿಗೊಪ್ಪಿಸಿದವರು ಕಾಣಮ್ಮ ॥"
ಶ್ರೀಬಾದರಾಯಣ ವಿಠಲದಾಸರು "ಸೋದಾಪುರದಿ ಮನೆಮಾಡಿದ । ಮುನಿವರನ್ಯಾರೆ ಪೇಳಮ್ಮಯ್ಯ" ಎಂಬ ಕೃತಿಯಲ್ಲಿ.

ವಿಜಯನಗರದರಸರಿಂದ ರಾಜಗೌರವ ಪಡೆದರಲ್ಲದೆ "ಪ್ರಸಂಗಾಭರಣ ತೀರ್ಥ" ಎಂಬ ಅಪೂರ್ವ ಬಿರುದನ್ನು ಸಂಪಾದಿಸಿದರು. ದುಷ್ಟ ಗುರುವಿನ ಕುತಂತ್ರಕ್ಕೊಳಗಾಗಿ ರಾಜ್ಯ ಭ್ರಷ್ಟನಾಗಿದ್ದ ಸ್ವಾದಿ ಸಂಸ್ಥಾನದ ಅರಸನೂ, ವಿಜಯನಗರದ ಸಾಮ್ರಾಟ ಶ್ರೀಕೃಷ್ಣದೇವರಾಯನ ಸಹೋದರಿಯ ಪುತ್ರನೂ ಆಗಿದ್ದ ಅರಸಪ್ಪ ನಾಯಕನಿಗೆ ಪುನಃ ರಾಜ್ಯ ಕೈವಶವಾಗುವಂತೆ ಅನುಗ್ರಹಿಸಿ ಹಯಾಸ್ಯನ ಕಾರುಣ್ಯವನ್ನು ಮೆರೆದರು. ಶ್ರೀಮದಾಚಾರ್ಯರು ಉಡುಪಿಯಲ್ಲಿ ದ್ವಾರಕೆಯಿಂದ ಬಂದ ಕೃಷ್ಣನನ್ನು ಪ್ರತಿಷ್ಠಾಪಿಸಿ ಅದನ್ನು ಪವಿತ್ರ ಕೃಷ್ಣ ಕ್ಷೇತ್ರವನ್ನಾಗಿ ಮಾರ್ಪಡಿಸಿದಂತೆ ಶ್ರೀವಾದಿರಾಜರೂ ಸಹ ತಾವು ತಪೋನಿರತರಾಗಿದ್ದ ಗಂಗಾದಿ ಸಕಲ ಪುಣ್ಯತೀರ್ಥಗಳಿಂದ ಕೂಡಿದ ಧವಳಗಂಗಾ ಎಂಬ ಸರೋವರ ತಟದಲ್ಲಿ ಸೋದಾ ಕ್ಷೇತ್ರವನ್ನು ನಿರ್ಮಿಸಿ, ತಮ್ಮ ನೆಚ್ಚಿನ ದೂತರಾದ ಶ್ರೀಭೂತರಾಜರ ಮೂಲಕ ಬದರಿಯಿಂದ ತರಿಸಿದ ಋಜೂತ್ತಮ ಪೂಜ್ಯ ಯೋಗ್ಯ ಮೂರ್ತಿಯಾದ ಶ್ರೀ ತ್ರಿವಿಕ್ರಮ ದೇವರನ್ನು ಅಲ್ಲಿ ಪ್ರತಿಷ್ಠಾಪಿಸಿ ಸೋದೆಯನ್ನು ಮತ್ತೊಂದು ಉಡುಪಿಯನ್ನಾಗಿಸಿದರು. ನೂರ ಇಪ್ಪತ್ತು ವರ್ಷಗಳ ಕಾಲ ಸಜ್ಜನರಿಗೆ ದೃಷ್ಟಿಗೋಚರವಾಗಿದ್ದ ವಾದಿರಾಜರು ಉಡುಪಿಯಲ್ಲಿ ನಾಲ್ಕು ಪರ್ಯಾಯಗಳನ್ನು ವೈಭವದಿಂದ ಆಚರಿಸಿದರಲ್ಲದೆ ತಮ್ಮ ಐದನೆಯ ಪರ್ಯಾಯವನ್ನು ತಮ್ಮ ಕರಕಮಲ ಸಂಜಾತರಾದ ಶ್ರೀವೇದವೇದ್ಯರಿಗೆ ಬಿಟ್ಟುಕೊಟ್ಟು ಅವರಲ್ಲಿ ಒಂದಂಶದಿಂದ ನಿಂತು ಉಡುಪಿಯಲ್ಲಿಯೂ ಹಾಗೂ ಪ್ರತ್ಯಕ್ಷವಾಗಿ ಶ್ರೀಲಕ್ಷ್ಮೀ ತ್ರಿವಿಕ್ರಮ, ಶ್ರೀವೇಣುಗೋಪಾಲ, ಶ್ರೀಚಂದ್ರಮೌಳೀಶ್ವರ ಮುಂತಾದ ದೇವತಾ ಮೂರ್ತಿಗಳನ್ನು ಪ್ರತಿಷ್ಠಾಪಿಸಿ ತಾವೇ ನಿರ್ಮಿಸಿದ ಸೋದಾ ಕ್ಷೇತ್ರದಲ್ಲಿಯೂ ಆಚರಿಸಿ ಹೊಸ ಇತಿಹಾಸವನ್ನೇ ನಿರ್ಮಿಸಿದರು. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಸ್ವಯಿಚ್ಛೆಯಿಂದ ಸಶರೀರರಾಗಿ ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದಂತೆ ಅಭಿನವ ಆನಂದತೀರ್ಥರೆಂದು ಪ್ರಸಿದ್ಧರಾದ ಶ್ರೀಮದ್ವಾದಿರಾಜ ಪೂಜ್ಯ ಚರಣರೂ ಸಹ ಸ್ವಯಿಚ್ಛೆಯಿಂದ ಕ್ರಿ.ಶ. 1600ರ ಶಾರ್ವರಿ ಸಂವತ್ಸರದ

ಫಾಲ್ಗುಣ ಬಹುಳ ತದಿಗೆಯಂದು ಸಶರೀರವಾಗಿ ಬದರಿಯಿಂದಲೇ ಬಿಜಯ ಮಾಡಿಸಿದ ಶ್ರೀ ತ್ರಿವಿಕ್ರಮದೇವರ ದಿವ್ಯ ಸನ್ನಿಧಾನಯುಕ್ತವಾದ ಸೋದಾ ಕ್ಷೇತ್ರದಲ್ಲಿ ಬೃಂದಾವನ ಪ್ರವೇಶ ಮಾಡಿದರು. ಹೀಗೆ ಶ್ರೀಮನ್ಮಧ್ವರಿಗೆ ತಾವು ಸರಿಸಮಾನರೆಂಬುದನ್ನು ತಮ್ಮ ಮಹಿಮೋಪೇತ ಜೀವಿತದ ಮೂಲಕ ಸಾದೃಶವಾಗಿ ತೋರಿದ ಶ್ರೀವಾದಿರಾಜ ಗುರುಸಾರ್ವಭೌಮರು ತಾವು ಬೃಂದಾವನಸ್ಥರಾಗಿ ಸುಮಾರು ಮೂವತ್ತು ವರ್ಷಗಳ ನಂತರ, ಅಂದರೆ ಕ್ರಿ.ಶ. 1630ರಿಂದ 1942ರ ವರೆಗೆ, ತಮ್ಮ ಏಕಾಂತ ಭಕ್ತನಾದ ಲಕ್ಷ್ಮೀಪತಿ ಎಂಬ ಏಡಮೂಕ ತೌಳವ ಬ್ರಾಹ್ಮಣನಿಗೆ ಸ್ವಪ್ನದಲ್ಲಿ ಉಪದೇಶಿಸಿದ ಇಪ್ಪತ್ತೆರಡು ಅಧ್ಯಾಯಗಳುಳ್ಳ ಮಂತ್ರತುಲ್ಯ ಅತ್ಯದ್ಭುತ ಗ್ರಂಥವಾದ "ಶ್ರೀಸ್ವಾಪ್ನವೃಂದಾವನಾಖ್ಯಾನ"ದ[1] ಮೂಲಕ ತಾವು ರುದ್ರಾದಿ ಸಕಲ ದೇವತೆಗಳಿಂದ ಪೂಜಿತರಾದ ಋಜೂತ್ತಮ ರೆಂಬುದನ್ನು ಪ್ರತ್ಯಕ್ಷವಾಗಿ ನಿರೂಪಿಸಿದರು. ಹಯಗ್ರೀವದೇವರ ಆಜ್ಞೆ ಯಂತೆ ಭೂಮಿಯಲ್ಲವತರಿಸಿ ಲಕ್ಷ್ಮೀ ಹಯಾಸ್ಯನ ಅಖಂಡೋಪಾಸನೆ ಯಿಂದ ಲೋಕ ಕಲ್ಯಾಣ ಕಾರ್ಯವನ್ನು ಯಶಸ್ವಿಯಾಗಿ ಸಾಧಿಸಿದ ಶ್ರೀವಾದಿರಾಜ ಗುರುವರ್ಯರ ಮಹಿಮಾನ್ವಿತ ವ್ಯಕ್ತಿತ್ವವನ್ನು ಕಣ್ಣಿಗೆ ಕಟ್ಟುವಂತೆ ಕಟ್ಟಿಕೊಡುವ ಮೋಕ್ಷಪ್ರದವಾದ ಈ ಕೃತಿ ಸಕಲ ಸಜ್ಜನರಿಗೂ ಸಂತೋಷಪ್ರದವಾಗಿರುವುದು ಅನುಭವ ವೇದ್ಯವಾದ ವಿಷಯ. ಅಲ್ಲಿಯ ತನಕ ಯಾರೂ ಕಂಡುಕೇಳರಿಯದ ವಿಸ್ಮಯವೆನ್ನಿಸುವ, ಸ್ವಪ್ನದ್ವಾರ

---

1. "ವೃಂದಾವನಾಖ್ಯಾನವ ಸ್ವಪ್ನದಿ।
ಮಂದಮತಿಗೆ ಬೋಧಿಸಿದ। ಕಾಣಮ್ಮಾ॥
(ಶ್ರೀ ಬಾದರಾಯಣ ವಿಠಲದಾಸರು, "ಸೋದಾಪುರದಲ್ಲಿ ಮನೆಮಾಡಿದ। ಮುನಿವರನ್ಯಾರೇ ಪೇಳಮ್ಮಯ್ಯ" ಎಂಬ ಕೃತಿಯಲ್ಲಿ.

– "ವಿಪುಲ ಮತಿ ಪದಕರ್ಹ ಕಪಿಪ ರಾಮನ ಭಂಟ
ಸ್ವಪನದಾಖ್ಯಾನವನೆ ಶಪಥ ಪೂರ್ವಕದೀ।
ವಿಪ್ರಗೋಸುಗವಾಗಿ ಸುಪ್ರಕಟ ಗೈದಿಹರು
ಅಪ್ರತಿಮ ಹಯಮೊಗನ ಸುಪ್ರೇಮ ಪಿಡಿದೂ॥"
(ಶ್ರೀಗುರುಗೋವಿಂದದಾಸರು, "ಪಂಚವೃಂದಾವನದಿ ಮೆರೆಯುತಿರುವಾ" ಎಂಬ ಕೃತಿಯಲ್ಲಿ)

ಅದೂ ಹುಟ್ಟು ಮೂಕನೊಬ್ಬನಿಗೆ, ಮೂರು ದಶಕಗಳ ನಡುನಡುವೆ, ಅಂತರದೊಂದಿಗೆ ಹಂತಹಂತವಾಗಿ ಸಾಕ್ಷಾತ್ ಗುರುವರ್ಯರಿಂದಲೇ ಉಪದೇಶಿಸಿದ ಆಖ್ಯಾನದ ಕಾವ್ಯ ಶೈಲಿಯಂತೂ ಅತ್ಯಂತ ಮನೋಹರವಾದದ್ದು.

"ಹಯಗ್ರೀವಂ ಚಿದಾನಂದವಿಗ್ರಹಂ ಸದನುಗ್ರಹಮ್ ।
ದಶಗ್ರೀವಚ್ಛಿದಂ ಶಾಪಾನ್ಮಣಿಗ್ರೀವ ವಿಮೋಚನಮ್ ॥"

ಎಂದು ಪ್ರಾರಂಭವಾಗುವ ಈ ಶ್ರುತಿಗೀತೆಯ ಶ್ಲೋಕಗಳನ್ನು ಮಾತ್ರ ಆ ಏಡಮೂಕ ವಿಪ್ರನಿಂದ :

"ಏಡಮೂಕಂ ದ್ವಿಜಂ ಸ್ವಪ್ನೇಬೋಧಯನ್ನಾತ್ಮವೃತ್ತಕಮ್ ।
..... ಮಂತ್ರತುಲ್ಯಂ ಮಹಾಗ್ರಂಥಂ ರಚಯಾಮಾಸ ವಾದಿರಾಟ್ ।
ಪ್ರಾತಸ್ತದ್ವಚನಾಚ್ಚಿತ್ರಂ ನಿಸ್ಸೃತಂ ಗುರುರಾಣ್ಮನು ।
ಶ್ರೀವೇದನಿಧಿರಾಕರ್ಣ್ಯ ಲೇಖಯಾಮಾಸ ಮತ್ಕರಾತ್ ॥"

ಎಂಬಂತೆ ಪ್ರತಿದಿವಸ ಬೆಳಿಗ್ಗೆ ಕ್ಲುಪ್ತ ಕಾಲದಲ್ಲಿ, ಆಗಿದ್ದ ಸೋದಾ ಪೀಠಾಧಿಪತಿಗಳಾದ ಶ್ರೀವೇದನಿಧಿಗಳೆದುರಿಗೆ ಗುರುವನುಗ್ರಹದಿಂದ ಉಚ್ಚರಿಸುವ ಸಾಮರ್ಥ್ಯ ಉಂಟಾಗುತ್ತಿದ್ದದ್ದೂ ಸಹ ಆಶ್ಚರ್ಯಕರ ವಾದದ್ದೇ.

"ಪಂಚವೃಂದಾವನೇ ಪುಣ್ಯೇ ಪಂಚ ರೂಪಾತ್ಮಕೋ ಹರಿಃ ।
ಪಂಚೀಕೃತ್ಯ ಸ್ವರೂಪಾಣಿ ನಿತ್ಯಂ ಸನ್ನಿಹಿತಃ ಸ್ವಯಮ್ ॥"

ಎಂಬ ಆಖ್ಯಾನೋಕ್ತಿಯಂತೆ ಶ್ರೀವಾದಿರಾಜ ಗುರುವರ್ಯರು ತಾವೇ ನಿರ್ಮಿಸಿ ಪೂಜಿಸಿದ ಶ್ರೀಸೋದಾ ಕ್ಷೇತ್ರದ ಪಂಚವೃಂದಾವನದಲ್ಲಿರುವ ಪಂಚ ರೂಪಾತ್ಮಕನಾದ ಶ್ರೀಹರಿಯನ್ನು ಸೇವಿಸುತ್ತಾ ಈ ಹೊತ್ತಿಗೂ ಅಲ್ಲಿ ನಿತ್ಯ ಸನ್ನಿಹಿತರಾಗಿದ್ದಾರೆ. ಶ್ರೀಮದಾನಂದತೀರ್ಥರು ಬದರಿಕಾಶ್ರಮದಲ್ಲಿ ಪ್ರತಿನಿತ್ಯ ವೇದವ್ಯಾಸದೇವರ ದರ್ಶನ, ಸಂಭಾಷಣಾದಿಗಳಲ್ಲಿ ತೊಡಗಿರುವಂತೆ ವಾದಿರಾಜರೂ ಸಹ ತಮ್ಮ ಪಂಚವೃಂದಾವನದ ಎದುರಿಗಿರುವ ವೇದವ್ಯಾಸ ದೇವರ ಮಂಗಳಕರ ಮೂರ್ತಿಯನ್ನು

ನಿತ್ಯವೂ ಸಂದರ್ಶಿಸುತ್ತಾ ಶಾಸ್ತ್ರಸಲ್ಲಾಪದಲ್ಲಿ ನಿರತರಾಗಿದ್ದಾರೆ. ಮಾಯಾವಾದವನ್ನು ಖಂಡಿಸಿ, ಜಗತ್ತಿನಲ್ಲಿ ಶ್ರೀಹರಿಯ ಸರ್ವೋತ್ತಮತ್ವ ವನ್ನು ಸ್ಥಾಪಿಸಿದ ಶ್ರೀಮನ್ಮಧ್ವಾಚಾರ್ಯರನ್ನು ವಾಯುದೇವರ ಅವತಾರವೆಂದು ನಂಬುವಂತೆಯೇ "ಬಾಧಿಸುವ ದುಶ್ಶಾಸ್ತ್ರಗಳನೆ ಮುರಿದು ವಾದದಿಂದಲಿ ಸಕಲ ಮೇಧಿನಿಯೊಳಗಿಪ್ಪ ದುರ್ವಾದಿಗಳ ಭಂಗಿಸಿ" ದ್ವೈತ ಸಿದ್ಧಾಂತದ ವಿಜಯ ಪತಾಕೆಯನ್ನು ದಿಗಂತದೆತ್ತರಕ್ಕೆ ಎತ್ತಿಹಿಡಿದ ಶ್ರೀವಾದಿರಾಜ ಗುರುಸಾರ್ವಭೌಮರನ್ನು ಮುಂದೆ ವಾಯು ಪಟ್ಟಕ್ಕೆ ಬರುವ ಲಾತವ್ಯನಾಮಕ ಋಜುಗಳೆಂದು[1] ಅನೇಕ

---

1. ಭಗವದ್ವಿಷಯದಲ್ಲಿ ಪರಿಶುದ್ಧವಾದ ಜ್ಞಾನ ಮತ್ತು ಕ್ರಿಯಾನುಸಂಧಾನವುಳ್ಳ ಉಚ್ಚಮಟ್ಟದ ದೇವತೆಗಳು ಋಜುಗಳು. ಬ್ರಹ್ಮ ಪದವಿಯನ್ನು ಪಡೆಯುವ ಯೋಗ್ಯತೆಯು ಅನಾದಿಸಿದ್ಧವಾಗಿ ಋಜುಗಳಲ್ಲಿದೆ.

**"ಬ್ರಹ್ಮಾಚವಾಯುಶ್ಚ ಸರಸ್ವತೀಚ ಲಾತವ್ಯ ಸರ್ವೇ ಋಜುಯೋಗಿನಶ್ಚ।**
**ಅಚ್ಛಿನ್ನ ಭಕ್ತಾಶ್ಚ ಸದಾ ಮುರಾರೇಃ ನ ಕಾಮ್ಯ ಭಕ್ತಾಃ ಶುದ್ಧರೂಪಾ ಹಿ ತೇ ಚ"**

ಎಂಬ ಗರುಡ ಪುರಾಣೋಕ್ತಿಯಂತೆ ಬ್ರಹ್ಮ, ವಾಯು, ಸರಸ್ವತಿ ಮತ್ತು ಲಾತವ್ಯಾದಿ ಎಲ್ಲರೂ ಸಹ ಭಕ್ತಿಯುಳ್ಳವರು. ಶುದ್ಧ ಸ್ವರೂಪರಾದ ಅವರು ಯಾವ ಕಾರಣಕ್ಕೂ ಕಾಮ್ಯ ಭಕ್ತಿಯನ್ನು ಮಾಡುವವರಲ್ಲ.

**"ಅನಾದಿಕಾಲತಃ ಸರ್ವದೋಷಹೀನಾ ಗುಣಾಧಿಕಾಃ।**
**ಸರ್ವಜೀವಗಣೇಭ್ಯೋ ಯೇ ತೇ ಹಿ ವಾಯುತ್ವಮಾಪ್ನುಯಃ॥**

ಎಂಬುದಾಗಿ ಶ್ರೀಮನ್ಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದ ಮೂವತ್ತೆರಡನೆಯ ಅಧ್ಯಾಯದಲ್ಲಿ ಹೇಳಿರುವರಲ್ಲದೇ ವಾಮನ ಪುರಾಣದ ಋಜುವೋಖ್ಯಾನದಲ್ಲಿ ಬರುವ ಪ್ರಸಿದ್ಧರಾದ ಕಲ್ಕಿಯಿಂದ ಬ್ರಹ್ಮನ ಪರ್ಯಂತ ನೂರು ಋಜುಗಳ ಮಂಗಳಕರ ನಾಮಗಳನ್ನು ಶ್ರೀಜಗನ್ನಾಥದಾಸರು ತಾವು ರಚಿಸಿರುವ ಹರಿಕಥಾಮೃತಸಾರದ "ಕಲ್ಪಸಾಧನ ಸಂಧಿ"ಯಲ್ಲಿ ಏಳು ಪದ್ಯಗಳಲ್ಲಿ ವಿಶದವಾಗಿ ಉಲ್ಲೇಖಿಸಿದ್ದಾರೆ. ಶ್ರೀಗುರು ತಂದೆ ವರದಗೋಪಾಲವಿಠಲರೂ ಸಹ "ಗುರರಾಜ ಗುರುರಾಜ ನೀ ಕಲ್ಕಿಯಿಂದೊಂದಿತ ಗುರುರಾಜ" ಎಂಬ ದೀರ್ಘ ಕೀರ್ತನೆಯಲ್ಲಿ ಋಜುಗಣದವರ ಪಟ್ಟಿಯನ್ನೇ ಪದ್ಯರೂಪದಲ್ಲಿ →

ಜ್ಞಾನಿವರೇಣ್ಯರು ಅಭಿಪ್ರಾಯಪಡುತ್ತಾರೆ. ಇದನ್ನು ದೃಢೀಕರಿಸುವ ಸ್ಪಷ್ಟ ವಚನಗಳು ವ್ಯಾಸ–ದಾಸ ಸಾಹಿತ್ಯಗಳಲ್ಲಿ ವಿಪುಲವಾಗಿವೆ.

"ಶಂಕೆಬಿಡಿಸುವ ಶಂಕರೇಶರ, ಋಜುಗಣೇಶಮರೇಂದ್ರ ವಂದಿತ, ಉದ್ದಂಡ ಮಾರುತಿ ಪದಕೆ ಬರುವ ಭಾವಿಬ್ರಹ್ಮರ ಕಂಡೆ" ಎಂಬುದಾಗಿ ಶ್ರೀನಿಜಪುರಂದರದಾಸರು ಕೊಂಡಾಡಿದರೆ, "ಅಜಪದಕೆ ಅರ್ಹನಾದ ಋಜುಗಣ ಜೀವೋತ್ತಮನ। ನಿಜಪದಕೆ ಬರುವ ವಿಜಯವಿಠಲನ ದಾಸ" ಎಂದು ಶ್ರೀವಿಜಯದಾಸರು "ವಾದಿರಾಜ ಧೀರ । ವಾದದಲಿ ಶೂರ" ಎಂಬ ಕೀರ್ತನೆಯಲ್ಲಿ ಸ್ತುತಿಸಿದ್ದಾರೆ.

**"ಋಜುಗಣ ಪಂಕ್ತಿಯೊಳಗೆ ಕುಳಿತಾ**
**ನಿಜ ನಿರ್ಮಲ ಸುಜ್ಞಾನ ಧ್ಯಾನದಿಂದ ಜ್ಞಾನಪಕ್ವಾದ ಮಾನವುಳ್ಳ**
**ಸುಜನ ಶಿರೋಮಣಿ ವಾದಿರಾಜನು ತಾ**
**ನಿಜವಾಗಿ ಬೊಮ್ಮಾಂಡ ಪುರಾಣಸಾಧಕದಿಂದ**
**ಅಜಪದ ಸಲ್ವದು ಲೇಶ ಸಂಶಯ ಬೇಡಿ**
**ನಿಜ ನಿಜ ನಿಜವೆಂದು ನಿತ್ಯದಿ ಕೊಂಡಾಡಿ ॥"**

ಎಂಬುದಾಗಿ "ಮಾಧವನಂಘ್ರಿ ನಿತ್ಯ ಮೋದದಲ್ಲಿ ಭಜಿಪ" ಎಂಬ ತಮ್ಮ ಸುಳಾದಿಯಲ್ಲಿ ವಿಜಯರಾಯರು ಮತ್ತೆ ಸ್ಪಷ್ಟಪಡಿಸಿದ್ದಾರೆ. "ಘನ್ನ ಋಜುಗಣದೊಳಗೆ ಮಾನ್ಯನಾಗಿಹ ಸುಪ್ರ। ಸನ್ನ ದ್ವಿಜಕುಲರನ್ನ ನಂಬಿದೆನೋ ನಿನ್ನ" ಎಂದು ಶ್ರೀವೇಣುಗೋಪಾಲದಾಸರು ಹಾಡಿದ್ದಾರೆ. "ಭಾಜ ಋಜುಗಣ ರಾಜಮಾನ ಗುಣ । ರಾಜವಿನುತ ಯತಿರಾಜಾ"

---

→ ಕೊಟ್ಟಿದ್ದಾರೆ. ಈ ಕೃತಿಯಲ್ಲಿ ವಾದಿರಾಜರನ್ನು ಮುಂದಿನ ವಾಯುಪಟ್ಟಕ್ಕೆ ಬರುವ ಲಾತವ್ಯನಾಮಕ ಋಜುಗಳೆಂದು ದಾಸರು ಸದೃಢವಾಗಿ ಸಾರಿದ್ದಾರೆ.

**"ವ್ಯಾಸಸೇವಾರತೋ ನಿತ್ಯಂ ವಾದಿರಾಜೋ ಋಜುರ್ಯತಿಃ।**
**ದುರ್ವಾದೀನ್ ಪರಿಮಥ್ಯಾಶು ಮತ್ಪದಂ ಯಾತುಮರ್ಹತಿ ॥**
**ಸ್ಥಾಪಯಿಶ್ಯತಿ ಮಚ್ಛಾಸ್ತ್ರಂ ತೇನ ಕ್ಷೇಮೋಭವೇದ್ಧಿ ವಃ ॥"**

ಎಂಬ "ಬ್ರಹ್ಮವೈವರ್ತಪುರಾಣ" ದಲ್ಲಿ ಬರುವ ಬ್ರಹ್ಮದೇವರ ವಚನಗಳಂತೂ ವಾದಿರಾಜರ ಋಜು ಸ್ವರೂಪವನ್ನು ಸ್ಪಷ್ಟವಾಗಿ ಬಣ್ಣಿಸುತ್ತವೆ.

ಎಂದು ಶ್ರೀರಾಮವಿಠಲರು ಹೇಳಿದರೆ ಅಭಿನವ ಜನಾರ್ದನವಿಠಲರು 'ವಾದಿರಾಜ ಪಾಲಿಸೋ ನೀ ಎನ್ನ' ಎಂಬ ಕೀರ್ತನೆಯಲ್ಲಿ "ಋಜುಗಣಮಿಳಿತ ನೀ । ರಜನೇ ನಿನ್ನಯ ಪಾದ ॥ ಭಜನೆ ಮಾಡುವ ಎನ್ನ । ಋಜುಮಾರ್ಗವ ಪಿಡಿಸೋ" ಎಂದು ಕೇಳಿಕೊಳ್ಳುತ್ತಾರೆ. ಕೌತಾಳದ ಶ್ರೀಗುರುಜಗನ್ನಾಥದಾಸರು ವಾದಿರಾಜರನ್ನು ಕುರಿತು ಹಲವಾರು ಕೀರ್ತನೆಗಳನ್ನು ರಚಿಸಿ "ಸತ್ಯಲೋಕ ಸುಮುಖ್ಯ ಪಾತ್ರ, ಪಂಚರೂಪಾತ್ಮಕ ಮುಂಚಿಗೆ ಪ್ರಾಣ, ವಿರಂಚಿ, ಗಂಧವಾಹನನಾಗಿ ಮಂದಜಾಸನಪದ ಪೊಂದಿದ, ಪುರುಹೂತ ಪ್ರಮುಖ ಭೂತನಾಥನುತ ಮಾತರಿಶ್ವ, ಶಂಭುಮುಖರಕದಂಬವಂದ್ಯ, ಭಾವಿವಿಧಾತ" ಎಂದೆಲ್ಲಾ ಸ್ತೋತ್ರ ಮಾಡಿದ್ದಾರೆ. ಶ್ರೀವ್ಯಾಸವಿಠಲರು ವಾದಿರಾಜರನ್ನು "ಉರಗಭೂಷಣನಿಂದ ಪೂಜ್ಯ" ನೆಂದು ಹೊಗಳಿದರೆ ಶ್ರೀರಮಾಪತಿವಿಠಲರು "ಪತಿತ ಪಾವನ ರಮಾಪತಿ ವಿಠಲನ ನಿರುತ ನೋಳ್ಪ ಲಾತವ್ಯ ಖ್ಯಾತ" ಎಂದು ವಾದಿರಾಜರನ್ನು ಲಾತವ್ಯನಾಮಕ ಋಜೂತ್ತಮರೆಂದು ಘೋಷಿಸುತ್ತಾರೆ. "ಶ್ರೀಮದಶ್ವಗ್ರೀವ ನೊಲುಮೆಗೆ ಧಾಮರೆನಿಪ ಶ್ರೀರಾಜರ ದಾಸರಾಗಿರೋ, ದಿವ್ಯಲೋಕ ಭವ್ಯ ಉಭಯವಿಧ ಕಾವ್ಯ ರಚನ ಲಾತವ್ಯಯತೀಂದ್ರರ ದಾಸರಾಗಿರೋ" ಎಂದು ಸಜ್ಜನರಿಗೆ ಕರೆನೀಡುವ ಶ್ರೀಕಮಲಾಪತಿ ವಿಠಲದಾಸರಂತೂ :

"ಒಂದು ಕ್ಷಣದಲಿ ವಾದಿರಾಜರ
ದ್ವಂದ್ವ ಪದವನು ಭಜಿಸುವವರಿಗೆ
ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು ।
ಈ ಮಂದಮತಿಗಳು ಬಲ್ಲರೇ ಗೋ-
ವಿಂದ ಭಕ್ತರ ಮಹಿಮೆಯನು ಪು-
ರಂದರಾದಿಗಳು ಅರಿವರಲ್ಲದೆ ಮಿಕ್ಕರು ಅರಿಯಬಹುದೆ ॥

ಸಾರಕೃಥೀಕರಿಸಲನುದಿನ
ಸಾರವರ್ಣಾಭಿಮಾನಿ ದೀನೋ-
ದ್ಧಾರಗೋಸುಗ ಹರಿಕಥಾಮೃತಸಾರವನ್ನು ರಚಿಸಿ ।

ಸ್ಥೈರ್ಯಮಾನಸದಿಂದ ಭಾವಿ
ಭಾರತಿಪತಿ ವಾದಿರಾಜರ
ಭೂರಿಕೋಶಕೆವೊಪ್ಪಿಸುತಲಾಪಾರ ಮುದ ಪಡೆದು ॥"

ಎಂದು ತಾವು ರಚಿಸಿರುವ "ಶ್ರೀಮದ್ಧರಿಕಥಾಮೃತಸಾರ"ದ ವ್ಯಾಖ್ಯಾನದಲ್ಲಿ ಮನುವುಬ್ಬಿ ವರ್ಣಿಸುತ್ತಾರೆ.

"ವಾದಿರಾಜನ ಪಾದವ। ಭಜಿಸಿ ಭವ।
ಛೇದಿಸಿ ಪಡೆ ಮೋದವ ॥

ಶ್ರೀದನ। ಪದಾರಾಧನ। ಸಂಸಕ್ತನ। ಲಾತವ್ಯನ
ಮೇದಿನೀಸುರ। ಖೇದಹರ ಪ್ರತಿ।
ವಾದಿಭೇದ ವಿ। ನೋದಶೀಲನ ॥"

ಎಂಬುದಾಗಿ ಇತ್ತೀಚಿನವರಾದ ಶ್ರೀತಂದೆ ವೆಂಕಟೇಶದಾಸರು ಸ್ತುತಿಸಿದರೆ,

"ಭೂಸುರ ಋಣ ಕ್ಲೇಶಾಪಹ ನಮೋ ನಮೋ
ಮೂಷಕ ಬಹುಭಯ ನಾಶ ನಮೋ ॥
ಕಾಶಿ ಬದರಿ ರಾಮೇಶ್ವರ ಕ್ಷೇತ್ರ ಪ್ರ-
ವಾಸಿಸಿ ಸತ್ಕೃತೆ ಕರ್ತೃ ನಮೋ ॥
ಲೇಶ ಮಣ್ಣು ತಾ ಕೊಡುತಲಿ ವಿಪ್ರಗೆ
ದೋಷವ ಕಳೆದಗೆ ನಮೋ ನಮೋ ॥
ಮೀಸಲ ಮನದಿ ನಿಷೇವಿಸೆ ಸಂಸ್ಕೃತಿ
ಪೋಷಿಪ ಶ್ರೀಲಾತವ್ಯ ನಮೋ ॥"

ಎಂದು ಶ್ರೀಗುರುಗೋವಿಂದದಾಸರು ಶ್ರೀವಾದಿರಾಜರನ್ನು ಲಾತವ್ಯ ನಾಮಕ ಋಜೂತ್ತಮರೆಂದು ಸ್ಪಷ್ಟ ಮಾತುಗಳಿಂದ ಸಾರಿದ್ದಾರೆ. ಒಟ್ಟಿನಲ್ಲಿ 'ವಾದಿರಾಜರು ಋಜೂತ್ತಮರು' ಎಂಬುದು ಜ್ಞಾನಿಗಳಾದ ಎಲ್ಲಾ ಹರಿದಾಸರ ಸ್ಪಷ್ಟ ನಿಲುವಾಗಿದೆ.

"ಯೋ ಮಾ ದೇವಂ ವಿಜಾನಾತಿ ಋಜುಸ್ಥಂ ಪುಣ್ಯಕೃನ್ನರಃ।
ಸಯಾತಿ ನಿಲಯಂ ಪುಣ್ಯಂ ಯದ್ಗತ್ವಾ ನ ನಿವರ್ತತೇ ॥

ಮಮಾಪಿ ಜೀವೋತ್ತಮತ್ವಂ ಶ್ರುತ್ವಾ ಸರ್ವೇ ಮಮಪ್ರಿಯಾ।
ಗರ್ವಂ ಹಿತ್ವಾಪ್ರದಾಸ್ಯಂತು ಗುರ್ವಂತರ್ಯಾಮಿಣಃ ಕರಃ॥"

ಎಂಬುದಾಗಿ ಶ್ರೀವಾದಿರಾಜರೇ ಸ್ವಾಪ್ನವೃಂದಾವನಾಖ್ಯಾನದಲ್ಲಿ "ನನ್ನನ್ನು ಋಜುದೇವತೆಯೆಂದು ತಿಳಿಯುವ ಪುಣ್ಯವಂತನಾದ ಮೋಕ್ಷಯೋಗ್ಯ ಜೀವಿಯು ಪುನಃ ಸಂಸಾರ ಚಕ್ರದಲ್ಲಿ ಬೀಳುವುದಿಲ್ಲ. ಆದ್ದರಿಂದ ನನಗೆ ಪ್ರಿಯರಾದ ಭಕ್ತರೆಲ್ಲರೂ ನನ್ನ ಜೀವೋತ್ತಮತ್ವವನ್ನು ಈ ಪವಿತ್ರ ಗ್ರಂಥದಿಂದ ಗ್ರಹಿಸಿ ಗರ್ವರಹಿತರಾಗಿ ತಮ್ಮ ಸತ್ಕರ್ಮರೂಪಕ ಕರವನ್ನು ಗುರುವಾದ ನನ್ನ ಅಂತರ್ಯಾಮಿಗೆ ಸಮರ್ಪಿಸಬೇಕೆಂದು" ಕರೆ ನೀಡುತ್ತಾರೆ. ಇದರಂತೆ ಶ್ರೀವಾದಿರಾಜರನ್ನು ಮುಂದಿನ ಸಮೀರ ಪದವಿಗೆ ಬರುವ ಋಜೂತ್ತಮರೆಂದು ಭಾವಿಸಿ ಉಪಾಸಿಸುವ ಅನೇಕ ಜ್ಞಾನಿವರೇಣ್ಯರು ನಮ್ಮ ಭರತ ಭೂಮಿಯಲ್ಲಿ ಆಗಿ ಹೋಗಿದ್ದಾರೆ. ಅಂತಹವರಲ್ಲಿ ರಾಜರ ಶುಭನಾಮವನ್ನೇ ಧರಿಸಿದ "ಶ್ರೀವಾದಿರಾಜ ಪದಪದ್ಮ ಮಧುಪ"ರಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರೂ ಒಬ್ಬರು. ಪ್ರಕಾಂಡ ಪಂಡಿತರಾಗಿದ್ದರೂ ಇಭವರದ ವಿಠಲಾಂಕಿತರಾಗಿ ಹರಿದಾಸರಾಗಿದ್ದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ವ್ಯಾಸ-ದಾಸ ಸಾಹಿತ್ಯದ ಸವ್ಯಸಾಚಿಗಳೆಂದೂ, "ರಾಜರ ಋಜುತ್ವ ಪ್ರತಿಪಾದಕರ ಸೇನಾಪತಿ" ಗಳೆಂದೂ, 'ಗುರುವಾದಿರಾಜ ಮತ್ಸರಿದುರುಳರ ಗೆದ್ದು, ಸತ್ತತ್ವ ಸುರಿದ ಸುಧಾಕರ' ರೆಂದೂ ಸಜ್ಜನವೃಂದದಲ್ಲಿ ಪ್ರಸಿದ್ಧರಾಗಿದ್ದಾರೆ.

## ಧೀರೋದಾತ್ತ ವ್ಯಕ್ತಿತ್ವ

ಶ್ರೀರಾಜರ ಕರುಣಾ ವಿಶೇಷದಿಂದಲೇ ಜನ್ಮ ತಳೆದ ಪಂಡಿತವರೇಣ್ಯರಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಶ್ರೀವಾದಿರಾಜ ಗುರುಸಾರ್ವಭೌಮರ ಋಜುತ್ವ ಪ್ರತಿಪಾದನೆಯನ್ನು ತಮ್ಮ ಬದುಕಿನ ಮುಖ್ಯ ಧ್ಯೇಯವಾಗಿಟ್ಟುಕೊಂಡಿದ್ದರಲ್ಲದೆ ಈ ಗುರಿ ಸಾಧನೆಗಾಗಿ ತಮ್ಮ ಬಾಳಿನ ಸಾರ ಸರ್ವಸ್ವವನ್ನೂ ಮೀಸಲಾಗಿಟ್ಟಿದ್ದ ಮಹಾನುಭಾವರು. ವ್ಯಾಸ ದಾಸ ಸಾಹಿತ್ಯಗಳಲ್ಲಿ ಅಪಾರ ಪರಿಣತಿಯನ್ನು

ಪಡೆದಿದ್ದ ಆಚಾರ್ಯರು ರಾಜರ ಋಜುತ್ವ ಸಾಧಕ ಪ್ರಮಾಣಗಳನ್ನು ಸಂಗ್ರಹಿಸಿ ಋಜುತ್ವ ವಿರೋಧಿಗಳ ಅಪಲಾಪಗಳು ಆಧಾರರಹಿತವೆಂದು ಪ್ರತ್ಯಕ್ಷ, ಅನುಮಾನ, ಆಗಮಗಳಿಂದ ಸಮರ್ಥವಾಗಿ ನಿರೂಪಿಸಿದರು. 'ಶ್ರೀಮಧ್ವಮುನಿಗಳ ಸಮೀರತ್ವದಂತೆ ಶ್ರೀ ವಾದಿರಾಜ ಗುರುವರ್ಯರ ಭಾವಿಸಮೀರತ್ವ'ವೂ ಸಹ ದ್ವೈತಸಿದ್ಧಾಂತದ ಅವಿಭಾಜ್ಯ ತಾತ್ವಿಕ ಅಂಶವೆಂಬ ಸತ್ಯವನ್ನು ಸಾದರಪಡಿಸಲು ಆಚಾರ್ಯರು ಶಾಸ್ತ್ರಸಮ್ಮತ ಸಾಧು ಮಾರ್ಗದಲ್ಲಿ ಪ್ರಯತ್ನಿಸಿದರು. ತಮ್ಮ ಉದ್ದೇಶ ಸಾಧನೆಗಾಗಿ "ಶ್ರೀಮದ್ವಾದಿರಾಜ ಋಜುತ್ವ ವಿರೋಧಿಕಪೋಲ ಚಪೇಟಿಕಾ, ಋಜುತ್ವ ವಿರೋಧಿಪರಿಮರ್ದನ" ಮುಂತಾದ ಪ್ರೌಢ ಗ್ರಂಥಗಳನ್ನು ರಚಿಸಿ ಬಳಿತ್ಥಾದಿ ಸೂಕ್ತಗಳನ್ನು ಋಜುಪುಂಗವರಾದ ಲಾತವ್ಯ ಶ್ರೀವಾದಿರಾಜರ ಪರವಾಗಿ ಅರ್ಥೈಸಿದರು.[1] ವಾದಿರಾಜರ ಕೋಶಕೊಪ್ಪುವ ಶ್ರೀಜಗನ್ನಾಥದಾಸರ "ಹರಿಕಥಾಮೃತಸಾರ" ಗ್ರಂಥಕ್ಕೆ ಸಂಸ್ಕೃತದಲ್ಲಿ "ಶ್ರೀವ್ಯಾಸದಾಸ ಸಿದ್ಧಾಂತಕೌಮುದೀ ಮತ್ತು ಶ್ರೀಹರಿಕಥಾಮೃತಸಾರ ಪಂಚಿಕಾ" ಹಾಗೂ ಸಂಸ್ಕೃತ ಮಿಶ್ರಿತ ಕನ್ನಡದಲ್ಲಿ "ಭಾವಸೂಚನೆ" ಎಂಬ ವ್ಯಾಖ್ಯಾನಗಳನ್ನು ರಚಿಸಿ ಸಾಧಕರಿಗೆ ಉಪಕರಿಸಿದರು. "ಋಕ್ ಸಹಸ್ರ ಪದ್ಯಾರ್ಥ, ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯ ಟಿಪ್ಪಣಿ ಗುರುರಾಜೀಯಸಾರಃ, ಓಂಕಾರಾರ್ಥ, ನಾರಾಯಣ ನಾಮಸ್ಮರಣ ನಿರೂಪಣಮ್, ಬದರೀನಾರಾಯಣಸ್ತುತಿ, ತೀರ್ಥಪಾದನಿರೂಪಣಮ್, ಶ್ರೀವಿಷ್ಣುತೀರ್ಥವಿಜಯ, ಅಧ್ಯಾತ್ಮರಸರಂಜನೀ ವ್ಯಾಖ್ಯಾ, ಕರ್ಮಾಕರ್ಮ ವಿವೇಕ, ಶ್ರೀವಾದಿರಾಜಕೃತ ಅಭಯಸ್ತುತಿವಿವರಣಮ್, ಅಪರೋಕ್ಷಜ್ಞಾನ ಸಾಧನಾನಿ, ಶ್ರೀಸ್ವಾಪ್ನವೃಂದಾವನಾಖ್ಯಾನ ಪ್ರಾಕೃತವ್ಯಾಖ್ಯಾ" ಮುಂತಾದ ಹಲವಾರು ಅಮೂಲ್ಯ ಗ್ರಂಥಗಳನ್ನು ರಚಿಸಿ ಸಾರಸ್ವತ ಭಂಡಾರವನ್ನು ಶ್ರೀಮಂತಗೊಳಿಸಿದರು.

---

1. "ಬಳಿತ್ಥೇತ್ಯಾದಿ ಶ್ರುತಯೋ ವ್ಯಾಖ್ಯಾತಾಸ್ತೇನ ಧೀಮತಾ ।
ಗುರುರಾಜರ್ಜುತ್ವವಿರೋಧಿಮರ್ದನಾಭಿದಮುತ್ತಮಮ್ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ–10)

ಮಧ್ವಶಾಸ್ತ್ರದ ಅಧಿಕೃತವಕ್ತಾರರಂತೆ ಶೋಭಿಸುತ್ತಿದ್ದ ಆಚಾರ್ಯರ ಸಿದ್ಧಾಂತ ಸೇವೆಯೂ ಸಹ ಅನುಪಮವಾದದ್ದು. "ದುರ್ಮಾಯಿ ಮತ್ತಗಜಪುಂಗವಪಂಚವಕ್ತ್ರ"[1] ಎಂದು ಶ್ಲಾಘನೀಯರಾಗಿದ್ದ ಅವರು ಭಾರತದಾದ್ಯಂತ ಸಂಚರಿಸಿ ಅನೇಕ ಪರವಾದಿಗಳನ್ನು ಗೆದ್ದು ದ್ವೈತದುಂದುಭಿಯನ್ನು ತಾವು ಭೇಟಿಯಿತ್ತ ಸ್ಥಳಗಳಲೆಲ್ಲಾ ಸಮರ್ಥವಾಗಿ ಮೊಳಗಿಸಿದರು. ಮತ್ತೊಂದು ವಿಶೇಷವೆಂದರೆ ಆಚಾರ್ಯರು ಎಲ್ಲಿಯೇ ಹೋಗಲಿ, ದ್ವೈತಸಿದ್ಧಾಂತ ಬೋಧನೆಯ ಒಂದು ಪ್ರಮುಖ ಅಂಗವೆಂಬಂತೆ ವಾದಿರಾಜರ ಭಾವಿಸಮೀರತ್ವವನ್ನು ಸದೃಢವಾಗಿ ಪ್ರತಿಪಾದಿಸಲು ಮರೆಯಲಿಲ್ಲ. ಈ ವಿಷಯದಲ್ಲಿ ಅವರು ಹೊಂದಿದ್ದ ಆಗ್ರಹಪೂರ್ವಕವಾದ ಋಜುದೀಕ್ಷೆ" ಅಪೂರ್ವವಾದದ್ದು. ಸಂಕುಚಿತ ಮನೋಭಾವದ ಮತಾಂಧ ಕುತರ್ಕಿಗಳಿಂದ ಪ್ರಚೋದಿತರಾಗಿ ಅವರು ಕೆಲವು ಸ್ಥಳಗಳಲ್ಲಿ 'ಸಾತ್ವಿಕ ಸಮರ'ವನ್ನೇ ಸಾರಬೇಕಾಗಿ ಬಂದಿತು. ಆದರೆ ಎಂತಹ ಪರಿಸ್ಥಿತಿ ಎದುರಾದರೂ ಅವರು ಅಶಾಸ್ತ್ರೀಯವಾದ ವಾಮಮಾರ್ಗವನ್ನು ಅನುಸರಿಸಲಿಲ್ಲ. ತಾವು ನಂಬಿದ್ದ ತತ್ವವನ್ನು ದಾಕ್ಷಿಣ್ಯಕ್ಕೆ ಮಾರಿಕೊಳ್ಳಲಿಲ್ಲ. ಇದಕ್ಕೆ ಅವರು ದಕ್ಷಿಣ ಭಾರತದ ವಿದ್ವತ್ಪುರಿಗಳೆನ್ನಿಸಿದ ಕುಂಭಕೋಣ ಮತ್ತು ಕೊಯಮತ್ತೂರುಗಳಲ್ಲಿ ನಡೆಸಿದ ದಿಟ್ಟ ಹೋರಾಟಗಳೇ ಉದಾಹರಣೆಯೆನ್ನಬಹುದು. ಆ ನಗರಗಳಲ್ಲಿ ಆಚಾರ್ಯರು ಊದಿದ 'ರಾಜರ ಋಜುತ್ವೋತ್ಕರ್ಷದ ಕಹಳೆ' ದೇಶದಾದ್ಯಂತ ಮಾರ್ದನಿಸಿ ಅಪೂರ್ವ ಭಾವಸಂಚಲನವನ್ನು ಉಂಟುಮಾಡಿದ್ದು ಆಚಾರ್ಯರ ಧೀಶಕ್ತಿಗೆ ಸಾಕ್ಷಿಯಾಯಿತು.

"ಪೌರ್ಣಿಮ್ಯಾಂ ಸಂಪರಿತ್ಯಜ್ಯ ಕಾಶ್ಮೀರನೃಪಸನ್ನಿಧಿಮ್ ।
ವಾದಿರಾಜಃ ಶಿಷ್ಯವತ್ಸ್ಯರಮಾಯಾಂ ದಾಸಸನ್ನಿಧಿಮ್ ॥"

---

1. "ದುರ್ಮಾಯಿಮತ್ತಗಜಪುಂಗವಪಂಚವಕ್ತ್ರ।
ಸನ್ಮಾನಿತಾಖಿಲಸುಮಧ್ವಮತಾಭಿಲಾಷ ॥"
– ಶ್ರೀಕೋನೇರಿ ಆಚಾರ್ಯವಿರಚಿತ "ಶ್ರೀಗುರುಸುಗುಣಚಂದ್ರಿಕಾ–7"

ಎಂದು ಅವರೇ ಹೇಳಿಕೊಂಡಿರುವಂತೆ ಭಾರತದ ಮುಕುಟಮಣಿಯಂತಿರುವ ಕಾಶ್ಮೀರಕ್ಕೆ ಹೋಗಿ ಅಲ್ಲಿನ ರಾಜಾಸ್ಥಾನದಲ್ಲಿ ತಮ್ಮ ವಿದ್ವತ್ಪ್ರತಾಪವನ್ನು ತೋರಿ ಜಯಭೇರಿ ಬಾರಿಸಿದರಲ್ಲದೇ ಕಾಶ್ಮೀರನೃಪನಿಂದ ಸನ್ಮಾನಿತರಾಗಿ ಅವನಿಂದ ಅನರ್ಘ್ಯವಾದ ಆಂದೋಲನ (ಪಲ್ಲಕ್ಕಿ)ವನ್ನೂ, ಜಯಪತ್ರಿಕೆ ಹಾಗೂ ವಿದ್ವತ್ಸಂಭಾವನೆಯನ್ನೂ ಪಡೆದುಕೊಂಡರು.[1] ತಮ್ಮ ಸಾಧನೆಗೆ ಸಂದ ಗಜದಂತಹ ಆ ಪಲ್ಲಕ್ಕಿಯನ್ನು ಆಚಾರ್ಯರು ತಮ್ಮ ಸ್ವಪ್ರತಿಷ್ಠೆಯನ್ನು ಮೆರೆಸಲು ಬಳಸಲಿಲ್ಲ. ಆದರೆ ಅದನ್ನು ತಮ್ಮ ಮಹೋದಯಕ್ಕೆ ಕಾರಣರಾಗಿ ತಮ್ಮಿಂದ ಮಹತ್ಸಾಧನೆಗೈಸಿದ ಗುರುಬಿಂಬನ ಆಂದೋಲನ ಸೇವೆಗಾಗಿ ಮೀಸಲಿಟ್ಟು, ತಿರುಪತಿಯ ಶ್ರೀವೆಂಕಟೇಶನ ದಿವ್ಯ ಸನ್ನಿಧಾನದಲ್ಲಿ ತಮ್ಮ ವಿದ್ಯಾಗುರುಗಳಾದ ಉಡುಪಿ ಶ್ರೀಕೃಷ್ಣಾಪುರ ಮಠಾಧೀಶ ಶ್ರೀವಿದ್ಯಾಧೀಶತೀರ್ಥರ ಚರಣಾರವಿಂದಗಳಿಗೆ ಗುರುಕಾಣಿಕೆಯಾಗಿ ಪರಮಾದರದಿಂದ ಸಮರ್ಪಿಸಿಬಿಟ್ಟರು.[2]

ಆಚಾರ್ಯರ ಪಟ್ಟ ಶಿಷ್ಯರಾಗಿದ್ದ ನಿಪ್ಪಾಣಿ ಮೂಲದ

---

1. "I was successful in many discourses with Pandits living in such distant parts of the country as Kashmir and others, for which I was honoured with a palanquin and other accompanying honors by the Swami my master and head of the Vaishnavite sect".

– ಜಂಬುಖಂಡಿ ಆಚಾರ್ಯರೇ ಪ್ರಕಟಿಸಿದ "An Exposition"
ಎಂಬ ವಿವರಣೆಯಲ್ಲಿ.

2. "ಅಥ ಕೃಷ್ಣಾಪುರಾಧೀಶಾಃ ಸ್ವಾಮಿನಂ ಭಕ್ತವತ್ಸಲಮ್ ।
ಶ್ರೀವೆಂಕಟಾಚಲವಾಸಂ ಪ್ರಣೇಮುಹಃ ಶ್ರೀಹರಿಂ ಮುದಾ ॥
ಅಸ್ತುವನ್ನರ್ಘ್ಯ ಪದ್ಯಾದಿ ಶ್ಲೋಕೈಶ್ಚ ಕಮಲಾಪತಿಮ್ ।
ತದಾಜ್ಞಾಮುರರೀಕೃತ್ಯ ಗಂತಕಾಮಾ(ಮೋ) ಯದಾ ಪುರಮ್ ॥
ತದಾಯಂ ದಾಪಯಾಮಾಸ ಕೌಶೇಹಂ ವಸ್ತ್ರಮುತ್ತಮಮ್ ।
ದಿವ್ಯ ಮಾಂದೋಲನಂ ತೇಷಾಂ ದದೌ ಗುರುಮನಃ ಪ್ರಿಯಮ್ ॥"

– ಶ್ರೀಸುಧಾಕರಗುರುಗುಣರತ್ನಮಾಲಾ, ಚತುರ್ಥಾವಲಿ–23–25

ಶ್ರೀಷಟ್ಪುರಾಚಾರ್ಯರೆಂಬುವವರು[1] ಜಂಬುಖಂಡಿವಾದಿರಾಜಾಚಾರ್ಯರ ರೋಮಾಂಚಕರ ಬದುಕು, ಬರಹ ಮತ್ತು ಬೋಧನೆಗಳಿಂದ ಪ್ರೇರಿತರಾಗಿ ಗುರುಗಳ ಜೀವನ ಸಾಧನೆಗಳ ಮೇಲೆ ಬೆಳಕು ಬೀರುವ "ಶ್ರೀಸುಧಾಕರಗುರುಗುಣ ರತ್ನಮಾಲಾ"[2] ಎಂಬ ಸುಂದರ ಕಾವ್ಯ ಕೃತಿಯನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾರೆ. ಶ್ರೀಜಂಬುಖಂಡಿ ಆಚಾರ್ಯರ ಮಹಿಮಾನ್ವಿತ ಭವ್ಯ ವ್ಯಕ್ತಿತ್ವವನ್ನು ಕಣ್ಣಿಗೆ ಕಟ್ಟುವಂತೆ ಹೃದಯಂಗಮವಾಗಿ ಚಿತ್ರಿಸುವ ಈ ಅಮೂಲ್ಯ ಆಕರ ಕೃತಿಯಲ್ಲಿ ಒಟ್ಟು ಐದು ಅಧ್ಯಾಯಗಳಿವೆ. ಇದರಲ್ಲಿ ಪ್ರಥಮ ಅಧ್ಯಾಯವನ್ನು

1. ಶಹಾಪುರ ಆಚಾರ್ಯರೆಂದೂ ಪ್ರಸಿದ್ಧರಾದ ಷಟ್ಪುರಾಚಾರ್ಯರು ಆಗಿನ ಕಾಲದ ಸುತ್ತಮುತ್ತಲಿನ ಆರು ಪ್ರಮುಖ ವಿದ್ವತ್ಪುರಿಯೊಳಗೆ ಶ್ರೇಷ್ಠಜ್ಞಾನಿಗಳೆಂದು ಕರೆಸಿಕೊಳ್ಳುತ್ತಿದ್ದುದ್ದರಿಂದ ಷಟ್ಪುರಾಚಾರ್ಯರೆಂಬ ಹೆಸರಿತ್ತೆಂದು ತೋರುತ್ತದೆ. 1884ರಿಂದ 1902ರವರೆಗೆ ಜೀವಿಸಿದ್ದ ಷಟ್ಪುರಾಚಾರ್ಯರ ಜನ್ಮನಾಮಧೇಯ ನಿಪ್ಪಾಣಿ ಶ್ರೀ ವಾಸುದೇವಾ ಚಾರ್ಯ. ಗುರುಗಳಾದ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರಂತೆ ವ್ಯಾಸ–ದಾಸ ಸಾಹಿತ್ಯದಲ್ಲಿ ನಿಷ್ಣಾತರಾಗಿದ್ದ ಷಟ್ಪುರಾಚಾರ್ಯರು "ಪ್ರಾಣಪತಿವಿಠಲ" ಎಂಬುವ ಅಂಕಿತದಿಂದ ಅನೇಕ ಕನ್ನಡ ಕೃತಿಗಳನ್ನು ಸಹ ರಚಿಸಿರುತ್ತಾರೆ. "ಹೊಡಿ ನಗಾರಿ ಮ್ಯಾಲೆ ಕೈಯಾ – ಕಡಕಡ ಹೊಡಿ ನಗಾರಿ ಮ್ಯಾಲೆ ಕೈಯಾ, ಕಡು ವಾದಿರಾಜರು ದೃಢ ಋಜುಗತರೆಂದು" ಎಂಬುವ ಅವರ ಕೀರ್ತನೆಯನ್ನು ನೋಡಿದರೆ ಆಚಾರ್ಯರು ಗುರುಗಳಂತೆಯೇ ವಾದಿರಾಜರಲ್ಲಿ ಋಜುತ್ವಜ್ಞಾನದಾರ್ಢ್ಯವನ್ನು ಹೊಂದಿದ್ದರೆಂದು ಊಹಿಸಬಹುದು. ಗುರುಗಳ ನಂತರ ಅವರ ಸ್ಥಾನದಲ್ಲಿ ನಿಂತು ಸಜ್ಜನವೃಂದವನ್ನು ಮುನ್ನಡೆಸಿದ ಷಟ್ಪುರಾಚಾರ್ಯರ ಶಿಷ್ಯ ಸಂಪತ್ತೂ ಸಹ ವಿಶೇಷವಾದದ್ದು.

2. ಟೀಕಾಕೃತ್ಪಾದರ ಮೇರುಕೃತಿಯಾದ "ಶ್ರೀಮನ್ಯಾಯಸುಧಾ" ಗ್ರಂಥದಲ್ಲಿ ಜಂಬುಖಂಡಿ ವಾದಿರಾಜಾಚಾರ್ಯರಿಗೆ ಅಪರಿಮಿತವಾದ ಪಾಂಡಿತ್ಯವಿದ್ದ ಕಾರಣ ಬಹುಶಃ ಷಟ್ಪುರಾಚಾರ್ಯರು ತಮ್ಮ ಗುರುಗಳನ್ನು "ಸುಧಾಕರಾ ಚಾರ್ಯ"ರೆಂದು ಕರೆದು ಈ ಕೃತಿಗೆ "ಶ್ರೀಸುಧಾಕರಗುರು ಗುಣ ರತ್ನಮಾಲಾ" ಎಂದು ಹೆಸರಿಟ್ಟಿರಬಹುದು. ಇದು ಆಚಾರ್ಯರಿಗೆ ಅನ್ವರ್ಥವಾದ ನಾಮಧೇಯವೇ ಸರಿ.

ಶ್ರೀಷಟ್ಪುರಾಚಾರ್ಯರು ರಚಿಸಿದ್ದರೆ ಉಳಿದ ನಾಲ್ಕು ಅಧ್ಯಾಯಗಳನ್ನು ಪ್ರಚಾರವನ್ನು ಬಯಸದ ಅಸೀಮ ಗುರುಭಕ್ತರಾದ ಶ್ರೀಷಟ್ಪುರಾಚಾರ್ಯರ ಶಿಷ್ಯರೊಬ್ಬರು ಪೂರ್ಣಮಾಡಿರುವುದಾಗಿ ತಿಳಿದುಬರುತ್ತದೆ.[1]

ಜಂಬುಖಂಡಿ ಆಚಾರ್ಯರ ಬದುಕು-ಬೋಧನೆಗಳ ಅಧಿಕೃತ ಐತಿಹಾಸಿಕ ದಾಖಲೆಯಾಗಿರುವ 'ಶ್ರೀಸುಧಾಕರಗುರುಗುಣರತ್ನಮಾಲಾ' ಕಾವ್ಯ ಕೃತಿಯಲ್ಲದೇ ಇನ್ನೂ ಹಲವಾರು ಗ್ರಂಥಗಳು ಮತ್ತು ಅವರ ಶಿಷ್ಯ, ಪ್ರತಿಶಿಷ್ಯರ ರಚನೆಗಳು ಸಹ ಆಚಾರ್ಯರ ಕುರಿತಾಗಿ ವಿಶೇಷ ವಿವರಗಳನ್ನು ಒದಗಿಸುತ್ತವೆ. ಇತ್ತೀಚೆಗೆ ಜಂಬುಖಂಡಿ ವಾದಿರಾಜಾಚಾರ್ಯರೇ ರಚಿಸಿರುವರೆನ್ನಲಾದ ಅವರ ಜೀವನ ವೃತ್ತಾಂತಗಳನ್ನು ನಿರೂಪಿಸುವ ಸಂಸ್ಕೃತದ ಅಪೂರ್ವ ಕೃತಿಯೊಂದು ಲಭ್ಯವಾಗಿದೆ. ಇದು ಆಚಾರ್ಯರ ಬದುಕಿನ ಮೇಲೆ ಹೊಸ ಬೆಳಕು ಚೆಲ್ಲುವ ನಿಟ್ಟಿನಲ್ಲಿ ನಿಖರ ಹಾಗೂ ಮಹತ್ವಪೂರ್ಣ ದಾಖಲೆಯೆನ್ನಬಹುದು. ಭೂತರಾಜರ, ವಾದಿರಾಜರ ಮತ್ತು ಅವರ ಅಂತರ್ಯಾಮಿ ಶ್ರೀಮದ್ವೇಶ ಹಯವದನ ದೇವರ ಪ್ರಾರ್ಥನಾ ಪರವಾದ ಭಕ್ತಿರಸಭರಿತ ಸರಳ ಸುಂದರ ಸ್ತೋತ್ರಗಳೂ ಸಹ ಈ ಕೃತಿಯಲ್ಲಿದ್ದು ಅನುಭವಜನ್ಯವಾದ ಉಪದೇಶಾಮೃತ ಹಾಗೂ ಹೃದ್ಯವೆನ್ನಿಸುವ ನಿವೇದನಾತ್ಮಕ ನುಡಿಗಟ್ಟುಗಳ ಮಧುರ ಸಂಗಮವೆನ್ನಿಸಿ ನಿತ್ಯ ಪಾರಾಯಣ ಯೋಗ್ಯವಾಗಿವೆ.

ಇವಲ್ಲದೇ ಈ ಲೇಖಕನ ಪೂಜ್ಯಗುರುಗಳಾದ "ಹರಿದಾಸ ಕುಲತಿಲಕ" ಶ್ರೀಗುರುಗೋವಿಂದದಾಸರು ಬಹುಶ್ರಮದಿಂದ ಆಚಾರ್ಯರ ಜೀವಿತದ ಪ್ರಮುಖ ಮಾಹಿತಿಗಳನ್ನು ಸಂಗ್ರಹಿಸಿ "ಹರಿಭಕ್ತಿವಿಜಯ" ದ ಮೊದಲ

---

1. "ಸುಧಾಕರಗುರೋಃ ಪಾದಪರಾಗ ಮಹಿಮಾವಲಿಃ।
ಪ್ರಾರಬ್ಧಾಪಿ ನ ಸಂಪೂರ್ಣಾ ಗುರಭಿಃ ಷಟ್ಪುರಾಭಿಧೈಃ॥
ತೇಷಾಂ ಚರಣಪದ್ಮೋತ್ಥ ಕಿಂಜಲ್ಕಸ್ಪರ್ಶ ಮಾತ್ರತಃ।
ಶೇಷಪೂರ್ತಿಂ ಕರಿಷ್ಯಾಮಿ ಹ್ಯನುಗೃಹ್ಣಂತು ಸಾಧವಃ॥"
(–ಶ್ರೀಸುಧಾಕರಗುರುಗುಣರತ್ನಮಾಲಾ–ದ್ವಿತೀಯಾವಲಿ 1–2)

ಭಾಗದಲ್ಲಿ ವಿಸ್ತಾರವಾಗಿ ಬರೆದರು. ಕ್ರಿ.ಶ. 1968ರಲ್ಲಿ ಪ್ರಕಟಗೊಂಡ ಗುರುಕೃಪಾ ಗ್ರಂಥಮಾಲೆಯ ಈ ಪುಸ್ತಕ ಆಚಾರ್ಯರ ಕುರಿತಾಗಿ ಬಂದ ಮೊಟ್ಟಮೊದಲ ಮಹತ್ವಪೂರ್ಣ ಗದ್ಯಕೃತಿಯೆನ್ನಬಹುದು. ಇದಾದ ನಂತರ 1989ರಲ್ಲಿ ಜಂಬುಖಂಡಿ ವಾದಿರಾಜಾಚಾರ್ಯರ ಅಚ್ಚಿನ್ನ ಶಿಷ್ಯ ಶ್ರೀಷಟ್ಪುರಾಚಾರ್ಯ ವಂಶಸ್ಥರಾದ ಡಾ. ಗುರುರಾಜ ಕೃ. ನಿಪ್ಪಾಣಿ ಯವರು ಆಚಾರ್ಯರ ಜೀವನಸಾಧನೆಗಳನ್ನು ಕುರಿತಂತೆ ಗಂಭೀರ ಅಧ್ಯಯನ ನಡೆಸಿ "ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ"ಯನ್ನು ಸಂಪಾದಿಸಿದರು. ಬಳ್ಳಾರಿಯ ಶ್ರೀಜಮಖಂಡಿ ಸಹೋದರರು ಶ್ರದ್ಧಾದರಗಳಿಂದ ಪ್ರಕಾಶಿಸಿದ ಈ ಕೃತಿಯಲ್ಲಿ ಡಾ. ನಿಪ್ಪಾಣಿಯವರು ವಿಸ್ತೃತವಾದ ಅಡಿಟಿಪ್ಪಣಿಗಳ ಸಹಿತ "ಶ್ರೀಸುಧಾಕರ ಗುರುಗುಣರತ್ನಮಾಲೆ" ಯ ಸರಳ ಭಾವಾನುವಾದ ಮತ್ತು ಆಚಾರ್ಯರ ಗ್ರಂಥಸಂಪತ್ತೂ ಸೇರಿದಂತೆ ಅನೇಕ ಐತಿಹ್ಯಗಳನ್ನು ಮನವೊಪ್ಪುವಂತೆ ನಿರೂಪಿಸಿದ್ದಾರೆ. ಪ್ರಸಿದ್ಧ ಸಂಶೋಧಕರಾದ ಡಾ. ಬಿ.ಎನ್.ಕೆ. ಶರ್ಮ ಅವರ ಪ್ರಬುದ್ಧ ಮುನ್ನುಡಿಯೊಂದಿಗೆ ಪ್ರಕಟವಾಗಿರುವ ಈ ಕೃತಿ 1995ರಲ್ಲಿ ಪುನರ್ಮುದ್ರಣಗೊಂಡಿದೆ.

ಕೇವಲ 54 (1842–1896) ವರ್ಷಗಳ ಕಾಲ ಮಾತ್ರ ಜೀವಿಸಿದ್ದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಬದುಕು ರೋಮಾಂಚಕರ ವಾದದ್ದು. ಬದುಕಿನುದ್ದಕ್ಕೂ ಅವರು ತೋರಿದ "ರಾಜರ ಋಜುತ್ವ ದೀಕ್ಷೆ" ವಿಸ್ಮಯಕರವಾದದ್ದು. ಬಾಲ್ಯದಲ್ಲಿಯೇ ವಾದಿರಾಜ ಗುರುವರ್ಯರಲ್ಲಿ ಅಪಾರ ಶ್ರದ್ಧಾಭಕ್ತಿಗಳನ್ನು ಬೆಳೆಸಿಕೊಂಡಿದ್ದ ಜಂಬುಖಂಡಿ ಆಚಾರ್ಯರು ತಮ್ಮ ಜೀವಿತದಲ್ಲಿ ನಡೆದ ಕೆಲವು ಮುಖ್ಯ ಘಟನೆಗಳ ಬಗ್ಗೆ ತಾವೇ ಮುದ್ರಿಸಿ ಪ್ರಕಾಶಿಸಿದ "An Exposition" ಎಂಬ ಆಂಗ್ಲ ಭಾಷೆಯಲ್ಲಿರುವ ವಿವರಣೆಯಲ್ಲಿ "I studied our shastras with the learned and revered Swami Shri Satyaparakrama of the Uttaradhi Matha and with the Swami of Krishnapur in Udapi in the Mangalore District for more than 24 - years" ಎಂದು ಹೇಳಿರುವಂತೆ ಮುಂದೆ

ಶ್ರೀಉತ್ತರಾದಿಮಠದ ಪೀಠದಲ್ಲಿ ವಿರಾಜಮಾನರಾಗಿ ಶ್ರೀ ಸತ್ಯಪರಾಕ್ರಮ ತೀರ್ಥರೆಂದು ಪ್ರಸಿದ್ಧರಾದ ಪಂಡಿತಾಗ್ರಣಿ ಶ್ರೀವಾಯಿ ಶ್ರೀನಿವಾಸಾಚಾರ್ಯರ ಬಳಿ ಒಂದು ದಶಕಕ್ಕೂ ಹೆಚ್ಚು ಕಾಲ ಶಾಸ್ತ್ರ ವ್ಯಾಸಂಗವನ್ನು ಮಾಡಿ ಸಾಕಷ್ಟು ಪರಿಣತಿಯನ್ನು ಗಳಿಸಿಕೊಂಡರು. ನಂತರ ಉಡುಪಿ ಅಷ್ಟ ಮಠಗಳಲ್ಲಿ ಒಂದಾದ ಶ್ರೀಕೃಷ್ಣಾಪುರ ಮಠದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರಲ್ಲಿ ಅನೇಕ ಪ್ರೌಢ ಗ್ರಂಥಗಳ ಅಧ್ಯಯನ ನಡೆಸಿ ಸುಧಾ ಪಂಡಿತರೆನ್ನಿಸಿಕೊಂಡರು. ವೃಂದಾವನಾಚಾರ್ಯರೆಂದು ಪ್ರಖ್ಯಾತರಾದ ಶ್ರೀಸೋದೆ ವಾದಿರಾಜ ಮಠಾಧೀಶರಾದ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದಂಗಳವರ ಹಾಗೂ ಅವರ ವಿದ್ಯಾಶಿಷ್ಯರಾಗಿದ್ದ ಭೀಮಸೇತು ಮುನಿವೃಂದ ಮಠದ ಶ್ರೀರಘುಪ್ರವೀರತೀರ್ಥ ಶ್ರೀಪಾದಂಗಳವರ ಅನುಗ್ರಹ ಪೂರ್ವಕವಾದ ಮಾರ್ಗದರ್ಶನವೂ ಆಚಾರ್ಯರಿಗೆ ಪ್ರಾಪ್ತವಾಯಿತು. ಈ ಎಲ್ಲಾ ಮಹನೀಯರ "ರಾಜರ ಋಜುತ್ವ ದೀಕ್ಷೆ" ವಾದಿರಾಜರ ಪರಮ ಭಕ್ತರಾಗಿದ್ದ ಆಚಾರ್ಯ ಮೇಲೆ ಅಪಾರವಾದ ಪರಿಣಾಮವನ್ನು ಬೀರಿತು. ಈ ವಿಷಯದಲ್ಲಿ ಅವರು ಕೇವಲ ಒಣಾಗ್ರಹವನ್ನು ಬೆಳೆಸಿಕೊಳ್ಳದೆ, ತಾರತಮ್ಯ ಕ್ರಮವನ್ನು ತುಚ್ಛೀಕರಿಸದೆ ತಾತ್ವಿಕ ಸಂಕೋಲೆಯನ್ನು ಅತಿಕ್ರಮಿಸದೆ, ಸಾತ್ವಿಕ ಪಥ ಪಿಡಿದು ಸತ್ಯಾನ್ವೇಷಣೆಯ ಭದ್ರಬುನಾದಿಯ ಮೇಲೆ ಸದೃಢವಾಗಿ ನಿಂತು ಮುಕ್ತಮನಸ್ಸಿನಿಂದ ವಿಶೇಷ ಅಧ್ಯಯನ ನಡೆಸಿದರು. ತಾವು ಕಂಡು ಕೊಂಡ ಬೆಳಕಿನ ಹಾದಿಯಲ್ಲಿ ಅತುಲ ಆತ್ಮವಿಶ್ವಾಸದಿಂದ ಮುನ್ನಡೆದ ಶ್ರೀಜಂಬುಖಂಡಿ ಆಚಾರ್ಯರು ರಾಜರ ಋಜುತ್ವ ಪ್ರತಿಪಾದನೆಗಾಗಿಯೇ ತಮ್ಮ ಬಾಳುವೆಯನ್ನು ಮುಡಿಪಾಗಿಟ್ಟರು. ಪಂಡಿತ ಮಂಡಲಿಯಲ್ಲಿ ಸೌಹಾರ್ದಯುತವಾಗಿ ವಾಕ್ಯಾರ್ಥ ನಡೆಸಿ ಶ್ರುತಿ, ಸ್ಮೃತಿ, ಆರ್ಯೋಕ್ತಿಗಳ ಆಧಾರ ಸಹಿತವಾಗಿ ಶ್ರೀವಾದಿರಾಜ ಗುರುಸಾರ್ವಭೌಮರು ಮುಂದೆ ವಾಯುಪಟ್ಟಕ್ಕೆ ಬರುವ ಲಾತವ್ಯನಾಮಕ ಋಜುಗಳೆಂದು ಯಶಸ್ವಿಯಾಗಿ ಸಾಧಿಸಿ ತೋರಿಸಿದರು. ಇದಕ್ಕಾಗಿ ದೇಶ ಸಂಚಾರ ಕೈಗೊಂಡು ಹೋದ ಕಡೆಯಲೆಲ್ಲಾ ಪ್ರಚಾರ ಗೈಯುತ್ತಿದ್ದ ಆಚಾರ್ಯರಿಗೆ ಹೆಜ್ಜೆಹೆಜ್ಜೆಗೂ

ಸಂಕಷ್ಟಗಳೇ ಎದುರಾದವು. ವಾದಿರಾಜರ ಋಜುತ್ವ ವಿಷಯದಲ್ಲಿ ದುರಾಗ್ರಹವನ್ನು ಹೊಂದಿದ ಮತ್ತು ಸತ್ಯವನ್ನು ಸ್ವೀಕರಿಸುವ ಎದೆಗಾರಿಕೆಯಿಲ್ಲದೆ ವಿತಂಡವಾದ ಮಾಡುವ ಮತಾಂಧರಾದ ಕೆಲವು ಕುಹುಕಿಗಳು ಅವರಿಗೆ ಕೊಡಬಾರದ ತೊಂದರೆಗಳನ್ನು ಕೊಟ್ಟರು. ಒಮ್ಮೆ ತಮ್ಮ ಪ್ರೀತ್ಯಾಸ್ಪದನಾದ ಪುತ್ರನು ವ್ಯಾಧಿಗ್ರಸ್ಥನಾಗಿ ಬಾಧೆಪಡುತ್ತಿದ್ದಾಗ ಸೂಕ್ತ ಔಷದೋಪಚಾರಗಳನ್ನು ನಡೆಸಲೂ ಅವರಿಗೆ ಅವಕಾಶ ಕೊಡದೆ ಆಗ ಸಂಚಾರತ್ವೇನ ಚಿಕ್ಕೋಡಿಯಲ್ಲಿದ್ದ ಆಚಾರ್ಯರನ್ನು ಮೃಗಕ್ಕಿಂತಲೂ ಹೀನಾಯವಾಗಿ ನಡೆಸಿಕೊಂಡು ಹೊರಹಾಕಿದರು. ಮಾನವೀಯತೆಯ ಅರ್ಥವೇ ತಿಳಿಯದ, ಇಂತಹ ದುರಾಗ್ರಹಿಗಳ ಸಂಚಿನ ಫಲದಿಂದಾಗಿ ಆಚಾರ್ಯರು ತಮ್ಮ ಮಠದ ಬಹಿಷ್ಕಾರಕ್ಕೂ ಒಳಗಾಗಬೇಕಾಯಿತು.[1] ಇಷ್ಟೆಲ್ಲಾ ಕಷ್ಟ ಪರಂಪರೆಗಳು ಎದುರಾದರೂ ಆಚಾರ್ಯರು

---

1. "ಆಚಾರ್ಯರಿಗೆ ಬಹಿಷ್ಕಾರವಿದ್ದುದರಿಂದ ಮಗನ ಅನಾರೋಗ್ಯದ ಬಗ್ಗೆ ತಿಳಿಸಿದರೂ, ಯಾವುದನ್ನೂ ಲೆಕ್ಕಿಸದೆ ಅವರನ್ನು ಆ ಗ್ರಾಮದಿಂದ ಆ ಕೂಡಲೇ ಹೊರಹೋಗುವಂತೆ ಮಾಡಿದರು. ಮಗದೊಮ್ಮೆ ಬೆಳಗಾವಿಯ ಶಹಾಪುರದಲ್ಲಿಯ ಗೃಹಸ್ಥರೊಬ್ಬನ ಮನೆಯಲ್ಲಿ ಭೋಜನಕ್ಕೆ ಆಚಾರ್ಯರು ಇರಬೇಕಾದರೆ, ಅಲ್ಲಿಯ ಮಠಾಧಿಕಾರಿಯು, ಆ ಮೊದಲೆ ಹೈದಾರಾಬಾದಿನಲ್ಲಿ ಶ್ರೀಗಳವರೊಂದಿಗೆ ನಡೆದ ಸಂಧಾನ ಮತ್ತು ಬಹಿಷ್ಕಾರ ವಾಪಸ್ಸಿನ ಬಗ್ಗೆ ತಿಳಿದಿದ್ದರೂ ಕಿರುಕುಳ ಕೊಟ್ಟನು. ಶ್ರೀಗಳವರೇ ಸಂಧಾನದಿಂದ ಇವರ ಆಚಾರ–ವಿಚಾರಕ್ಕೆ ಸಮ್ಮತಿಯಿತ್ತರೂ, ಮಠಾಧಿಕಾರಿಯೊಬ್ಬ ಈ ರೀತಿ ಸಾರ್ವಜನಿಕವಾಗಿ ಕಿರುಕುಳ ಕೊಟ್ಟಿದ್ದರಿಂದ, ಕೋರ್ಟಿನಿಂದ ಅವನ ಬಂಧನಕ್ಕೆ ವಾರಂಟ್ ತಂದು, ಅನಂತರ ಅವನು ಕ್ಷಮೆಯಾಚಿಸಿದ್ದರಿಂದ ಅವನನ್ನು ಕ್ಷಮಿಸಿದರು. ಈ ರೀತಿ ಬಹಿಷ್ಕಾರದ ದೆಶೆಯಿಂದ ಬಂದೊದಗಿದ ಯಾವತ್ತೂ ತೊಂದರೆಗಳನ್ನು, ಶ್ರೀಭೂತರಾಜರ ಅನುಗ್ರಹದಿಂದ ಛಲದಿಂದಲೇ ನೀಗಿ, ಶ್ರೀರಾಜರ ಋಜುತ್ವೋತ್ಕರ್ಷ ಪ್ರತಿಪಾದಕ ತಾತ್ವಿಕ ಸಮರದಲ್ಲಿ ವಿಜಯಿಗಳಾಗಿ ವಿರಾಜಮಾನರಾದರು".

– ಡಾ. ಗುರುರಾಜಾಚಾರ್ಯ ಕೃ. ನಿಪ್ಪಾಣಿ
(ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆಯಲ್ಲಿ)

ಎದೆಗುಂದಲಿಲ್ಲ. ತಮ್ಮ ಜೀವಿತೋದ್ದೇಶವನ್ನು ಎಂದೂ ಕಡೆಗಾಣಿಸಲಿಲ್ಲ. ಯಾರ ದಾಕ್ಷಿಣ್ಯಕ್ಕೂ ಒಳಗಾಗಲಿಲ್ಲ. ಯಾವ ಸಂದರ್ಭದಲ್ಲಿಯೂ ಜೀವನೋಪಾಯಕ್ಕಾಗಿ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಂಡು ಆತ್ಮಾಭಿಮಾನವನ್ನು ಮಾರಿಕೊಳ್ಳಲಿಲ್ಲ. ಕೆಲವರ ನಿಷ್ಠುರಕ್ಕೆ ಪಾತ್ರನಾಗ ಬೇಕಾದೀತೆಂದು ಅಂಜಿ ತಾವು ನಂಬಿದ ತತ್ವವನ್ನು ಯಾವ ಕಾರಣಕ್ಕೂ ಬಿಟ್ಟುಕೊಡಲಿಲ್ಲ. ಸತ್ಯಧ್ವಜವನ್ನು ಎತ್ತಿಹಿಡಿಯುವ ಅಚಲ ಛಲದಿಂದ ಆಚಾರ್ಯರು ಎಲ್ಲವನ್ನೂ ಸಮರ್ಥವಾಗಿ ಸಹಿಸಿಕೊಂಡು ಎದುರಿಸಿದರು. ಉತ್ತರ ಕರ್ನಾಟಕದಾದ್ಯಂತ ಶಿಷ್ಯಸಂಖ್ಯಾಬಾಹುಳ್ಯವುಳ್ಳ ತಮ್ಮ ಮಠದ ವಿರುದ್ಧವೆ, ಸ್ವತಃ ಉತ್ತರ ಕರ್ನಾಟಕದವರೇ ಅದ ಆಚಾರ್ಯರು ಎದೆಸೆಟೆಸಿ ಸಡ್ಡು ಹೊಡೆದರು. ತಮಗಾದ ಅನ್ಯಾಯದ ವಿರುದ್ಧ ಕಾನೂನಿನ ಸಮರವನ್ನೇ ಸಾರಿ ನ್ಯಾಯಾಲಯದ ಮೆಟ್ಟಿಲೇರಿ ದರು. ಹರಿಗುರುಗಳ ಕೃಪಾ ವಿಶೇಷದಿಂದ ಎಲ್ಲಾ ಖಟ್ಲೆಗಳಲ್ಲಿಯೂ ಜಯಶಾಲಿಗಳಾದರು. ಊಳಿಡುವ ನರಿಗಳ ಹಿಂಡನ್ನು ಲೆಕ್ಕಿಸದೆ ಗಂಭೀರವಾಗಿ ಹೆಜ್ಜೆಹಾಕುವ ಸಿಂಹದಂತೆ ಆಚಾರ್ಯರು ನಿರ್ಭಯವಾಗಿ ಭಾವಿಸಮೀರರಾದ ಶ್ರೀವಾದಿರಾಜ ಪ್ರಭುಗಳ ಗುಣಗಾನ ಮಾಡುತ್ತಾ ಸತ್ಪಥದಲ್ಲಿ ಮುನ್ನಡೆದರು.

ಧೀರೋದಾತ್ತ ನಡೆನುಡಿಗಳನ್ನು ಹೊಂದಿದ್ದ ಜಂಬುಖಂಡಿ ಆಚಾರ್ಯರು ಶಾರೀರಕವಾಗಿಯೂ ಸಹ ಸಿಂಹದಂತೆ ಕಟ್ಟುಮಸ್ತಾಗಿದ್ದರು. ತೇಜಃಪುಂಜವಾದ ಮುಖಮಂಡಲ, ವೈಕುಂಠದ ದ್ವಾರ ತೋರುತ್ತಿರುವಂತೆ ಕಾಣುವ ಅಂಗಾರಾಕ್ಷತೆ, ಪ್ರಖರ ಕಣ್ಣುಗಳು, ಅವಧೂತರಂತೆ ಕಂಗೊಳಿಸುವ ಪವಿತ್ರಗಾತ್ರ ಅವರದು. ತುರುಷ್ಕರಂತೆ ವೇಷಭೂಷಿತವಾಗಿರುವ ಆಚಾರ್ಯರ ಭಾವಚಿತ್ರವೊಂದು ಹೆಚ್ಚು ಪ್ರಚಲಿತದಲ್ಲಿದೆ. ದಿವ್ಯಜ್ಞಾನಿಗಳಾಗಿದ್ದ ಅವರು ಪ್ರಾರಬ್ಧವಶದಿಂದ ಬರಲಿರುವ ತಮ್ಮ ಮುಂದಿನ ಮ್ಲೇಚ್ಛ ಜನ್ಮದ ಪರಿಹಾರಾರ್ಥವಾಗಿ ಮುಖ್ಯಪ್ರಾಣದೇವರ ಆದೇಶದಂತೆ ಒಂದು ವರ್ಷಕಾಲ ಪಠಾಣರಂತೆ ತಲೆಗೆ ರುಮಾಲು, ಕಾಲಿನವರೆಗೂ ಬರುವ ಷರಾಯಿ ಅಂಗಿಯನ್ನು

ತೊಟ್ಟು ಸಂಚರಿಸುತ್ತಿದ್ದರಂತೆ, ಆ ಸಂದರ್ಭದಲ್ಲಿ ವೈಭವೋಪೇತ ಆಸನದ ಮೇಲೆ ಕುಳಿತು, ಕರದಲ್ಲಿ ಪುಸ್ತಕವನ್ನು ಹಿಡಿದು ಪಾರಾಯಣದ ಭಂಗಿಯಲ್ಲಿ ತೆಗೆಸಿಕೊಂಡ ಭಾವಚಿತ್ರ ಈಗಲೂ ಅವರ ಭಕ್ತವೃಂದದಲ್ಲಿ ಜನಪ್ರಿಯವಾಗಿದೆ. ತುರುಷ್ಕರಂತೆ ವೇಷ ಭೂಷಿತರಾಗಿದ್ದರೂ ವೀಣೆಯನ್ನು ಧರಿಸಿರುವ ಪ್ರಾಣದೇವರ ವಿಗ್ರಹ ಆಚಾರ್ಯರ ಕೊರಳಿನಲ್ಲಿ ಸದಾ ಕಂಗೊಳಿಸುತ್ತಿದ್ದುದು ಅವರ ವೀರವೈಷ್ಣವಧೀಕ್ಷೆಗೆ ಹೆಗ್ಗುರುತಾಗಿತ್ತು.[1]

"ಪದ್ಮನಾಭಸ್ಯ ವಿಷ್ಣೋರಖಿಲಪರಮತಾಂ ಜೀವವರ್ಗೋತ್ತಮತ್ವಂ
ವಾಯೋರೇತತ್ಸಮತ್ವಾಂಚಿತ[2] ಋಜುಗತತಾಂ ವಾದಿರಾಜಾಚಾರ್ಯ ಭಿಕ್ಷೋಃ
ಭೂಲೋಕೇ ಖ್ಯಾಪಯಂತೀ ಖಲಜನಹೃದಯಂ ದಾರಯಂತೀ ಸಮಂತಾತ್
ಸದ್ವೃಂದಂ ಮೋದಯಂತೀ ಗುರುವರ ವಿಹಿತಾ ಭಾತಿ ಸಾ ಚೈತ್ರ ಘಂಟಾ ||"

ಎಂದು "ಶ್ರೀಸುಧಾಕರಗುರುಗುಣರತ್ನಮಾಲಾ" ಕೃತಿಯ ಪ್ರಥಮಾವಲಿಯ ಉಲ್ಲೇಖದಂತೆ ಜಂಬುಖಂಡಿ ಆಚಾರ್ಯರು ತಮಗೆ ಒಲಿದು ಬಂದಿದ್ದ ವೀಣಾಪಾಣಿ ಮಾರುತಿಯ ಶ್ವೇತಶಿಲೆಯ ಮೂರ್ತಿ ಯೊಂದನ್ನು ಕೊರಳಿಗೆ ಹಾರದಂತೆ ಹಾಕಿಕೊಂಡು ಜಾಂಗಟೆಯನ್ನು ಬಾರಿಸುತ್ತಾ

"ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವಚ |
ಪೂರ್ಣಪ್ರಜ್ಞಃ ತೃತೀಯಸ್ತು ಚತುರ್ಥೋ ವಾದಿರಾಜಕಃ ||"

---

1. "....... full length photograph of the great Acharya, in his imposing stature, sitting on a spacious chair, fully dressed in trousers and long coat with a big turban over his head and a prominent Angara-Akshata Mark on his forehead holding a manuscript in one hand and a sacred icon on his lap. A look at the Acharya's face and pose is enough to tell one the stern stuff of which he was made."

- Dr. B.N.K. Sharma

('ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ' ಮುನ್ನುಡಿಯಲ್ಲಿ)

2. ತ್ವೋಚಿತ – ಪಾ

ಎಂಬ ಸರಪಳಿ ಆಚಾರ್ಯಕೃತ ಶ್ಲೋಕವನ್ನು ಗಟ್ಟಿಯಾಗಿ ಘೋಷಿಸುತ್ತಾ ಸಂಚರಿಸುತ್ತಿದ್ದರಂತೆ.[1] ಹಾಗಾಗಿ ಜಂಬುಖಂಡಿ ಆಚಾರ್ಯರ ಪ್ರಿಯಶಿಷ್ಯರಾದ ಶ್ರೀಷಟ್ಪುರಾಚಾರ್ಯರು :

> "ಚಲತ ಚಲತ ತೂರ್ಣಂ ವಾದಿರಾಟ್‌ದ್ವಿಟ್‌ಶೃಗಾಲಾಃ
> ನಿಕಟಮುಪಗತೋಽಯಂ ಜಂಬುಖಂಡ್ಯಾರ್ಯಸಿಂಹಃ।
> ಸ ಹಿ ಖರನಖರಾಭೈರ್ದಾರಯನ್ ದುಷ್ಕವೀಭಾನ್
> ಲಸತಿ ನಿಜಸುವಾಕ್ಯೈರ್ನೃಕ್ಷಿ ಕಿಂ ಸುಪ್ರತೀತಃ॥"

"ವಾದಿರಾಜರ ದ್ವೇಷಿಗಳೆಂಬ ನರಿಗಳೇ, ಈ ಕೂಡಲೇ ಇಲ್ಲಿಂದ ತೊಲಗಿರಿ. ಏಕೆಂದರೆ ಜಂಬುಖಂಡಿ ಎಂಬ ಹೆಸರಿನ ಸಿಂಹವು ತನ್ನ ತೀಕ್ಷ್ಣವಾದ ನಖ ಸದೃಶ ವಾಕ್ಯಗಳಿಂದ ರಾಜರ "ಋಜುತ್ವ ವಿಷಯದಲ್ಲಿ

---

1. ಶ್ರೀಸರಪಳಿ ಕೃಷ್ಣಾಚಾರ್ಯರೆಂಬುವವರು ರಚಿಸಿರುವ ಈ ಶ್ಲೋಕದ "ಚತುರ್ಥೋ ವಾದಿರಾಜಕಃ" ಎಂಬ ವಾಕ್ಯವನ್ನು ಕೇಳಿದಾಗ 'ಆಚಾರ್ಯರು ಶ್ರೀವಾದಿರಾಜರನ್ನು ವಾಯುದೇವರ ಅವತಾರವೆಂದು ಹೇಳುತ್ತಿದ್ದಾರೆಂಬ' ಸಂಶಯ ಕೆಲವರಲ್ಲಿ ಬರಬಹುದು. ಆದರೆ ಇಲ್ಲಿ ಆಚಾರ್ಯರು ಹೇಳಲು ಹೊರಟಿರುವ ಅಂಶವೇ ಬೇರೆ. ಲಾತವ್ಯ ನಾಮಕ ಋಜುಗಣೋತ್ತಮರಾದ ವಾದಿರಾಜರು ಮುಂದೆ ವಾಯು ಪಟ್ಟವನ್ನೇರುವ ಮತ್ತು ಸೋದಾ ಕ್ಷೇತ್ರದಲ್ಲಿರುವ ಬೃಂದಾವನದಲ್ಲಿ ಹನುಮ, ಭೀಮ, ಮಧ್ವ ಮತ್ತು ವಾದಿರಾಜರ ಮೂರ್ತಿಗಳು ನಾಲ್ಕು ಬದಿಯಲ್ಲಿ ಸಮವಾಗಿದ್ದು ಸಮತ್ವೇನ ಪೂಜಿಸಲ್ಪಡುವ ವಿಷಯವನ್ನು ಸಮರ್ಥಿಸುವುದೇ ಇಲ್ಲಿ ಆಚಾರ್ಯರ ಉದ್ದೇಶವಾಗಿತ್ತು. ಹೀಗೆ ಜಾಂಗಟೆಯನ್ನು ಬಾರಿಸುತ್ತಿದ್ದುದ್ದರಿಂದ ಅವರನ್ನು "ಜಾಂಗಟೆ ಆಚಾರ್ಯರು" ಎಂಬುದಾಗಿಯೂ ಜನರು ಗುರುತಿಸುತ್ತಿದ್ದರು. ದೇಹ ಮೋಹವನ್ನು ಜಯಿಸಿದ್ದ ಅವಧೂತರಂತೆ ಲಂಗೋಟಿಯನ್ನು ಮಾತ್ರ ಧಾರಣ ಮಾಡಿ ಕೆಲವೊಮ್ಮೆ ಸಂಚರಿಸುತ್ತಿದ್ದುದ್ದರಿಂದ "ಲಂಗೋಟಿ ಆಚಾರ್ಯರು" ಎಂದೂ ಅವರ ಪ್ರಸಿದ್ಧರು. ಅಲ್ಲದೆ ಆಚಾರ್ಯರು ತಾವು ಮಾಲೆಯಂತೆ ಧರಿಸುತ್ತಿದ್ದ ಮಾರುತಿಯ ಪ್ರತಿಮೆಯನ್ನು ಎಂದಿಗೂ ಒಂದು ಜಡವಸ್ತು ಎಂದು ಭಾವಿಸಿದವರಲ್ಲ. ಅದರಲ್ಲಿ ಪ್ರಾಣಪತಿಯ ಜಾಗೃತ ಸನ್ನಿಧಾನವನ್ನು ಕಂಡುಕೊಂಡು ದಿವ್ಯಾನಂದವನ್ನು ಅನುಭವಿಸುತ್ತಿದ್ದ ಪೂತಾತ್ಮರು ಅವರು.

ದುರಾಗ್ರಹವುಳ್ಳ ದುಷ್ಟ ಕವಿಗಳೆಂಬ ಆನೆಯ ಕುಂಭಸ್ಥಳವನ್ನು ಸೀಳುತ್ತಾ ಬರುತ್ತಿದೆ. ಪ್ರಖ್ಯಾತವಾದ ಈ ಅಪೂರ್ವ ಕೇಸರಿ ನಿಮಗೆ ಕಾಣಿಸುತ್ತಿಲ್ಲವೇ? ಆದ್ದರಿಂದ ತ್ವರಿತವಾಗಿ ಪಲಾಯನ ಮಾಡಿರಿ" ಎಂದು ಮಾರ್ಮಿಕವಾಗಿ ಕರೆ ನೀಡುತ್ತಾರೆ.

"ಶ್ರೀಸುಧಾಕರಗುರುಗುಣರತ್ನಮಾಲೆ"ಯ ಪ್ರತಿಯೊಂದು ಆವಲಿಯ ಅಂತ್ಯದಲ್ಲಿ ಉಲ್ಲೇಖಿಸಲ್ಪಟ್ಟಿರುವ ಶ್ರೀ ಷಟ್ಪುರಾಚಾರ್ಯರ ಈ ಶ್ಲೋಕ ಮತ್ತೆ ಮತ್ತೆ ಗುನುಗುನಿಸುವಂತಿದ್ದು ಶ್ರೀಜಂಬುಖಂಡಿ ಆಚಾರ್ಯರ ಧೀರೋದಾತ್ತ ವ್ಯಕ್ತಿತ್ವವನ್ನು ಧ್ವನಿಪೂರ್ವಕವಾಗಿ ಬಿಂಬಿಸುವಲ್ಲಿ ಸಫಲವಾಗಿದೆ. ಇದರಲ್ಲಿ ಅವರು ನೀಡಿರುವ ಉಪಮೆಗಳು ಈ ಹೊತ್ತಿಗೂ ಅನ್ವಯವಾಗುವಂತಿದ್ದು ತುಂಬಾ ಅರ್ಥಪೂರ್ಣವಾಗಿವೆ.

## ಜನನ – ಬಾಲ್ಯ

ಜಂಬುಖಂಡಿ ಅಥವಾ ಜಮಖಂಡಿ ಎನ್ನುವ ಸ್ಥಳ ಈಗಿನ ವಿಜಾಪುರ ಜಿಲ್ಲೆಯಲ್ಲಿದೆ. ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಜನಿಸಿದ್ದು ಜಂಬುಖಂಡಿಯಲ್ಲಲ್ಲ. "ಶುಭಕೃತ್‌ವತ್ಸರೇ ದಿವ್ಯೇ ಟೀಕಾಕೃತ್ಪಾದವಾಸರೇ ಹಾನಗಲ್ಲಸಮಾಖ್ಯೇ..." ಎಂದು ಆಚಾರ್ಯರೇ ತಾವು ರಚಿಸಿರುವ ಆತ್ಮಕಥನದಲ್ಲಿ ಹೇಳಿಕೊಂಡಿರುವಂತೆ ಹಾವೇರಿ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಹಾನಗಲ್ಲಿನಲ್ಲಿ. ಆಚಾರ್ಯರ ಪೂರ್ವಜರು ಜಂಬುಖಂಡಿ[1]

1. ಶ್ರೀಗುರುಗೋವಿಂದದಾಸರು ತಾವು ರಚಿಸಿರುವ "ಹರಿಭಕ್ತ ವಿಜಯ ಭಾಗ–1" ರಲ್ಲಿ...
"ಆಚಾರ್ಯರು ಲಗ್ನಾತ್ಪೂರ್ವದಲ್ಲಿ ಜಂಬುಖಂಡಿಯಲ್ಲಿ ವಾಸಿಸುತ್ತಿದ್ದ ಕಾರಣ ಜಂಬುಖಂಡಿ ಆಚಾರ್ಯರೆಂದೇ ಪ್ರಖ್ಯಾತಿ. ಆ ನಂತರ ಬಳ್ಳಾರಿಯಲ್ಲಿಯೂ ಕೊನೆಕೊನೆಗೆ ಶಿರಗುಪ್ಪೆಯಲ್ಲಿಯೂ ವಾಸ ಮಾಡಿದರು. ಜಂಬುಖಂಡಿ ಮಹಾರಾಜರಾಗಿದ್ದ ಅಪ್ಪಾ ಸಾಹೇಬರು ನಮ್ಮ ಆಚಾರ್ಯರ ಬಾಲ್ಯ ಸ್ನೇಹಿತರು" ಎಂದು ಹೇಳಿದರೆ ಜಂಬುಖಂಡಿ ವಾದಿರಾಜಾಚಾರ್ಯರ ತಾತಂದಿರಾದ ಶ್ರೀನರಸಿಂಹಾಚಾರ್ಯರ →

ಮೂಲದವರಾಗಿದ್ದು ಆಚಾರ್ಯರೂ ಸಹ ಅಲ್ಲಿ ಕೆಲವು ಕಾಲ ವಾಸವಾಗಿದ್ದ ಕಾರಣ ಅವರ ಮನೆತನಕ್ಕೆ "ಜಂಬುಖಂಡಿ" ಅಥವಾ ಜಮಖಂಡಿ ಎಂಬ ಉಪಪದ ಪ್ರಾಪ್ತವಾಗಿರಬಹುದೆಂದು ತೋರುತ್ತದೆ. ಆಚಾರ್ಯರು ತಾವು ಜಂಬುಖಂಡಿಯಲ್ಲಿ ವಾಸವಾಗಿದ್ದ ವಿಷಯವನ್ನು ತಾವು ಬರೆದಿರುವ ಆತ್ಮಕಥನದಲ್ಲಿಯೂ ಉಲ್ಲೇಖಿಸಿರುತ್ತಾರೆ. ಷಟ್ಪುರಾಚಾರ್ಯರೂ ಸಹ "ಶ್ರೀಸುಧಾಕರಗುಣರತ್ನಮಾಲೆ" ಯಲ್ಲಿ :

"ಆಸೀದ್ದ್ವಿಜವರಃ ಶ್ರೀಮಾನ್ ಶ್ರೀನಿವಾಸಾರ್ಯಸಂಜ್ಞಕಃ ।
ಜಂಬುಖಂಡೀತ್ಯುಪಪದೋ ಹಾನಗಲ್ಲಾಖ್ಯಸತ್ಪುರೇ ॥"

ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ಜಂಬುಖಂಡಿ ವಾದಿರಾಜಾಚಾರ್ಯರ ತಂದೆಯವರ ಹೆಸರು ಶ್ರೀನಿವಾಸಾಚಾರ್ಯ, "ಧರೆಯೊಳು ಜಂಬುಖಂಡಿ ಪುರದಿ । ಭೂಸುರ, ಶ್ರೀನಿವಾಸರೆಂಬ । ಶರಧಿಯಲಿ ಜನಿಸಿದೆ" ಎಂಬುದಾಗಿ ಶ್ರೀಬಟು ವಿಮಲಾನಂದ ವಿಠಲರೆಂಬುವವರು ಜಂಬುಖಂಡಿ ಆಚಾರ್ಯರನ್ನು ಕುರಿತು ರಚಿಸಿರುವ "ವಾದಿರಾಜಾಚಾರ್ಯರ । ಸುಂದರವಾದ । ಪಾದಾ ನಂಬಿದೆ ನಿಶ್ಚಯ" ಎಂಬ ಗುರುಸ್ತವನದಲ್ಲಿ ಹಾಡಿರುವಂತೆ ಶ್ರೀನಿವಾಸಾ ಚಾರ್ಯರು ಅಂದಿನ ಸಮಾಜದಲ್ಲಿ ಸಾಕಷ್ಟು ಖ್ಯಾತಿವಂತರು. ಪ್ರಕಾಂಡ ಪಂಡಿತರಾಗಿದ್ದ ಶ್ರೀನರಸಿಂಹಾಚಾರ್ಯರ ಸುಪುತ್ರರಾಗಿದ್ದ ಅವರು ತಮ್ಮ ತಂದೆಯವರಂತೆಯೇ ಸಚ್ಛಾಸ್ತ್ರ ಸಂಪನ್ನರು; ಶುದ್ಧ ವೈಷ್ಣವ ದಕ್ಷ

---

→ ವಾದವೈದುಷ್ಯ, ಪ್ರಕಾಂಡ ಪಾಂಡಿತ್ಯ ಮತ್ತು ತಪಶ್ಶಕ್ತಿಗಳಿಂದ ಪ್ರಭಾವಿತನಾದ ಆಗಿನ ಜಮಖಂಡಿ ಸಂಸ್ಥಾನಿಕನು ಆಚಾರ್ಯರನ್ನು ಜಮಖಂಡಿಗೆ ಆಹ್ವಾನಿಸಿದನೆಂದೂ ಅದರಂತೆ ಅಲ್ಲಿಗೆ ದಯಮಾಡಿಸಿ ಕೆಲವು ಸಮಯವಿದ್ದು ಸಂಸ್ಥಾನಿಕನಿಂದ ವಿಶೇಷ ಸನ್ಮಾನವನ್ನು ಹೊಂದಿದ ಕಾರಣ ಆಚಾರ್ಯರ ಮನೆತನಕ್ಕೆ ಜಂಬುಖಂಡಿ ಅಥವಾ ಜಮಖಂಡಿ ಎಂಬ ಉಪಪದವು ಪ್ರಾಪ್ತವಾಯಿತೆಂದು ಡಾ. ಗುರುರಾಜಾಚಾರ್ಯ ಕೃ. ನಿಪ್ಪಾಣಿ ಅವರು ತಾವು ಸಂಪಾದಿಸಿರುವ "ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ" ಯಲ್ಲಿ ಅಭಿಪ್ರಾಯ ಪಡುತ್ತಾರೆ.

ದೀಕ್ಷೆಯುಳ್ಳ ಆಚಾರಶೀಲರು. ಅವರ ಪೂರ್ವಜರು ಶ್ರೀಮದುತ್ತರಾದಿ ಮಠದ ಅನುಯಾಯಿಗಳಾಗಿದ್ದರೂ ಆಚಾರ್ಯರು ಮಾತ್ರ "ವೃಂದಾವನಾಚಾರ್ಯ"ರೆಂದು ಪ್ರಸಿದ್ಧರಾದ ಶ್ರೀಸೋದಾ ಮಠದ ಶ್ರೀವಿಶ್ವಪ್ರಿಯತೀರ್ಥರ ಪ್ರಿಯಶಿಷ್ಯರು. ತಮ್ಮ ಜೀವಿತದಲ್ಲಿ ಯಾವುದೇ ಪ್ರಮುಖ ನಿರ್ಧಾರವನ್ನು ತೆಗೆದುಕೊಳ್ಳಬೇಕಾದರೂ ಅವರು ಸೋದಾ ಕ್ಷೇತ್ರಕ್ಕೆ ತೆರಳಿ ಶ್ರೀವಿಶ್ವಪ್ರಿಯರ ಆದೇಶವನ್ನು ಪಡೆದುಕೊಂಡೇ ಮುಂದಿನ ಹೆಜ್ಜೆಯನ್ನಿಡುತ್ತಿದ್ದರು. ಹಾಗಾಗಿ ಶ್ರೀನಿವಾಸಾಚಾರ್ಯರು ಶ್ರೀವಾದಿರಾಜ ಗುರುಸಾರ್ವಭೌಮರ ಪರಮಭಕ್ತರಾಗಿದ್ದರಲ್ಲದೇ ರಾಜರ ಋಜುತ್ವದಲ್ಲಿ ಅಚಲ ವಿಶ್ವಾಸವುಳ್ಳವರಾಗಿದ್ದರು.

ಶ್ರೀಸೋದಾ ಮಠದ 32ನೇ ಪೀಠಾಧಿಪತಿಗಳಾದ ಶ್ರೀವಿಶ್ವಪ್ರಿಯ ತೀರ್ಥರು ವಾದಿರಾಜರ ನಂತರ ಶ್ರೀಮಠದಲ್ಲಿ ಬಂದ ಶಕಪುರುಷರಲ್ಲಿ ಅಗ್ರಗಣ್ಯರಾದವರು. ಶ್ರೀಮನ್ನ್ಯಾಯಸುಧಾದಿ ಗ್ರಂಥಗಳಲ್ಲಿ ಅಪರಿಮಿತ ವಾದ ಪ್ರಾವೀಣ್ಯತೆಯನ್ನು ಸಂಪಾದಿಸಿದ್ದ ಶ್ರೀಗಳವರು ಆ ಕಾಲದ ಪಂಡಿತಮಂಡಲಿಯಲ್ಲಿ 'ಸಮರಧಿಕರಿಲ್ಲದ ವಿದ್ವನ್ಮಣಿಗಳು' ಎಂಬ ಕೀರ್ತಿಗೆ ಪಾತ್ರರಾಗಿದ್ದರು.[1] ಕ್ರಿ.ಶ. 1776ರಿಂದ 1865ರವರೆಗೂ ಜೀವಿಸಿದ್ದ ಈ ಜ್ಞಾನಿವರೇಣ್ಯರ ಚರಿತ್ರೆ ರೋಮಾಂಚಕರವಾದದ್ದು. ವಾದಿರಾಜರ ಕಾಲದಲ್ಲಿ ಏಡಮೂಕ ಬ್ರಾಹ್ಮಣರಾಗಿ ಜನಿಸಿದ್ದು ತಮ್ಮ ಮುಗ್ಧಸ್ವಭಾವ ಮತ್ತು ಸೇವಾಪರತೆಗಳಿಂದ ಅವರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದ ರಲ್ಲದೇ ರಾಜರ ಬೃಂದಾವನ ಪ್ರವೇಶದ ನಂತರ ಅವರಿಂದ ಸ್ವಪ್ನದಲ್ಲಿ ಮಂತ್ರತುಲ್ಯವಾದ "ವೃಂದಾವನಾಖ್ಯಾನ"ವನ್ನು ಉಪದೇಶವಾಗಿ ಪಡೆದು ಕೊಂಡ ಪುಣ್ಯಶಾಲಿಗಳೆಂಬ ಐತಿಹ್ಯವಿದೆ. ವಿಶ್ವಪ್ರಿಯರಿಂದಾಗಿ ಶ್ರೀಸ್ವಪ್ನವೃಂದಾವನಖ್ಯಾನ ವಿಶೇಷ ಪ್ರಚಾರವನ್ನು ಪಡೆದುಕೊಂಡಿತು. ಕೇವಲ ಪೂಜಾಸಂಪುಟವಾಗಿ ಉಳಿದಿದ್ದ ಮತ್ತು ಸಾಮಾನ್ಯರಿಗೆ

---

1. "ನಿತ್ಯಂ ಸುಧಾದಿಗ್ರಂಥಾನಾಂ ಪ್ರವಕ್ತೃಷ್ವದ್ಯಸೂರಿಷು ।
ಮೃಗ್ಯಮಾಣೇಷ್ವನಂತಾಯಾಂಕಃ ಸಮೋಸ್ಯ ಕ್ವಚಾಧಿಕಃ ॥"
– ಶ್ರೀವಿಶ್ವಪ್ರಿಯಲೀಲಾವಿಲಾಸ.

ಅರ್ಥಮಾಡಿಕೊಳ್ಳಲು ಅಸಾಧ್ಯವಾಗಿದ್ದ ಆಖ್ಯಾನವನ್ನು ಅಧ್ಯಾಯ, ಪ್ರಕರಣಾದಿ ವಿಭಾಗಗಳಾಗಿ ವಿಂಗಡಿಸಿ, ಆಖ್ಯೋನೋಕ್ತ ವ್ಯಕ್ತಿಗಳನ್ನು ಸವಿವರವಾಗಿ ಪರಿಚಯಿಸುವುದರ ಮೂಲಕ ಸರಳೀಕರಿಸಿ ವಿಶ್ವಪ್ರಿಯರು ರಾಜರ ಭಕ್ತರಿಗೆ ಉಪದೇಶಿಸಿದರು.[1] ಹಯಾಸ್ಯಾದಿ ವಿವಿಧ ಭಗವದ್ರೂಪಗಳ ಮಹಿಮಾ ವರ್ಣನೆ ಮತ್ತು ತತ್ವಬೋಧನೆಯಿಂದಾಗಿ "ಹಯಗ್ರೀವವಿದ್ಯೆ" ಎಂದೆನಿಸಿದ ಈ ವಿಸ್ಮಯಭರಿತ ಕೃತಿ ಪೌರುಷೇಯ ವಾದರೂ ಅಪೌರುಷೇಯ ಮಂತ್ರಪುಂಜದಂತೆ ಯೋಗ್ಯಚೇತನಗಳ

---

1. "ಸ್ವಪ್ನ ದ್ರಷ್ಟುಗಳೆನಿಸಿ ಅಪ್ಪ ಹಯಮುಖ ದಯದಿ।
ಅಪ್ಪುತಲಿ ಜಾತಿಸ್ಮೃತಿ ಗೊಪ್ಪವೆಂದೆನಿಪ।
ಸ್ವಪ್ನದಾಖ್ಯಾನವನು ಪ್ರಕರಣಗಳೆಂದೆನಿಸಿ
ಕೃಪ್ಪೆಯಲಿ ವ್ಯಕ್ತಿಗಳ ಪರಿಚಯವ ಗೈದೇ ॥"

– ಗುರುಗೋವಿಂದದಾಸರು
("ನಮಿಸುವೆನು ನಮಿಸುವೆನು ವಿಶ್ವಪ್ರಿಯಾರ್ಯ" ಕೃತಿಯಲ್ಲಿ)

– A century and a half later came the distinguised Pontiff of the Sode Mutt in the person of Visvapriya Tirtha who is believed to have been the very attendant in his former life to whom Vadiraja had communicated his Mahima. The text of the "BRINDAVANAKHYANA" was then fully revised and properly edited with headings of topics and chapters and given widest publicity. Sri Visvapriya also commissioned one of his trusted disciples Sremushnam Acharya from Srimushnam in the S. Arcot of Tamilnadu and another ascetic disciple Raghupravira Tirtha of the Bhimanakatte Matha to establish the validity of the work. The specatacular lead given by Visvapriya Tirtha in propagating the Rjutva of Vadiraja and his Bhavi-samiratva (future succession to the status of Vayu) with such deep commitment, perverence and persuasiveness all over the land has earned for him the respectful name of "Vrindavana Acharya" by which he is lovingly and reverentially known to this day."

**- Dr. B.N.K. Sharma**
("ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ" ಯ ಮುನ್ನುಡಿಯಲ್ಲಿ)

ಮೇಲೆ ಅದ್ಭುತ ಪರಿಣಾಮವನ್ನು ಬೀರಲಾರಂಭಿಸಿತು. ಶ್ರೀಗಳವರ ಮಾರ್ಗದರ್ಶನದ ಬೆಳಕಿನಲ್ಲಿ ಹಲವಾರು ಸುಜೀವಿಗಳು "ಋಜುಗೀತೆ" ಯಾದ ಆಖ್ಯಾನವನ್ನು ಪ್ರತಿನಿತ್ಯ ಪರಮಾದರದಿಂದ ಪಾರಾಯಣ ಮಾಡತೊಡಗಿದರು. ವಿಶ್ವಪ್ರಿಯರ ಪ್ರೇರಣೆ ಹಾಗೂ ಆದೇಶದಂತೆ ಶ್ರೀಗಳವರ ವಿದ್ಯಾಶಿಷ್ಯರಾಗಿದ್ದ ಭೀಮನಕಟ್ಟೆ ಮಠಾಧೀಶ ಶ್ರೀರಘುಪ್ರವೀರ ತೀರ್ಥರು ಮತ್ತು ಶ್ರೀಮುಷ್ಣಾಚಾರ್ಯರು ಶ್ರೀಸ್ವಾಪ್ನವೃಂದಾವನಾಖ್ಯಾನಕ್ಕೆ ಪ್ರಬುದ್ಧ ವ್ಯಾಖ್ಯಾನವನ್ನೂ, ಪ್ರಾಮಾಣ್ಯ ಸಮರ್ಥಕ ಕೃತಿಯನ್ನೂ ರಚಿಸಿದರು. ಮುಂದೆ ಇದರಿಂದ ಉತ್ತೇಜಿತರಾಗಿ ಶ್ರೀಜಂಬುಖಂಡಿ ವಾದಿರಾಜಾಚಾರ್ಯರೂ ಸಹ ಆಖ್ಯಾನದ ಮಹಿಮೆಗಳನ್ನು ಧ್ವನಿಪೂರ್ಣ ವಾಗಿ ಬಿಂಬಿಸುವ ಭಾವಾನುವಾದವನ್ನು ಮಾಡಿದರು. ನಂತರ ಅವರ ಶಿಷ್ಯರೇ ಆದ ಬೆಳಗಾವಿಯ ವಾಳವೇಕರ್ ಶ್ರೀವೆಂಕಣ್ಣಾಚಾರ್ಯರು ಆಖ್ಯಾನದ ಗಂಭೀರ ಅಧ್ಯಯನ ಕೈಗೊಂಡು, ಇದರ ಒಳತಿರುಳನ್ನು ತೆರೆದಿಟ್ಟರು. ಇತ್ತೀಚೆಗಂತೂ ಮೈಸೂರಿನ ಶ್ರೀ ಎಚ್. ಸುಬ್ಬರಾಯರು, ಶ್ರೀಗುರುಗೋವಿಂದ ದಾಸರು, ಆತ್ಮಕೂರು ಶ್ರೀಆನಂದತೀರ್ಥಾಚಾರ್ಯ, ತುಮಕೂರಿನ ಶ್ರೀ ನಾಗಭೂಷಣರಾಯರೇ ಮೊದಲಾದ ವಿದ್ವನ್ಮಣಿಗಳು ಆಖ್ಯಾನವನ್ನು ಸಮರ್ಪಕವಾಗಿ ವ್ಯಾಖ್ಯಾನಿಸುವುದರ ಮೂಲಕ ಈ ಕೃತಿಯ ಪ್ರಾಮಾಣ್ಯವನ್ನೂ, ವಾದಿರಾಜರ ಋಜುತ್ವವನ್ನೂ ಸಮರ್ಥವಾಗಿ ಸ್ಥಾಪಿಸಿದ್ದಾರೆ.

"ಬಿಟ್ಟು ದ್ವಾದಶವರುಷದಿ। ಅನ್ನಂಗಳ, ಸುಟ್ಟು ದುರುಳ ಕಾಮಾದಿ।
ಪ್ರೇಷ್ಠರದಯದಿಂದ ಶ್ರೇಷ್ಠ ಶ್ರೀಪ್ರಾಣಪತಿ।
ವಿಠಲನರ್ಚಿಸಿ ತುಷ್ಟಿಯ ಪಡೆಸಿದ ॥"

ಎಂದು ಶ್ರೀಪ್ರಾಣಪತಿವಿಠಲಾಂಕಿತ ಶ್ರೀಷಟ್ಪುರಾಚಾರ್ಯರು "ವೃಂದಾ-ವನಾಚಾರ್ಯರ । ಚರಣ ಕಮಲಕ್ಕೊಂದಿಸುವೆನು" ಎಂಬ ಕೀರ್ತನೆಯಲ್ಲಿ ಹೇಳಿರುವಂತೆ ಮಹಾ ತಪಸ್ವಿಗಳಾದ ಶ್ರೀವಿಶ್ವಪ್ರಿಯರು ಹನ್ನೆರಡು ವರ್ಷಗಳ ಕಾಲ ಕಠಿಣವಾದ ನಿರನ್ನವ್ರತವನ್ನು ಆಚರಿಸಿ ಶ್ರೀಹರಿಯ ಒಲುಮೆಯನ್ನು ಸಂಪಾದಿಸಿದರು. ತಮ್ಮ ಮಠಕ್ಕೆ ಅಖಂಡ

ಕೀರ್ತಿಯನ್ನು ತಂದುಕೊಟ್ಟ ಶ್ರೀವಾದಿರಾಜ ಗುರುಸಾರ್ವಭೌಮರಂತೆ ಮತ್ತು ಅವರ ನಂತರ ಅವರ ಪರಂಪರೆಯಲ್ಲಿ ಬಂದ ಶ್ರೀವಿಶ್ವಾಧೀಶ ತೀರ್ಥರಂತೆ ವಿಶ್ವಪ್ರಿಯರೂ ಸಹ ಭಾರತದ ಹಲವಾರು ಸ್ಥಳಗಳಿಗೆ ಅದರಲ್ಲಿಯೂ ಪ್ರಮುಖವಾಗಿ ಕೊಚ್ಚಿ ದೇಶಕ್ಕೆ ಭೇಟಿಕೊಟ್ಟು ಅನೇಕ ಪಂಡಿತರನ್ನು ಜಯಿಸಿ ಮಧ್ವ ಸಿದ್ಧಾಂತವನ್ನು ಪ್ರಚುರಪಡಿಸಿದರು.[1] ಶ್ರೀಗಳವರ ತಪಶ್ಶಕ್ತಿ ಮತ್ತು ವಿದ್ವತ್ಪ್ರತಿಭೆಗಳಿಗೆ ಮಾರುಹೋಗಿ ಕೊಚ್ಚಿ ದೇಶದ ಮಹಾರಾಜ ಅವರನ್ನು ವಿಶೇಷವಾಗಿ ಸನ್ಮಾನಿಸಿದನಲ್ಲದೇ ಅವರಿಂದ ತಪ್ತ ಮುದ್ರಾಂಕಿತನಾಗಿ ಮಧ್ವಮತಾನುಯಾಯಿಯಾದನು. ಆ ಸಂದರ್ಭದಲ್ಲಿಯೇ ಕೊಚ್ಚಿಯ ರಾಜಮನೆತನದವರು ಹಾಗೂ ರಾಜ್ಯದ ಅನೇಕ ಗಣ್ಯವ್ಯಕ್ತಿಗಳು ಮಧ್ವಮತವನ್ನು ಸ್ವಯಿಚ್ಛೆಯಿಂದ ಅಂಗೀಕರಿಸಿದರು. ಶ್ರೀಸೇತುಮಾಧವಸೂರಿ ವಿರಚಿತ "ಶ್ರೀವಿಶ್ವಪ್ರಿಯಗುರು ಲೀಲಾವಿಲಾಸ" ಮತ್ತು ಕೊಚ್ಚಿ ರಂಗಪ್ಪಾಚಾರ್ಯಕೃತ "ಶ್ರೀವಿಶ್ವಪ್ರಿಯ ವಿಲಾಸಪ್ರಬಂಧ" ಎನ್ನುವ ಕೃತಿಗಳಲ್ಲಿ ಶ್ರೀಗಳವರ ಅದ್ಭುತ ಮಹಿಮೆಗಳು ವರ್ಣಿಸಲ್ಪಟ್ಟಿವೆ.

---

1. "A successful, though not widespread attempt to spread the message of Madhwa, in the former Cochin state, was made by an enterprising swami of the Sode Vadiraja Mutt, Sri Visvadhisha Tirtha, in the beginning of the 19th Century. This attempt was renewed by his renowned grand disciple; Visvapriya (d.1865). As a result of their efforts, some members of the Cochin royal family, including two or three Maharajas who sat on the throne of Cochin and their kinsmen, including some royal ladies, a few learned Nambudri and Nayar families adopted the faith of Madhwa. The royal families in question are now extinct and the descendants of the other families seem to have reverted to their previous faith. The Visvapriya villasa" of my grandfather, Cochi Rangappacharya, gives an account of these events. This historic conversion of the Cochin Maharajas has been recorded in the Cochin State Manual".

- **Dr. B.N.K. Sharma** in his "History of the Dvaita School of Vedanta and its Literature".

ಇಂತಹ ಮಹಾಮಹಿಮರಾದ ಶ್ರೀವಿಶ್ವಪ್ರಿಯತೀರ್ಥರ ಅನುಗ್ರಹ ಪಾತ್ರರಾದ ಜಂಬುಖಂಡಿ ಶ್ರೀನಿವಾಸಾಚಾರ್ಯರು ಪಂಡಿತರಾಗಿದ್ದರೂ ಹರಿದಾಸ ಹೃದಯವುಳ್ಳ ಸಚ್ಚೇತನರು. ನಿತ್ಯವೂ ಶ್ರೀಜಗನ್ನಾಥದಾಸರ ಹರಿಕಥಾಮೃತಸಾರವನ್ನು ಪಾರಾಯಣ ಮಾಡುತ್ತಿದ್ದ ಅವರನ್ನು ಕುರಿತು ಶ್ರೀಗುರುಗೋವಿಂದವಿಠಲದಾಸರು ತಾವು ಬರೆದಿರುವ "ಹರಿಭಕ್ತ ವಿಜಯ ಭಾಗ-1" ರಲ್ಲಿ ವಾದಿರಾಜಾಚಾರ್ಯರ ತಂದೆಯವರು ತಪ್ಪದೇ ಪ್ರತಿನಿತ್ಯವೂ ಶ್ರೀಮದ್ಧರಿಕಥಾಮೃತಸಾರ ಗ್ರಂಥವನ್ನು ಭಕ್ತಿಯಿಂದ ಪಾರಾಯಣ ಮಾಡುತ್ತಲೂ ಹಾಗೂ ತಮ್ಮ ಶಿಷ್ಯರಿಗೆ ಅದನ್ನು ಉಪದೇಶಿಸುತ್ತಲೂ ಇದ್ದರೆಂತಲೂ ಹರಿದಾಸ ಸಾಹಿತ್ಯದ ಪ್ರಭಾವಕ್ಕೊಳ ಪಟ್ಟು ದಾಸದೀಕ್ಷಾ ಸ್ವೀಕರಿಸಿದ್ದಿರಬಹುದೆಂತಲೂ ಅನುಮಾನಪಡುವ ರಲ್ಲದೆ "ಇದರ ವಿಚಾರವಾಗಿ ಖಚಿತ ಉಲ್ಲೇಖನಗಳು ದೊರಕದೆಯೇ, ಅವರ ಅನುಷ್ಠಾನದಿಂದ ಊಹಿಸಬೇಕಾದ ಸಂಗತಿಯಾಗಿದೆ" ಎಂಬ ನಿಲುವಿಗೆ ಬರುತ್ತಾರೆ.

ಶ್ರೀನಿವಾಸಾಚಾರ್ಯರ ಪತ್ನಿಯ ಹೆಸರು ಸೀತಾಬಾಯಿ. ಸದ್ಗುಣ ಸಂಪನ್ನೆಯಾಗಿದ್ದ ಆಕೆ ಹೆಸರಿಗೆ ತಕ್ಕಂತೆ ಪತಿಯ ಇಚ್ಛೆಯರಿತು ನಡೆಯಬಲ್ಲ ಚತುರೆ. ಮನೆಗೆ ಬರುವ ಅತಿಥಿ-ಅಭ್ಯಾಗತರನ್ನು ಸತ್ಕರಿಸುವುದರಲ್ಲಿಯೂ, ವ್ರತ-ನಿಯಮಗಳನ್ನು ಪಾಲಿಸುವುದರಲ್ಲಿಯೂ ಆಕೆ ನಿಷ್ಣಾತೆಯಾಗಿದ್ದಳು. ದೇವರು ಕೊಟ್ಟಷ್ಟರಲ್ಲಿಯೇ ಸಂತುಷ್ಟರಾಗಿದ್ದ ಶ್ರೀನಿವಾಸಾಚಾರ್ಯ ದಂಪತಿಗಳಿಗೆ ಬಹು ಕಾಲವಾದರೂ ಮಕ್ಕಳಾಗ ಲಿಲ್ಲ. ಅವರಿಗಿದ್ದ ಕೊರಗು ಅದೊಂದೇ. ಆ ಕೊರಗಿನ ನಿವಾರಣೆಗಾಗಿ ದಂಪತಿಗಳು ದೇವರನ್ನೇ ಮೊರೆಹೊಕ್ಕರು. ವಂಶೋದ್ಧಾರಕ್ಕೆ ಕಾರಣ ವಾಗುವ ಸತ್ಪುತ್ರನನ್ನು ಕರುಣಿಸು ಎಂದು ಪರಿಪರಿಯಾಗಿ ಪ್ರಾರ್ಥಿಸಿ, ಅನೇಕ ವ್ರತ ನೇಮ ಉಪವಾಸಗಳನ್ನು ಮಾಡಿದರು.

"ತೌ ಗತ್ವಾ ದಂಪತೀ ರೌಪ್ಯಪೀಠಗಂ ಯದುನಂದನಂ।
ನತ್ವಾನುಜ್ಞಾಂ ತತಃ ಪ್ರಾಪ್ಯ ಸೋದಾ ಕ್ಷೇತ್ರಂ ಪ್ರಜಗ್ಮತುಃ॥"

ಎಂದು ಆಚಾರ್ಯರ ಶಿಷ್ಯರಾದ ಶ್ರೀಷಟ್ಪುರಾಚಾರ್ಯರು ತಾವು ರಚಿಸಿರುವ "ಶ್ರೀಸುಧಾಕರಗುರುಗುಣ ರತ್ನಮಾಲಾ" ಕೃತಿಯಲ್ಲಿ ಉಲ್ಲೇಖಿಸಿರುವಂತೆ ಶ್ರೀನಿವಾಸಾಚಾರ್ಯ ದಂಪತಿಗಳು ಹರಿ ಗುರುಗಳ ಪ್ರೇರಣಾನುಸಾರ ಯದುನಂದನನಾದ ಶ್ರೀಕೃಷ್ಣನನ್ನು ಸೇವಿಸಲು ರೌಪ್ಯಪೀಠವೆಂದು[1] ಪ್ರಸಿದ್ಧವಾದ ಉಡುಪಿ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಸಪ್ತಪುಣ್ಯ ಕ್ಷೇತ್ರಗಳಲ್ಲಿ ಒಂದೆಂದು ಪ್ರಸಿದ್ಧವಾದ ಉಡುಪಿಯಲ್ಲಿ ರಾಮಭೋಜರಾಜನ ಭಕ್ತಿಗೆ ಮೆಚ್ಚಿ ಶ್ರೀಮದನಂತೇಶ್ವರನೆಂಬ ಹೆಸರಿನಿಂದ ಸಂಕರ್ಷಣರೂಪೀ ಶ್ರೀಹರಿ ಲಿಂಗಾಕಾರದಲ್ಲಿ ಸನ್ನಿಹಿತ ನಾಗಿದ್ದಾನೆ. ಶ್ರೀಮನ್ಮಧ್ವಾಚಾರ್ಯರು ತಮಗೆ ಒಲಿದುಬಂದ ಬಾಲಕೃಷ್ಣನ ಸುಂದರ ಮೂರ್ತಿಯನ್ನು ಇಲ್ಲಿನ ಮಧ್ವಸರೋವರದ ದಂಡೆಯಲ್ಲಿ ಪ್ರತಿಷ್ಠಾಪಿಸಿರುತ್ತಾರೆ. ಆಚಾರ್ಯ ದಂಪತಿಗಳು ಉಡುಪಿಯಲ್ಲಿ ಸಂಕಲ್ಪ ಪೂರ್ವಕವಾಗಿ ಕಠಿಣತರವಾದ ವ್ರತಗಳನ್ನು ಕೈಗೊಂಡು ಮಧ್ವವರದನೂ, ಕ್ಷಿಪ್ರಫಲದಾಯಕನೂ ಆದ ಕಡಗೋಲು ಕೃಷ್ಣನನ್ನು ಮತ್ತು

---

1. "ರೂಪ್ಯಾತ್ಮಕಸ್ಯ ಭವತಸ್ತುಲನಾಂ ನ ಭೇಜುಃ
ಕ್ಷೇತ್ರಾಣಿ ಭಾರತಮಹೀರಚಿತಾನ್ಯಮೂನಿ।
ಈಶಾಚಲಂ ಚ ಜಯಸೀಶ್ವರಮಾತ್ರವಾಸಂ
ಶ್ರೀಮಧ್ವಹಸ್ತಕಮಲಾರ್ಚಿತ ಕೃಷ್ಣಮೂರ್ತ್ಯಾ॥"

– ತೀರ್ಥಪ್ರಬಂಧ (ಪಶ್ಚಿಮ ಪ್ರಬಂಧ–10)

"ಅರಸು ರಾಮಭೋಜಾ ದ್ವಾರದ ಸಭೆಯಲ್ಲಿ।
ಪರಶುಧರಗೆ ಬಂದು ಹರಿಮಣಿತೆತ್ತಿಸಿದ।
ಪರಮ ರಜತವಿಷ್ಟರವನ್ನು ನೇಮಿಸಿ।
ಹರುಷದಿಂದಲಿ ಸ್ತೋತ್ರ ಮಾಡುತ್ತಯಾಗ।
ವಿರಚಿಸಿ ನಿತ್ಯ ಭೂಸುರರು ಸುಖಬಡಿಸಿ।
ಮರುಳೆ ಸಿಂಹನಾಮಗಿರಿಯಲ್ಲಿ ಜನಿಸಿ।
ಮೆರೆವ ಸೂ–ವರ್ನಾ ಸರಿತೆಯಲಿ ಮಿಂದು।
ಪರಿಪರಿ ಬಗೆಯಿಂದ ಇರುತಿರೆ ಇತ್ತಲು
ಧರೆಯೊಳಗಿದು ಪೆಸರು ರಜತ ಪೀಠಪುರವೆಂದೆನಿಸಿತು"

– ಶ್ರೀವಿಜಯದಾಸರ ಉಡುಪಿ ಕ್ಷೇತ್ರಮಹಿಮಾ ಸುಳಾದಿ

ಶ್ರೀಮದನಂತೇಶ್ವರನನ್ನು ಶ್ರದ್ಧೆಯಿಂದ ಸೇವಿಸಿದರು. ನೆರೆನಂಬಿದ ಭಕ್ತರನ್ನು ಪಾರವಿಲ್ಲದ ಸಂಸಾರ ಸಾಗರದಿಂದಲೇ ಕಡೆಹಾಯಿಸುವ ಕರುಣಾಮೂರ್ತಿಯಾದ ಶ್ರೀಕೃಷ್ಣ ತನ್ನನ್ನೇ ನಂಬಿ ಬಂದ ದಂಪತಿಗಳ ಮನದಿಚ್ಛೆಯನ್ನು ಪೂರೈಸದಿರುವನೇ? ಕ್ಷಿಪ್ರದಲ್ಲಿ ದಂಪತಿಗಳ ಮೇಲೆ ಹರಿಯೊಲುಮೆಯುಂಟಾಯಿತು. ಅವರ ಸೇವೆಯಿಂದ ಸಂತೃಪ್ತನಾದ ಸ್ವಾಮಿ ವೈಷ್ಣವೋತ್ತಮನೂ, ಗುರುಸೇವಾ ಧುರಂಧರನೂ ಆದ ಕುಲದೀಪಕನನ್ನು ಕರುಣಿಸಲು ಸಂಕಲ್ಪಿಸಿ ಗುರುವನುಗ್ರಹ ಸಂಪಾದನೆಗಾಗಿ ಸೋದಾ ಕ್ಷೇತ್ರಕ್ಕೆ ತೆರಳುವಂತೆ ದಂಪತಿಗಳಿಗೆ ಸ್ವಪ್ನದ್ವಾರ ಸೂಚಿಸಿದನು. ಸ್ವಾಮಿಯ ಸೂಚನೆಯಂತೆ ಶ್ರೀನಿವಾಸಾಚಾರ್ಯ ದಂಪತಿಗಳು ಸೋದಾ ಕ್ಷೇತ್ರಕ್ಕೆ ಬಂದರು. ಕ್ಷೇತ್ರಪಾಲಕರೂ, ಮುಂದಿನ ರುದ್ರಪದಸ್ಥರೂ, ವಾದಿರಾಜರ ಪ್ರಿಯದೂತರೂ ಆದ ಶ್ರೀಭೂತರಾಜರಿಗೆ ಪೊಡಮಟ್ಟು, ಅವರ ಅಪ್ಪಣೆಯನ್ನು ಪಡೆದು ನಂತರ ಅಲ್ಲಿನ ಪಂಚ ಬೃಂದಾವನದಲ್ಲಿ ವಿರಾಜಮಾನರಾಗಿರುವ ಭಾವಿಸಮೀರ ಶ್ರೀಮದ್ವಾದಿರಾಜ ಗುರುಸಾರ್ವಭೌಮರಿಗೆ ಶರಣಾಗತರಾಗಿ ಅವರನ್ನು ಶ್ರದ್ಧಾಭಕ್ತಿಗಳಿಂದ ಸೇವಿಸಲು ತೊಡಗಿದರು. ಆ ಸಂದರ್ಭದಲ್ಲಿ ಸೋದೆಯಲ್ಲಿದ್ದ ಶ್ರೀ ವಿಶ್ವಪ್ರಿಯತೀರ್ಥರಲ್ಲಿ ತಮ್ಮ ಮನೋ ಬಯಕೆಯನ್ನು ನಿವೇದಿಸಿಕೊಂಡು, ಅವರ ಮಾರ್ಗದರ್ಶನದಂತೆ ಪ್ರತಿನಿತ್ಯವೂ ಪವಿತ್ರವಾದ ಧವಳಗಂಗೆಯಲ್ಲಿ ಸ್ನಾನ ಮಾಡುತ್ತಾ, ರಾಜರ ಬೃಂದಾವನದ ಮೃತ್ತಿಕೆಯ ಲೇಪನ[1], ಮೃಜ್ಜಲ ಪಾನಾದಿಗಳಿಂದ ನಿರ್ಮಲಾಂತಃಕರಣ ಭರಿತರಾಗಿ ವಾದಿರಾಜರ ಅಮಲ ಪ್ರೀತಿಗೆ

---

1. ಗೋಪೀಚಂದನದಂತೆ ಸಕಲ ಭಗವದ್ರೂಪಗಳ ಸನ್ನಿಧಾನಯುಕ್ತವಾದ ಶ್ರೀಮದ್ವಾದಿರಾಜ ಗುರುವರ್ಯರ ಮೂಲ ವೃಂದಾವನದ ಮೃತ್ತಿಕೆಯೂ ಸಹ ಪರಮ ಪವಿತ್ರವಾದುದ್ದೆಂದು ಅಸಂಖ್ಯಾತ ಶ್ರದ್ಧಾಳುಗಳು ಭಾವಿಸಿ ಪ್ರತಿನಿತ್ಯ ರಾಜರ ಮೃತ್ತಿಕಾ ಧಾರಣೆ ಹಾಗೂ ಮೃಜ್ಜಲ ಸೇವೆಯನ್ನು ಅತೀವ ಭಕ್ತಿಯಿಂದ ಮಾಡುತ್ತಾರೆ.

**"ಬ್ರಹ್ಮಹತ್ಯಾದಿ ಪಾಪಘ್ನೀ ಮೃತ್ತಿಕಾ ಮರ್ತ್ಯಮುಕ್ತಿದಾ।**
**ವಾದಿರಾಜ ಗುರೋರ್ವೃಂದಾವನಸ್ಥಾ ಸೇವ್ಯತಾಂ ಬುಧೈಃ।**



ಕಾರಣರಾದರು. ಸೇವಾ ಸಂದರ್ಭದಲ್ಲಿ ಅವರಿಗೆ ಅನೇಕ ಶುಭ ಸೂಚನೆಗಳಾದವು. ಇದಕ್ಕೆ ಪೂರಕವಾಗಿ ವೃಂದಾವನಾಚಾರ್ಯರೆಂದು ಪ್ರಸಿದ್ಧರಾದ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದಂಗಳವರು ರಾಜರ ಪ್ರೇರಣೆಯಂತೆ ಶ್ರೀನಿವಾಸಾಚಾರ್ಯರಿಗೆ ವಾದಿರಾಜ ಗುರುವರ್ಯರ ಬಂಗಾರದ ಬೃಂದಾವನವನ್ನು ಕರುಣಿಸಿ, ಫಲ ಮಂತ್ರಾಕ್ಷತೆಗಳನ್ನಿತ್ತು ಪರಮಾನುಗ್ರಹ[2] ಮಾಡಿದರು.

---

← ಎಂದು ವಾದಿರಾಜ ಸ್ತೋತ್ರದಲ್ಲಿ ರಾಜರ ಮೃತ್ತಿಕಾ ಮಹಿಮೆಯ ವರ್ಣನೆ ಇದ್ದರೆ

**"ಋಜುತ್ವೇನ ಸುನಿರ್ಣೀತೋ ವಾದಿರಾಜೋ ಜಗದ್ಗುರುಃ।**
**ಸರ್ವದಾ ರಕ್ಷಕೋ ಭೂಯಾತ್ ಅಸ್ಮಾಕಂ ಧೃತ ತನ್ಮೃದಾಂ॥"**

ಎಂದು "ಋಜುತ್ವ ಪ್ರಮಾಣ ಸಂಗ್ರಹ" ಇದನ್ನು ಸಮರ್ಥಿಸುತ್ತದೆ.

**"ಕುಷ್ಠಾಪಸ್ಮಾರಲೂತಾನ್ ತಾನ್ ಬಾಲಸ್ಫೋಟಾದಿಕಾನ್ ಬಹೂನ್।**
**ಮೃತ್ತಿಕಾ ನಾಶಯತ್ಯೇವ ವೃಂದಾವನಗತಾ ಮನೇ (ಮುನೇಃ)॥"**

ಎಂಬುದಾಗಿ "ಸ್ವಾಪ್ನ ವೃಂದಾವನಾಖ್ಯಾನ"ದಲ್ಲಿ ಈ ಕುರಿತು ಸ್ಪಷ್ಟ ಉಲ್ಲೇಖವೇ ಇದೆ.

2. **"ಲಬ್ಧ್ವಾ ವೃಂದಾವನಾಚಾರ್ಯಗುರುಭ್ಯಸ್ತೌ ಹಿರಣ್ಮಯಮ್।**
**ವೃಂದಾವನಂ ಸೇವಮಾನೌ ಭಕ್ತ್ಯಾ ಕೇವಲಯಾ ಮುದಾ॥"**

ಎಂಬುದಾಗಿ ಈ ವಿಷಯವನ್ನು ಶ್ರೀಸುಧಾಕರಗುರುಗುಣ ರತ್ನಮಾಲಾ ಕಾರರೂ ಸಹ ಉಲ್ಲೇಖಿಸಿರುತ್ತಾರೆ. "ತತ್ರಭೃತ್ಯಭವದ್ಗೇಹೇ ಸೌಮ್ಯೇ ವೃಂದಾವನೇ ಗುರುಃ" ಎಂದು ಆಚಾರ್ಯರೇ ಹೇಳಿಕೊಂಡಿರುವಂತೆ ರಾಜರು ಅಂದಿನಿಂದ ರಜತ ಪಂಚವೃಂದಾವನ ರೂಪದಿಂದ ನಿತ್ಯ ಸನ್ನಿಹಿತರಾದರು. ಈಗಲೂ ಸಹ ಶ್ರೀವಿಶ್ವಪ್ರಿಯತೀರ್ಥರು ಕರುಣಿಸಿರುವ ಶ್ರೀವಾದಿರಾಜ ಗುರುವರ್ಯರ ಆ ರಜತ ಪಂಚವೃಂದಾವನ ಜಂಬುಖಂಡಿ ಆಚಾರ್ಯರ ವಂಶಸ್ಥರಿಂದ ನಿತ್ಯ ಪೂಜೆಗೊಳ್ಳುತ್ತಿದೆ. 1992ರ ವರೆಗೂ ಅಭೇದ್ಯವಾದ ಸಂಪುಟವೊಂದರಲ್ಲಿದ್ದ ರಾಜರ ಬಂಗಾರದ ವೃಂದಾವನ, ಒಮ್ಮೆ ಬಳ್ಳಾರಿಗೆ ಭೇಟಿಕೊಟ್ಟ ಸೋದಾ ಶ್ರೀಗಳಾದ ಶ್ರೀ ಶ್ರೀವಿಶ್ವೋತ್ತಮ ತೀರ್ಥರು ಪೂಜಿಸಿ, ಅನುಗ್ರಹಿಸಿದ ನಂತರ ಸಂಪುಟ ಸುಲಭವಾಗಿ ತೆಗೆಯಲ್ಪಟ್ಟಿತೆಂದು ವಂಶಸ್ಥರಿಂದ ತಿಳಿದುಬರುತ್ತದೆ.

ಗುರುಗಳಿಂದ ಅನುಗ್ರಹೀತರಾದ ನಂತರ ಶ್ರೀನಿವಾಸಾಚಾರ್ಯ ದಂಪತಿಗಳು ಸ್ವಗ್ರಾಮವಾದ ಹಾನಗಲ್ಲಿಗೆ ಮರಳಿಬಂದರು. ಕೆಲವು ದಿವಸಗಳಲ್ಲಿಯೇ ಆಚಾರ್ಯರ ಪತ್ನಿಯವರು ಗರ್ಭವತಿಯಾದರು. ಹರಿಗುರುಗಳ ಕೃಪಾಬಲದಿಂದ ಪುಣ್ಯದೊಡಲು ತುಂಬಿತ್ತು. ದಂಪತಿಗಳ ಮನೋಬಯಕೆ ಈಡೇರುವ ಮಂಗಳದ ಮುಹೂರ್ತ ಹತ್ತಿರವಾಗಿತ್ತು. ಭವಬೇಗೆಯಲ್ಲಿ ಬೆಂದವರನ್ನು ಸಂತೈಸಿ, ತತ್ವಜ್ಞಾನದ ತೃಷೆ ಹಿಂಗಿಸುವ 'ಸುಧಾನಿಧಿ'ಯೊಂದು ಆ ಸಾಧ್ವಿಯ ಗರ್ಭಾಂಬುಧಿಯಲ್ಲಿ ಪ್ರಾದುರ್ಭವಿಸಿತ್ತು. ರಾಜರ ಋಜುತ್ವ ಸ್ಥಾಪನೆಗಾಗಿ ತಮ್ಮ ಬದುಕನ್ನೇ ಮೀಸಲಿಟ್ಟ ಮುಂದಾಳುವಿನ ನಿರೀಕ್ಷೆಯಲ್ಲಿದ್ದ ಸಜ್ಜನವೃಂದದ ಮಹದಾಸೆ ಫಲಿಸುವ ಶುಭೋದಯದ ಮುನ್ಸೂಚನೆಯಂತೆ ಕ್ರಿ.ಶ. 1842ರ ಜುಲೈ 27ನೇ ದಿನಾಂಕ, ಶುಭಕೃತ್ ಸಂವತ್ಸರದ ಆಷಾಡ ಕೃಷ್ಣ ಪಂಚಮಿಯಂದು ಪಂಚರೂಪಾತ್ಮಕನಾದ ಶ್ರೀಹರಿಯನ್ನು ಆರಾಧಿಸುತ್ತಾ ಪಂಚಬೃಂದಾವನದಲ್ಲಿ ಮೆರೆಯುವ ಭಾವಿ ವಿರಂಚಿಯೆನಿಪ ವಾದಿರಾಜ ಗುರುವರ್ಯರ ಪರಮಕೃಪೆಯಿಂದ ಆಚಾರ್ಯರ ಪತ್ನಿ ಮುದ್ದಾದ ಗಂಡು ಮಗುವಿಗೆ ಜನ್ಮ ನೀಡಿದಳು.

ತಮ್ಮ ಜನ್ಮವೃತ್ತಾಂತವನ್ನು ಶ್ರೀಜಂಬುಖಂಡಿ ವಾದಿರಾಜಾಚಾರ್ಯರೇ ಆಂಗ್ಲ ಭಾಷೆಯಲ್ಲಿ ಪ್ರಕಟಿಸಿರುವ AN EXPOSITION ಎಂಬುದರಲ್ಲಿ ಹೀಗೆ ವಿವರಿಸುತ್ತಾರೆ.

"My name is Jamkhandi Vadirajacharya. The circumstances of my birth are very pecullar and therefore I am sure they will neither be insipid nor out of place here to be mentioned. My mother was without any issue till she reached a ripe old age, when she was advised to do homage at the shrine of an ascetic named Sri Vadiraja Swami whose relies rest in holy peace at a place called Swadi, which has consequently become a frequent resort for Vaishnavite Pilgrims. My mother by constant and

hearty devotion as well as by faithfully drinking the Mrittika (the holy red mud) in his Vrindavana (a holy tomb) noted for its efficacy in fulfilling the desires of its devotees, was successful in propitiating him and was blessed with the long-hoped-for son in myself".

**ಜಯತೀರ್ಥತಿಥೌ ಜಾತಾನ್ನೈವಾಪ ಜಯಿನೋ ಭುವಿ।**
**ಇತಿ ಸೂಚಯಿತುಂ ತಸ್ಯ ಹ್ಯಭೂತ್ಪೂರ್ಣದಯಾಸ್ಪದಮ್ ॥**

ಎಂದು 'ಶ್ರೀಸುಧಾಕರಗುರುಗುಣರತ್ನಮಾಲಾ'ಕಾರರು ಹೇಳಿರುವಂತೆ ಮಗು ಜನಿಸಿದ ದಿವಸ ಶ್ರೀಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ಬರೆದು ಟೀಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರ ಪುಣ್ಯದಿವಸವಾಗಿತ್ತು. ಜಗತ್ತಿನಲ್ಲಿ ಮಧ್ವತತ್ತ್ವಧ್ವಜವನ್ನು ಮುಗಿಲೆತ್ತರಕ್ಕೆ ಎತ್ತಿಹಿಡಿದ ಮಹಾನುಭಾವರಾದ ಜಯರಾಯರ ಪುಣ್ಯದಿವಸದಂದು ಜನಿಸಿದವರಿಗೆ ಎಂದೆಂದೂ ಅಪಜಯವಿಲ್ಲವೆಂಬ ಸೂಚನೆಯೂ ಇದಾಗಿತ್ತು. ಟೀಕಾರ್ಯರಂತೆ ಅಲ್ಪಾಯುವಾದರೂ ಶತಮಾನಗಳು ಉರುಳಿದರೂ ಮುಸಕಾಗದ ಅದ್ಭುತಸಾಧನೆಗೈಯುವರೆಂಬ ಸಂದೇಶವೂ ಇದರಲ್ಲಿ ಸೂಚ್ಯವಾಗಿ ಅಡಗಿತ್ತು.

ಜಂಬುಖಂಡಿ ಆಚಾರ್ಯರೇ ತಮ್ಮ ಆತ್ಮವೃತ್ತಾಂತದಲ್ಲಿ 'ತಾವು ಶ್ರೇಷ್ಠವಾದ ಶುಭಕೃತ್ ಸಂವತ್ಸರದ ಆಷಾಢ ಕೃಷ್ಣಪಂಚಮಿಯ ಶುಭದಿವಸ ಶ್ರೀಮಟ್ಟೀಕಾಕೃತ್ಪಾದರ ಪುಣ್ಯಾರಾಧನೆಯಂದು ಹಾನಗಲ್ಲು ಎಂಬ ಹೆಸರಿನ ಗ್ರಾಮದಲ್ಲಿ, ರಾತ್ರಿ ವಿಪ್ರಭೋಜನದ ಸಂದರ್ಭದಲ್ಲಿ ಜನಿಸಿದೆ'ವೆಂದು ಹೇಳಿಕೊಂಡಿದ್ದಾರೆ.

ತುಂಬಿದ ಹಾಲುಗೆನ್ನೆಗಳಿಂದ ಹೊಳೆಯುತ್ತಿದ್ದ ಹಾಲುಬಣ್ಣದ ಶಿಶುವಿನ ಶುಭಾಗಮನದಿಂದ ಹಾನಗಲ್ಲಿನಲ್ಲಿ ಹರ್ಷದ ಹಾಲುಮಳೆಯೇ ಸುರಿಯಿತು. ಬಹುಕಾಲದ ನಂತರ ಹರಿಗುರುಗಳ ಕೃಪೆಯಿಂದ ಜನಿಸಿದ ಪುತ್ರರತ್ನವನ್ನು ಕಂಡು ಶ್ರೀನಿವಾಸಾಚಾರ್ಯ ದಂಪತಿಗಳ

ಆನಂದವಂತೂ ಹೇಳತೀರದು. ತಮ್ಮ ಮನೋಬಯಕೆಯನ್ನು ಈಡೇರಿಸಿದ ಸ್ವಾಮಿಯನ್ನು ಅವರು ನಾನಾಪರಿಯಾಗಿ ಕೊಂಡಾಡಿ ತಮ್ಮ ಕೃತಜ್ಞತೆಗಳನ್ನು ಸಲ್ಲಿಸಿದರು. ಸೇವಾಭಾಗ್ಯವನ್ನು ನೀಡಿ ಪೂರ್ಣಾನುಗ್ರಹ ಮಾಡಿದ ಶ್ರೀವಾದಿರಾಜ ಗುರುವರ್ಯರ ಕಾರುಣ್ಯ ಅನವರತವೂ ತಮ್ಮ ಕಂದನ ಮೇಲಿರಲೆಂದು ಹಾರೈಸಿ ಗುರುಗಳ ಪ್ರೇರಣೆಯಂತೆ ಮಗುವಿಗೆ 'ವಾದಿರಾಜ' ಎಂದೇ ನಾಮಕರಣ ಮಾಡಿದರು[1]. ತಮ್ಮ ಮಾತಾಪಿತೃಗಳ ಸೇವೆಯಿಂದ ಪರಮಸಂತುಷ್ಟರಾದ ವಾದಿರಾಜ ಗುರುವರ್ಯರು ತಮ್ಮ ಹೆಸರನ್ನೇ ಶಿಶುವಿಗೆ ಕರುಣಿಸಿದರು ಎಂದು ಆಚಾರ್ಯರು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ[2].

ಗುರುವಾದಿರಾಜರ ಕರುಣೆಯ ಕೂಸಾದ 'ವಾದಿರಾಜ' ದಿನದಿಂದ ದಿನಕ್ಕೆ ವಾರದಿಂದ ವಾರಕ್ಕೆ ಹುಣ್ಣಿಮೆಯ ಚಂದಿರನಂತೆ ಮೈತುಂಬಿ ಬೆಳೆಯತೊಡಗಿದ. ಅರಳುಮಲ್ಲಿಗೆಯನ್ನು ಚೆಲ್ಲಿದಂತೆ ಮುಗುಳ್ನಗುತ್ತಾ ಅಂಬೆಗಾಲಿಕ್ಕಿ ಮನೆಯೆಲ್ಲಾ ಓಡಾಡುತ್ತಿದ್ದ ಅವನ ಬಾಲಲೀಲೆಗಳು ಮನಮೋಹಕವಾಗಿದ್ದವು.

ಅಲೌಕಿಕ ಕಾಂತಿಯಿಂದ ಬೆಳಗುತ್ತಿದ್ದ ವಾದಿರಾಜನಿಗೆ ಅನ್ನಪ್ರಾಶಾನ, ಅಕ್ಷರಾಭ್ಯಾಸ ಮುಂತಾದ ಸಂಸ್ಕಾರಗಳು ಕಾಲಕಾಲಕ್ಕೆ ಸರಿಯಾಗಿ ನಡೆದವು. 'ಬೆಳೆಯುವ ಪೈರು ಮೊಳಕೆಯಲ್ಲಿ' ಎಂಬಂತೆ ಬಾಲ್ಯದಲ್ಲಿಯೇ ಅವನಲ್ಲಿ ಒಡಮೂಡಿದ ದೈವಶ್ರದ್ಧೆ, ಏಕಾಗ್ರತೆ ವಯಸ್ಸಿಗೆ ಮೀರಿದ ಗಾಂಭೀರ್ಯ ಮುಂತಾದವುಗಳನ್ನು ಕಂಡು ತಮ್ಮ ಸುಪುತ್ರ ಮುಂದೆ ಅಸಾಮಾನ್ಯ ವ್ಯಕ್ತಿಯಾಗಿ ರೂಪುಗೊಳ್ಳುವನೆಂದು ಶ್ರೀನಿವಾಸಾಚಾರ್ಯರು ಸಂಭ್ರಮಪಟ್ಟರು.

---

1. ಶ್ರೀವಾದಿರಾಟ್ ಪ್ರಸಾದಾತ್ ಪ್ರಾದುರ್ಭೂತ ಇತಿ ತತ್ಪಿತಾ ।
ವಾದಿರಾಜೇತಿ ತನ್ನಾಮಾಕರೋದಾನಂದನಿರ್ಭರಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ

2. ಮಾತಾಪಿತೃಭ್ಯಾಂ ಸಂಪ್ರೀತಃ ಸ್ವನಾಮೇತಂ ದದೌ ಶಿಶುಮ್ ।
– ಜಂಬುಖಂಡಿ ಆಚಾರ್ಯರ ಆತ್ಮಕಥನ

ವೀಕ್ಷ್ಯಾಸ್ಯ ಧಿಷಣಾಂ ಸೂಕ್ಷ್ಮಾಂ ವಿದ್ಯಾಕಾಮಸ್ತು ಪಂಚಮೇ।
ಇತ್ಯಸ್ಯೋಪನಯಂ ಚಕ್ರೇ ಬಾಲ್ಯೇ ಏವ ಮುದಾ ಪಿತಾ॥
ಶ್ರೀಕೃಷ್ಣಸನ್ನಿಧೌ ಕ್ಷೇತ್ರೇ ರೂಪ್ಯಪೀಠೇ ಯತೀಶ್ವರಾಃ।
ಸಾವಿತ್ರೀಂ ಗ್ರಾಹಯಾಮಾಸುರೇನಂ ಕೃಷ್ಣಾಪುರೋಪಗಾಃ॥

ಎಂಬುವ ಷಟ್ಪುರಾಚಾರ್ಯರ ಉಲ್ಲೇಖದಂತೆ ಶ್ರೀಜಂಬುಖಂಡಿ ಶ್ರೀನಿವಾಸಾಚಾರ್ಯರು ತಮ್ಮ ಪುತ್ರಪ್ರಾಪ್ತಿಯ ಭಾಗ್ಯೋದಯಕ್ಕೆ ಮೂಲ ಕಾರಣನಾದ ರೌಪ್ಯಪೀಠಾಧಿಪ ಶ್ರೀಕೃಷ್ಣನ ಸನ್ನಿಧಾನದಲ್ಲಿ ವಾದಿರಾಜನ ಉಪನಯನವನ್ನು ಕ್ರಿ.ಶ. 1847ರಲ್ಲಿ ವಿಜೃಂಭಣೆಯಿಂದ ನೆರವೇರಿಸಿದರು. ಉಡುಪಿಯ ಅಷ್ಟಮಠಗಳಲ್ಲೊಂದಾದ ಶ್ರೀಕೃಷ್ಣಾಪುರಮಠದ ಪೀಠಾಧಿಪತಿಗಳಾದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರ ಉಪಸ್ಥಿತಿಯಲ್ಲಿಯೇ ಬಾಲಕನಿಗೆ ಗಾಯತ್ರಿ ಮಂತ್ರೋಪದೇಶವಾಯಿತು. 'ತಸ್ಮಾಚ್ಛ್ರೀಕಮನೀಯ ಕೃಷ್ಣವರಷಡ್ವರ್ಣಾತ್ಮಮಂತ್ರೋಹೃತಃ' ಎಂದು ಆಚಾರ್ಯರೇ ತಮ್ಮ ಆತ್ಮಕಥನದಲ್ಲಿ ಹೇಳಿಕೊಂಡಿರುವಂತೆ ಕೃಷ್ಣಾಪುರ ಮಠಾಧೀಶರೇ ಬಾಲಕನಿಗೆ 'ಓಂ ಕ್ಲೀಂ ಕೃಷ್ಣಾಯ ನಮಃ ಓಂ' ಎಂಬ ಷಡಕ್ಷರ ಮಂತ್ರೋಪದೇಶವನ್ನು ಅನುಗ್ರಹಪೂರ್ವಕವಾಗಿ ಉಪದೇಶಿಸಿದರು.

ಜನ್ಮತಃ ಚೆಲುವನಾಗಿದ್ದ ವಾದಿರಾಜ ಉಪನಯನದ ನಂತರ ಅಪೂರ್ವ ಬ್ರಹ್ಮತೇಜಸ್ಸಿನಿಂದ ಕಂಗೊಳಿಸತೊಡಗಿದ. ಪ್ರತಿನಿತ್ಯವೂ ತಂದೆಯವರ ಮಾರ್ಗದರ್ಶನದಲ್ಲಿ ಸಂಧ್ಯೋಪಾಸನೆ ಮತ್ತು ಅಗ್ನಿಕಾರ್ಯಗಳನ್ನು ಶ್ರದ್ಧೆಯಿಂದ ನೆರವೇರಿಸುತ್ತಿದ್ದ. ತಂದೆಯವರು ಹೇಳಿಕೊಡುತ್ತಿದ್ದ ವೇದಮಂತ್ರಗಳನ್ನೂ, ಸುಮಧ್ವವಿಜಯಾದಿ ಮಹಾ ಕಾವ್ಯಗಳನ್ನೂ, ಹರಿಗುರುಪರವಾದ ಸ್ತೋತ್ರಗಳನ್ನೂ ಕಂಠಪಾಠ ಮಾಡಿದ್ದನಲ್ಲದೆ ಕೇಳುವವರ ಮನವರಳುವಂತೆ ಸುಶ್ರಾವ್ಯವಾಗಿ ಅವುಗಳನ್ನು ಪಠಿಸುತ್ತಿದ್ದ. ಕೃಷ್ಣಾಪುರಾಧೀಶರು ಪರಮಾದರದಿಂದ ಉಪದೇಶಿಸಿದ ಕೃಷ್ಣಮಂತ್ರವನ್ನು ತಾಸುಗಟ್ಟಲೆ ಜಪಿಸುತ್ತಾ ಮೈಮರೆಯುತ್ತಿದ್ದ. ಮಗನ ವಿದ್ಯಾಕಾಂಕ್ಷೆ, ಗಂಭೀರಪ್ರವೃತ್ತಿ, ಅಪೂರ್ವಸ್ಮರಣಶಕ್ತಿ ಮತ್ತು

ಚುರುಕುತನವನ್ನು ಕಂಡು ಶ್ರೀನಿವಾಸಾಚಾರ್ಯರಿಗೆ ತುಂಬಾ ಸಂತೋಷವಾಯಿತು. ಸ್ವತಃ ಶಾಸ್ತ್ರವೇತ್ತರಾದ ಅವರು ನಿತ್ಯವೂ ಸಂಭ್ರಮದಿಂದ ಮನೆಯಲ್ಲಿಯೇ ಮಗನಿಗೆ ಪಾಠ ಹೇಳುತ್ತಿದ್ದರೂ 'ತಂದೆ' ಎಂಬ ಸಲುಗೆ ಆತನನ್ನು ಉತ್ತಮ ಪಂಡಿತನನ್ನಾಗಿ ರೂಪಿಸುವ ಹಾದಿಯಲ್ಲಿ ತಡೆಯೊಡ್ಡಬಹುದೆಂದು ವಿಚಾರಮಾಡಿ ಆಗ ಚಿತ್ತಾಪುರದಲ್ಲಿ ವಾಸಿಸುತ್ತಿದ್ದ ಪ್ರಖ್ಯಾತ ಪಂಡಿತರಾದ ಶ್ರೀವಾಯಿ ಶ್ರೀನಿವಾಸಾಚಾರ್ಯರ ಬಳಿ ಮುಂದಿನ ವಿದ್ಯಾಭ್ಯಾಸಕ್ಕೆ ಏರ್ಪಾಟು ಮಾಡಿದರು.

**ಶ್ರೀರಾಮೇಶ್ವರದರ್ಶನಂ ಸ್ವಜನಕಾತ್ ಪ್ರಾಪ್ತೋಽಷ್ಟವರ್ಷಸ್ತತೋ**
**ಗಾರ್ಹಸ್ತಂ ಸ್ವಪಿತುರ್ಗತೋ ಗುರುವರಂ ಸಂದ್ರಷ್ಟುಮಾರಾದ್ಗತಃ ॥**

ಎಂದು ಆಚಾರ್ಯರೇ ಹೇಳಿಕೊಂಡಿರುವಂತೆ ವಾದಿರಾಜನ ಎಂಟನೇ ವಯಸ್ಸಿಗೇ ಅವನಿಗೆ ತಂದೆಯವರೊಂದಿಗೆ ರಾಮೇಶ್ವರ ಮುಂತಾದ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವ ಅವಕಾಶ ಲಭ್ಯವಾಯಿತಲ್ಲದೆ ಅಲ್ಲಿಂದ ಬಂದನಂತರ ಆ ಕಾಲದ ಪದ್ಧತಿಯಂತೆ ಚಿಕ್ಕವಯಸ್ಸಿನಲ್ಲಿಯೇ ಅವನಿಗೆ 'ಕಮಲಾಬಾಯಿ' ಎಂಬ ಕನ್ಯಾಮಣಿಯೊಂದಿಗೆ ವಿವಾಹ ವಾಯಿತು. ವಿವಾಹಾನಂತರ ವಾದಿರಾಜ ಸುಮಾರು ಎಂಟು ವರ್ಷಗಳ ಕಾಲ ತಂದೆಯವರು ಹೇಳಿಕೊಡುತ್ತಿದ್ದ ಶಾಸ್ತ್ರಪಾಠಗಳನ್ನು ಮನನ ಮಾಡುತ್ತಾ ಶಿರಗುಪ್ಪದಲ್ಲಿ ವಾಸ ಮಾಡಿದ[1].

## ಶಾಸ್ತ್ರಾಧ್ಯಯನ

ತಂದೆಯವರ ಆದೇಶದಂತೆ ವಿದ್ಯಾಕಾಂಕ್ಷಿಯಾದ ವಾದಿರಾಜ ವಿದ್ವನ್ಮಣಿಗಳಾದ ಶ್ರೀವಾಯಿ ಶ್ರೀನಿವಾಸಾಚಾರ್ಯರ ಬಳಿ ಶಾಸ್ತ್ರವ್ಯಾಸಂಗವನ್ನು ಕೈಗೊಳ್ಳಲು ಚಿತ್ತಾಪುರಕ್ಕೆ ಪ್ರಯಾಣ ಬೆಳೆಸಿದ.

---

1. **ಅಥ ಪ್ರಮಸ್ತಕೇ ಗ್ರಾಮೇ ವಾದಿರಾಜಸಮೀಪಗೇ ।**
**ವತ್ಸರಾಷ್ಟಕಮೇವಾದ್ಧಾ ಹ್ಯುಷಿತೋಽಹಂ ಸುನಿರ್ಣಯಮ್ ॥**
– ಆಚಾರ್ಯರ ಆತ್ಮಕಥನ

ವಿದ್ವತ್ತಿಗೆ ಖ್ಯಾತವಾದ 'ವಾಯಿ' ಮನೆತನದ ಶ್ರೀನಿವಾಸಾಚಾರ್ಯರು ಚತುಃಶಾಸ್ತ್ರಗಳಲ್ಲಿ ಪಾರಂಗತರಾಗಿ ಆಗಿನ ಪಂಡಿತಮಂಡಳಿಯಲ್ಲಿ ಅಗ್ರಸ್ಥಾನವನ್ನು ಸಂಪಾದಿಸಿದ್ದರು. ಮೂಲತಃ ಮಹಾರಾಷ್ಟ್ರದ ಸತಾರಾ ಜಿಲ್ಲೆಗೆ ಸೇರಿದ 'ವಾಯಿ' ಎಂಬ ಸ್ಥಳದವರಾದ ಈ ಮನೆತನದ ಪೂರ್ವಜರು ಕ್ರಮೇಣ ಕರ್ನಾಟಕ ರಾಜ್ಯಕ್ಕೆ ವಲಸೆ ಬಂದು ಗದಗ ಹಾಗೂ ಮರಡೂರಿನಲ್ಲಿ ನೆಲೆಸಿದರು. ಇವರ ತಂದೆಯವರಾದ ಶ್ರೀಬಾಳಾ ಚಾರ್ಯರೂ ಸಹ ಅನೇಕ ಪ್ರತಿಷ್ಠಿತ ಶಿಷ್ಯರನ್ನು ರೂಪಿಸಿದ್ದ ಅಪ್ರತಿಮ ಪಂಡಿತರು. ಅವರ ಗರಡಿಯಲ್ಲಿಯೇ ತಯಾರಾದ ಶ್ರೀನಿವಾಸಾ ಚಾರ್ಯರು ತಂದೆಯವರ ಹಾದಿಯಲ್ಲಿ ನಡೆದು ದಿನನಿತ್ಯ ಸಚ್ಛಾಸ್ತ್ರಪಾಠಪ್ರವಚನ ಮಾಡುತ್ತಾ ಅಪಾರ ಜನಮನ್ನಣೆಯನ್ನು ಗಳಿಸಿಕೊಂಡಿದ್ದರು. ಶ್ರೀಮದ್ವಾದಿರಾಜ ಗುರುಸಾರ್ವಭೌಮರ ಋಜುತ್ವ ಮಹಿಮಾ ವಿಷಯದಲ್ಲಿ ವಾಯಿಮನೆತನದ ಪೂರ್ವಜರಿಗಿದ್ದಂತೆ ಆಚಾರ್ಯರಿಗೂ ಸಹ ಅಪ್ರತಿಮ ಶ್ರದ್ಧೆಯಿತ್ತೆಂದು ಶ್ರೀಗುರುಗೋವಿಂದ ದಾಸರು ತಾವು ರಚಿಸಿರುವ 'ಹರಿಭಕ್ತವಿಜಯ'ದಲ್ಲಿ ಹೀಗೆ ಅಭಿಪ್ರಾಯ ಪಡುತ್ತಾರೆ :

'ವಾಯಿ ಮನೆತನದವರು ಮೊದಲಿನಿಂದಲೂ ಶ್ರೀವಾದಿರಾಜರ ಪರಮ ಭಕ್ತರಾಗಿಯೇ ಇರುತ್ತಾರೆ. ಮನೆಯಲ್ಲಿ ಮೃತ್ತಿಕಾವೃಂದಾವನಪೂಜಾ, ಹಣೆಗೆ ಮೃತ್ತಿಕಾ ಲೇಪನ, ರಾಜರ ಋಜುತ್ವದಲ್ಲಿ ನಂಬಿಕೆ, ಇದೆಲ್ಲಾ ತಿಳಿದ ವಿಷಯವೇ ಆಗಿರುತ್ತದೆ. ಪ್ರಕೃತ ಶ್ರೀನಿವಾಸಾಚಾರ್ಯರು (ಶ್ರೀಸತ್ಯಪರಾಕ್ರಮ ತೀರ್ಥರು) ವಾಯಿ ಮನೆತನದವರೇ ಆಗಿರುವುದರಿಂದ ಸಂಸ್ಥಾನಪೀಠಕ್ಕೆ ಬಂದಾಗ್ಯೂ ಗುರುರಾಜರಲ್ಲಿ ಭಕ್ತಿಯು ಕಡಿಮೆಯಾಗಲಿಲ್ಲ. ಶ್ರೀಸತ್ಯಧರ್ಮ ತೀರ್ಥರಂತೆ[1] ಶ್ರೀಸತ್ಯಪರಾಕ್ರಮತೀರ್ಥರೂ ಸಹ ವಾದಿರಾಜರ ಋಜುತ್ವ

---

1. Sathyadharma tirtha was a devotee of Vadiraja Swami; and believed in his "Rjutva". He was a contemporary of Vishwapriyatirtha of Sode Mutt.

**- Dr. B.N.K. Sharma.**
History of Dvaita School of Vedanta.

ದಲ್ಲಿ ನಿಷ್ಠೆ ಹೊಂದಿದ್ದರು[1]. ಅದಕ್ಕಾಗಿಯೇ ಜಂಬುಖಂಡಿ ಆಚಾರ್ಯರ ಪಿತೃಗಳಾದ ಶ್ರೀನಿವಾಸಾಚಾರ್ಯರು ಉತ್ತರಾದಿಮಠದ ಶಿಷ್ಯರಾದಾಗ್ಯೂ, ಸೋದೆ ಮಠದ ವೃಂದಾವನಾಚಾರ್ಯರಲ್ಲಿ ಶಿಷ್ಯತ್ವಕ್ಕೆ ವಿರೋಧಿಸಲಿಲ್ಲ. ಅಂದರೆ ಹಣೆಯಲ್ಲಿ ಮೃತ್ತಿಕಾ ಲೇಪಿಸಿದ್ದರೂ ಆಕ್ಷೇಪಿಸುತ್ತಿದ್ದಿಲ್ಲ. ಅಂತೆಯೇ ಶ್ರೀನಿವಾಸಾಚಾರ್ಯರ ಪುತ್ರರಾದ ವಾದಿರಾಜಾಚಾರ್ಯರೂ ಸಹ ಶ್ರೀಸತ್ಯಪರಾಕ್ರಮರಲ್ಲಿ ಓದುತ್ತಿರುವಾಗ ತಪ್ಪದೇ ನಿತ್ಯದಲ್ಲಿಯೂ ಫಾಲದಲ್ಲಿ ರಾಜರ ಮೃತ್ತಿಕಾ ಹಚ್ಚಿಯೇ ಹೋಗುತ್ತಿದ್ದರು. ಅಲ್ಲದೆ ರಾಜರು ಋಜುಗಳೆಂಬ ವಿಚಾರದಲ್ಲಿ ದೀಕ್ಷಾಬದ್ಧರಾಗಿಯೂ, ಸಭೆಗಳಲ್ಲಿ ಸನ್ನಿವೇಶ ಸಿಕ್ಕಾಗ ಆ ವಿಚಾರವನ್ನು ಉದ್ಘೋಷಿಸುತ್ತಿದ್ದರು".

ಡಾ. ಗುರುರಾಜ. ಕೃ. ನಿಪ್ಪಾಣಿಯವರು ತಾವು ಸಂಪಾದಿಸಿರುವ 'ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ' ಯಲ್ಲಿ ಈ ಕುರಿತು ಹೀಗೆ ಅಭಿಪ್ರಾಯಪಡುತ್ತಾರೆ.

'ಈ ಮನೆತನದಲ್ಲಿ ಅನೇಕರು ಉದ್ದಾಮಪಂಡಿತರಾಗಿ ಹೋಗಿದ್ದಾರೆ. ಅಲ್ಲದೇ ಇವರು ಗುರುರಾಜರ ಋಜುತ್ವಮಹಿಮಾ ವಿಷಯದಲ್ಲಿ ಶ್ರದ್ಧೆಯುಳ್ಳವರು. ಈಗಲೂ ಈ ವಂಶೀಕರು (ವಾಯಿಕರ್) ಋಜುತ್ವ ವಿಶ್ವಾಸವುಳ್ಳವರು'. ಶ್ರೀವಾಯಿ ಶ್ರೀನಿವಾಸಾಚಾರ್ಯರು ಶ್ರೀವಾದಿರಾಜ ಗುರುಸಾರ್ವಭೌಮರನ್ನು ಕುರಿತು ಭಕ್ತಿಪ್ರದವಾದ ಸ್ತೋತ್ರವನ್ನು ರಚಿಸಿರುವುದಾಗಿ ತಿಳಿದುಬರುತ್ತದೆ.

---

1. "It is however interesting to note that some of early Heads of Uttaradi Matha like Satyadharma Tirtha (1797-1830) and Satyaparakrama Tirtha (1872-79) were solidly on the side of the Rjutva of Vadiraja. Somehow, the pendulum swung to the other side and two veteran Heads of the Uttaradi Matha who came after, among whose adherents in Uttara Karnataka the acceptance of Vadiraja' Rjutva was very widespread decided to contain its growing strength by calling it a schism'

**- Dr. B.N.K. Sharma**

('ಶ್ರೀಜಂಬುಖಂಡಿವಾದಿರಾಜಾಚಾರ್ಯರ ಮಹಾತ್ಮ್ಯೆ' ಯ ಮುನ್ನುಡಿಯಲ್ಲಿ)

ಶ್ರೀಮದುತ್ತರಾದಿ ಮಠದ ಶ್ರೀಪಾದಂಗಳವರು ವಾಯಿ ಮನೆತನದ ಪೂರ್ವಜರಿಗೆ ಅನುಗ್ರಹಿಸಿದ್ದ ಪಲ್ಲಕ್ಕಿ ಮರ್ಯಾದೆಯೊಂದಿಗೆ ಶ್ರೀನಿವಾಸಾಚಾರ್ಯರು ಅನೇಕ ಸ್ಥಳಗಳಿಗೆ ಹೋಗಿ ಸಂಚಾರ ಕೈಗೊಂಡು ಹೋದ ಕಡೆಗಳಲ್ಲೆಲ್ಲಾ ದ್ವೈತಸಿದ್ಧಾಂತವನ್ನು ಸ್ಥಾಪಿಸಿ ವಾದಿನಿಗ್ರಹ ಮಾಡಿದರು. ಗದ್ವಾಲ ಸಂಸ್ಥಾನದಲ್ಲಿ ನಡೆದ ವಿದ್ವತ್ಸಭೆಯಲ್ಲಿ ಜಯಭೇರಿ ಬಾರಿಸಿದ ಆಚಾರ್ಯರಿಗೆ ರಾಜಮನ್ನಣೆಯೂ ಪ್ರಾಪ್ತವಾಯಿತು. ಹೈದರಾಬಾದಿನ ನಿಜಾಮನೂ ಸಹ ಇವರ ವಾದವೈಖರಿಯಿಂದ ಪ್ರಭಾವಿತನಾಗಿ ಚಿತ್ತಾಪುರ, ಮಲ್ಲಾಪುರ ಮತ್ತು ಚಿಗಾನೂರು ಎಂಬ ಮೂರು ಗ್ರಾಮಗಳನ್ನು ಆಚಾರ್ಯರಿಗೆ ಜಹಗೀರಾಗಿ ದಯಪಾಲಿಸಿದ್ದನು. ಕೃಷ್ಣಾತೀರದ ಪ್ರಶಾಂತ ಪರಿಸರದಲ್ಲಿರುವ ಚಿತ್ತಾಪುರದಲ್ಲಿಯೇ ಆಚಾರ್ಯರು ನೆಲೆಸಿ ಅಲ್ಲಿ ಪರ್ಣ ಕುಟೀರವನ್ನು ನಿರ್ಮಿಸಿಕೊಂಡು ಶಾಸ್ತ್ರಾಸಕ್ತರ ಚಿತ್ತವನ್ನು ಅರಳಿಸುವ ಪಾಠ ಪ್ರವಚನದಲ್ಲಿ ನಿರತರಾಗಿದ್ದರು[1].

ಚಿತ್ತಾಪುರಕ್ಕೆ ಬಂದ ಕೆಲವು ದಿವಸಗಳಲ್ಲಿಯೇ ಬಾಲಕ ವಾದಿರಾಜ ಚಿತ್ತಾಪುರದ ಚಿತ್ರಭೆಯಾದ ಶ್ರೀನಿವಾಸಾಚಾರ್ಯರ ಚಿತ್ತವನ್ನಾಕರ್ಷಿಸಿದ. ಎಷ್ಟು ಕಲಿತರೂ ಮತ್ತಷ್ಟು ಕಲಿಯಬೇಕೆಂಬ ಕಾತುರತೆ, ಅಪೂರ್ವವಾದ ಏಕಾಗ್ರತೆ, ಅಪರಿಮಿತ ಸಹನೆ, ಅಸಾಧಾರಣ ಧಾರಣಸಾಮರ್ಥ್ಯ, ಪ್ರಖರ ಮೇಧಾಶಕ್ತಿ, ಎಂತಹವರ ಮನಸ್ಸನ್ನೂ ಪ್ರಫುಲ್ಲಗೊಳಿಸುವ ವಿನಯಾದಿ ಸದ್ಗುಣಗಳನ್ನು ವಾದಿರಾಜನಲ್ಲಿ ಗುರುತಿಸಿದ ಆಚಾರ್ಯರು ತುಂಬು ವಾತ್ಸಲ್ಯದಿಂದ ಅವನಿಗೆ ತಾವು ಕಲಿತ ವಿದ್ಯೆಯನ್ನು ಧಾರೆಯೆರೆದರು. ವಾದಿರಾಜನೂ ಸಹ ಸುಮಾರು ಹತ್ತು-ಹನ್ನೆರಡು ವರ್ಷಗಳ ಕಾಲ ಅತೀವ ಗುರುಭಕ್ತಿಯಿಂದ ಗುರುಸೇವಾರತನಾಗಿ ಶ್ರದ್ಧಾದರಗಳಿಂದ

---

1. ಜ್ಞಾನವೈರಾಗ್ಯಾದಿ ಸದ್ಗುಣಗಳಿಂದ ಭೂಷಿತರಾಗಿ ಭಗವದೊಲುಮೆಗೆ ಪಾತ್ರರಾಗಿದ್ದ ಶ್ರೀವಾಯಿ ಶ್ರೀನಿವಾಸಾಚಾರ್ಯರು ಮುಂದೆ ಶ್ರೀಸತ್ಯೇಷ್ಟ ತೀರ್ಥ ಶ್ರೀಪಾದಂಗಳವರಿಂದ ತುರ್ಯಾಶ್ರಮವನ್ನು ಸ್ವೀಕರಿಸಿ "ಶ್ರೀಸತ್ಯಪರಾಕ್ರಮತೀರ್ಥ" ಎಂಬ ಅಭಿಧಾನದಿಂದ ಶ್ರೀಮದುತ್ತರಾದಿ ಮಠದ ಪೀಠದಲ್ಲಿ ವಿರಾಜಮಾನರಾದರು.

ವಾಯಿ ಆಚಾರ್ಯರ ಬಳಿ ವಿದ್ಯಾರ್ಜನೆ ಮಾಡಿದ. ತರ್ಕ, ವ್ಯಾಕರಣ, ಮೀಮಾಂಸಾ, ನ್ಯಾಯಶಾಸ್ತ್ರ, ವೇದಾಂತಾದಿ ಗ್ರಂಥಗಳನ್ನು ಗುರುಗಳ ಸಮರ್ಥ ಮಾರ್ಗದರ್ಶನದಲ್ಲಿ ಅಭ್ಯಸಿಸಿ, ಅಪೂರ್ವ ಪರಿಣತಿಯನ್ನು ಸಂಪಾದಿಸಿದ. ತನ್ನ ಸಹಪಾಠಿಗಳಲ್ಲಿಯೇ ಅಗ್ರಮಾನ್ಯನಾಗಿ ಅತ್ಯಂತ ತೀಕ್ಷ್ಣಮತಿಯೆಂಬ ಹೆಗ್ಗಳಿಕೆಯನ್ನು ಗುರುಗಳಿಂದಲೇ ಪಡೆದುಕೊಂಡ ವಾದಿರಾಜನ ಜೊತೆಗೆ ಮುಂದೆ 'ಶ್ರೀಸತ್ಯವೀರತೀರ್ಥ'ರೆಂಬ ಆಶ್ರಮ ನಾಮದಿಂದ ಶ್ರೀಮದುತ್ತರಾದಿಮಠದ ಪೀಠವೇರಿದ ಶ್ರೀಕೊರ್ಲಹಳ್ಳಿ ಸತ್ಯಬೋಧಾಚಾರ್ಯರೇ ಮೊದಲಾದವರು ಶಾಸ್ತ್ರಾಧ್ಯಯನ ನಿರತ ರಾಗಿದ್ದರು. ಗುರುಗಳ ಅಮಲಪ್ರೀತಿಗೆ ಪಾತ್ರನಾಗಿದ್ದ ವಾದಿರಾಜನಿಗೆ ಗುರುಗಳೊಂದಿಗೆ ಅನೇಕ ವಿದ್ವತ್ಸಭೆಗಳಲ್ಲಿ ಭಾಗವಹಿಸುವ ಅಪೂರ್ವ ಅವಕಾಶಗಳೂ ಲಭ್ಯವಾಗುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ಗುರುಗಳ ಅಪ್ಪಣೆಯಂತೆ ವಾದಿರಾಜನೂ ಸಹ ಹೆಸರಿಗೆ ತಕ್ಕಂತೆ ವಾದವೈಭವವನ್ನು ತೋರಿ ಪ್ರತಿವಾದಿಗಳನ್ನು ನಿರುತ್ತರರನ್ನಾಗಿ ಮಾಡುತ್ತಿದ್ದ ಪರಿ ಎಂತಹವರನ್ನೂ ವಿಸ್ಮಯಗೊಳಿಸುತ್ತಿತ್ತು.

ಗುಣಗ್ರಾಹಿಗಳಾದ ಗುರುಗಳ ಅನುಗ್ರಹ ವಿಶೇಷದಿಂದ ಸಾಕಷ್ಟು ವಿದ್ಯಾ ಪರಿಣತಿಯನ್ನು ಪಡೆದ ವಾದಿರಾಜ ಕೌಮಾರಾವಸ್ಥೆಗೆ ಕಾಲಿಟ್ಟ. ಈ ಸಂದರ್ಭದಲ್ಲಿಯೇ ಅವನ ತಾಯಿಯವರಾದ ಸೀತಾಬಾಯಿಯವರು ತೀರಿಕೊಂಡರು[1].

ಮಗನ ಅಭ್ಯುದಯವನ್ನು ಕಾಣುವ ಸೌಭಾಗ್ಯ ಆ ಸಾಧ್ವಿಗಿರಲಿಲ್ಲ ವೆಂದೇ ತೋರುತ್ತದೆ. ಪತ್ನಿಯ ಅಗಲಿಕೆಯಿಂದ ಅಧೀರರಾದರೂ ಶ್ರೀನಿವಾಸಾಚಾರ್ಯರು ಆಕೆಯ ಅಂತ್ಯ ಕರ್ಮಗಳೆಲ್ಲವೂ ಪೂರ್ಣವಾದ ನಂತರ ಮಗನ ಭವಿಷ್ಯದ ಕಡೆಗೆ ಗಮನ ಹರಿಸಿ ಕ್ರಮೇಣ

---

1. ಪಿತ್ರಾ ಶೃಣ್ವಂಸ್ತತೋ ಯಾತಃ ಪಿತ್ರಾ ಶ್ರೀಸುಗುರೋಃ ಕುಲಮ್ ।
ತತ್ರ ವರ್ಷತ್ರಯೇಽತೀತೇ ಮಾತಾಸ್ವರ್ಗಂ ಗತಾ ಸತೀ ॥
– ಆಚಾರ್ಯರ ಆತ್ಮಕಥನ

ಮನೋದಾರ್ಢ್ಯವನ್ನು ತಂದುಕೊಂಡರು. ವಾಯಿ ಆಚಾರ್ಯರ ಒಪ್ಪಿಗೆಯನ್ನು ಪಡೆದು ಅವರು ಮಗನನ್ನು ಉಡುಪಿ ಕ್ಷೇತ್ರಕ್ಕೆ ಕರೆದುಕೊಂಡು ಹೋದರು. ಉಡುಪಿ ಕೃಷ್ಣನ ಅಂತರಂಗ ಭಕ್ತರಾದ ಶ್ರೀನಿವಾಸಾಚಾರ್ಯರಿಗೆ ತಮ್ಮ ಮಗ ಉಡುಪಿ ಕೃಷ್ಣನ ಸನ್ನಿಧಾನ ದಲ್ಲಿಯೇ ಇದ್ದು ಅಲ್ಲಿ ವಿದ್ವನ್ಮಣಿಗಳಾಗಿ ವಿರಾಜಿಸುತ್ತಿದ್ದ ಶ್ರೀಕೃಷ್ಣಾಪುರ ಮಠದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರ ಬಳಿ ಸುಧಾದಿ ಪ್ರೌಢ ಗ್ರಂಥಗಳನ್ನು ಅಧ್ಯಯನ ಮಾಡಿ ಅದ್ವಿತೀಯ ಪಂಡಿತನೆಂಬ ಸತ್ಕೀರ್ತಿ ಪಡೆಯಬೇಕೆಂಬ ಅಪೇಕ್ಷೆ ಬಲವತ್ತರವಾಗಿತ್ತು. ಅದಕ್ಕಾಗಿ ಶ್ರೀನಿವಾಸಾಚಾರ್ಯರು :

**ಸುತಸ್ಯ ವಿದ್ಯಾಪೂರ್ತ್ಯರ್ಥಂ ಜಟಾಭರಣಪೂರ್ವಕಮ್ ।**
**ವಿಶೇಷತೋ ಹರಿಂ ಭೇಜೇ ಶ್ರೀನಿವಾಸಾರ್ಯ ಸದ್ವಿಜಃ ॥**

ಎಂದು ಶ್ರೀಷಟ್ಪುರಾಚಾರ್ಯರು ಹೇಳಿರುವಂತೆ ತಾವು ಜಟಾಧಾರಣ ಮಾಡಿ ಜಿತಮನಸ್ಕರಾಗಿ ಭಕ್ತವತ್ಸಲನಾದ ಶ್ರೀಕೃಷ್ಣನನ್ನು ವಿಶೇಷವಾಗಿ ಸೇವಿಸಿದರು. ಹೆಜ್ಜೆ ಹೆಜ್ಜೆಗೂ ಶ್ರೀಕೃಷ್ಣನಲ್ಲಿ ಅಪರಿಮಿತವಾದ ವಿಶ್ವಾಸವಿಟ್ಟು ತಮ್ಮ ಮನೋಭಿಲಾಶೆಯನ್ನು ಅವನ ಮುಂದೆ ಅಂತರಂಗದಲ್ಲಿಯೇ ನಿವೇದಿಸಿಕೊಳ್ಳುತ್ತಿದ್ದ ಆಚಾರ್ಯರಿಗೆ 'ಮಧ್ವವಲ್ಲಭನಾದ ರೌಪ್ಯಪೀಠ ಪ್ರಭು ಕ್ಷಿಪ್ರಫಲದಾಯಕ' ನೆಂಬುವ ಸಂಗತಿ ಮತ್ತೊಮ್ಮೆ ದೃಢವಾಯಿತು. ಮರುದಿವಸವೇ ಆಚಾರ್ಯರು ತಮ್ಮ ಮಗನೊಂದಿಗೆ ಕೃಷ್ಣಾಪುರಮಠಕ್ಕೆ ಹೋಗಿದ್ದಾಗ ವಾದಿರಾಜನ ವಿದ್ಯಾಪ್ರೌಢಿಮೆ ಮತ್ತು ವಾಗ್ವೈಖರಿಯನ್ನು ನೋಡಿದ ಶ್ರೀವಿದ್ಯಾಧೀಶತೀರ್ಥ ಶ್ರೀಗಳವರು ತುಂಬಾ ಸಂತೋಷ ಪಟ್ಟರು. ಕೆಲವೇ ವರ್ಷಗಳ ಹಿಂದೆ ತಮ್ಮ ಸಮ್ಮುಖದಲ್ಲಿಯೇ ಗಾಯತ್ರಿ ಮಂತ್ರೋಪದೇಶವನ್ನು ಪಡೆದು ಉಪನೀತನಾದ ಪುಟ್ಟ ಬಾಲಕ ಇಷ್ಟು ಶೀಘ್ರವಾಗಿ ವಿದ್ಯಾವಿನಯಸಂಪನ್ನನಾಗಿ ಪ್ರವರ್ಧಮಾನಕ್ಕೆ ಬಂದಿರುವುದನ್ನು ಕಂಡು ಶ್ರೀಗಳವರಿಗೆ ವಿಸ್ಮಯ ಉಂಟಾಯಿತು.

**ಮಮಾಗಾಮಿನಿಪರ್ಯಾಯೇ ಕಿಶೋರೋಽಯಂ ಕುಶಾಗ್ರಧೀಃ ।**
**ಸುಧಾಪ್ರವಕ್ತಾ ಭವಿತೇತ್ಯುಕ್ತಂ ಶ್ರುತ್ವಾ ಪಿತಾಽವದತ್ ॥**

ಆಯುಸ್ಥೈರ್ಯಂ ಸುವಿದ್ಧತ್ವಂ ಶ್ರೀಮದ್ಭಿ ರ್ಜ್ಞಾಪಿತಂ ತು ವಃ (ವಚಃ)।
ತತೋಭೂನ್ಮೇ ಮಹಾಂಸ್ತೋಷೋನುಗ್ರಹೋತ್ಥಶ್ಚಿರೇಪ್ಸಿತಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ

ಎಂಬ ಉಕ್ತಿಯಂತೆ ಜ್ಞಾನಿವರೇಣ್ಯರಾದ ಶ್ರೀವಿದ್ಯಾಧೀಶರು 'ಆಚಾರ್ಯರೇ ಚಿಂತಿಸಬೇಡಿ. ನಿಮ್ಮ ಮಗನ ಭವಿಷ್ಯ ಉಜ್ವಲವಾಗಿರುವುದು. ಹರಿವಾಯುಗಳ ಕೃಪಾ ವಿಶೇಷದಿಂದ ನಮ್ಮ ಮುಂದಿನ ಪರ್ಯಾಯದಲ್ಲಿ ಕುಶಾಗ್ರಮತಿಯಾದ ಈ ಕಿಶೋರ ಸುಧಾಪ್ರವಚನ ಮಾಡುತ್ತಾನೆ' ಎಂದು ಭವಿಷ್ಯವನ್ನೂ ನುಡಿದುಬಿಟ್ಟರು.

ಸರ್ವಜ್ಞ ಪೀಠದಲ್ಲಿ ಕುಳಿತ ಶ್ರೀಗಳವರ ಅನುಗ್ರಹವಾಣಿಯನ್ನು ಕೇಳಿ ಶ್ರೀನಿವಾಸಾಚಾರ್ಯರಿಗೆ ಮಹದಾನಂದವಾಯಿತು. ಇಂಥಾ ತಪೋನಿಧಿಗಳ ಕೃಪಾಶೀರ್ವಾದದಿಂದ ತಮ್ಮ ಮಗ ದೀರ್ಘಾಯುವೂ, ಸಕಲಶಾಸ್ತ್ರ ಪಾರಂಗತನೂ ಆಗಿ ಮೆರೆಯುವನೆಂದು ಮನವರಳಿತು. ಈ ಅಮೃತ ಘಳಿಗೆಗಾಗಿಯೇ ಆಚಾರ್ಯರು ಕಾಯುತ್ತಿದ್ದರು. ಈ ಅನುಗ್ರಹ ವಾಕ್ಯವನ್ನು ಗುರುಮುಖದಿಂದ ಕೇಳುವುದಕ್ಕಾಗಿಯೇ ಅವರು ಜಟಾಜೂಟಗಳನ್ನು ಧರಿಸಿ ಕಠಿಣ ವ್ರತಗಳನ್ನು ಕೈಗೊಂಡಿದ್ದರು. ತಮ್ಮ ಅಂತರಂಗದ ಧ್ವನಿಯನ್ನು ಆಲಿಸಿದ ಕೃಷ್ಣನ ಕಾರುಣ್ಯವನ್ನು ನೆನೆದು ಹರ್ಷಾತಿರೇಕದಿಂದ ಆಚಾರ್ಯರ ಕಣ್ಣಾಲಿಗಳು ತುಂಬಿ ಬಂದವು. ಕೂಡಲೇ ಅವರು ವಾದಿರಾಜನನ್ನು ಶ್ರೀಗಳವರ ಮುಂದೆ ನಿಲ್ಲಿಸಿ 'ಗುರುವರ್ಯರೇ! ಈ ಬಾಲಕ ಇನ್ನು ಮುಂದೆ ತಮ್ಮವನು. ವಿದ್ಯಾಸಾಗರರಾದ ತಾವೇ ಕೃಪೆಯಿಟ್ಟು ಇವನಿಗೆ ವಿದ್ಯಾದಾನ ಮಾಡಿ ಸುಧಾಪಂಡಿತನನ್ನಾಗಿ ರೂಪಿಸಬೇಕು' ಎಂದು ಶಿರಸಾಷ್ಟಾಂಗ ಪ್ರಣಾಮಗಳನ್ನು ಪುನಃ ಪುನಃ ಸಲ್ಲಿಸಿದರು.

ಆಚಾರ್ಯರ ಶ್ರದ್ಧಾಭಕ್ತಿಗಳನ್ನು ಕಂಡು ಶ್ರೀಗಳವರು ತುಂಬಾ ಪ್ರಸನ್ನರಾದರು. ಅಪೂರ್ವ ಮೇಧಾಶಕ್ತಿಯುಳ್ಳ ಶಿಷ್ಯ ಹರಿವಾಯುಗಳ ಕೃಪೆಯಿಂದ ಅನಾಯಾಸವಾಗಿ ದೊರಕಿದನೆಂದು ಸಂತೋಷಿಸಿ ಅಂದಿನಿಂದಲೇ ಅವನನ್ನು ತಮ್ಮ ಗುರುಕುಲಕ್ಕೆ ಸೇರಿಸಿಕೊಂಡು

ಪಾಠಪ್ರವಚನವನ್ನು ಪ್ರಾರಂಭಿಸಿದರು. ವಿದ್ಯಾಕಾಂಕ್ಷಿಯಾದ ವಾದಿರಾಜ ಅತ್ಯುತ್ಸಾಹದಿಂದ 'ವೈಷ್ಣವೋತ್ತಮ ಸುಶ್ಲಾಘ್ಯಸುಧಾವ್ಯಾಖ್ಯಾನಕೌಶಲಾನ್' ಎಂದು ಖ್ಯಾತಿವೆತ್ತ ಶ್ರೀವಿದ್ಯಾಧೀಶರೆಂಬ ಸದ್ಗುರುಗಳ ಬಳಿ ಸುಧಾಂತ ಅಧ್ಯಯನವನ್ನು ಮಾಡತೊಡಗಿದ.

ಶ್ರೀಕೃಷ್ಣಾಪುರ ಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರು (1808–1881) ಪಂಡಿತಾಗ್ರಣಿಗಳೆಂದು ಪ್ರಖ್ಯಾತರಾಗಿದ್ದು ಉಡುಪಿಯ ಅಷ್ಟಮಠದ ವಲಯದಲ್ಲಿ ಪ್ರಭಾವಪೂರ್ಣವಾದ ವ್ಯಕ್ತಿತ್ವವನ್ನು ಹೊಂದಿದ್ದರು. ಕೃಷ್ಣನ ಪೂಜೆಗಾಗಿ ಶ್ರೀಮದಾನಂದ ತೀರ್ಥರಿಂದ ನಿಯೋಜಿಸಲ್ಪಟ್ಟ ಎಂಟು ಜನ ಯತಿಗಳಲ್ಲಿ ಶ್ರೀಜನಾರ್ದನ ತೀರ್ಥರ ಪರಂಪರೆಯಲ್ಲಿ ಬಂದ ಮೂವತ್ತೆರಡನೆಯ ಪೀಠಾಧಿಪತಿಗಳಾದ ಶ್ರೀಗಳವರು ತಮ್ಮ ದ್ವಂದ್ವ ಮಠವಾದ ಶ್ರೀಪುತ್ತಿಗೆ ಮಠದ ವಿದ್ವನ್ಮಣಿಗಳಾದ ಶ್ರೀಭುವನೇಂದ್ರತೀರ್ಥರಲ್ಲಿ ಶಾಸ್ತ್ರ ವ್ಯಾಸಂಗವನ್ನು ಮಾಡಿ ಅಪರಿಮಿತವಾದ ಪ್ರೌಢಿಮೆಯನ್ನು ಗಳಿಸಿಕೊಂಡರು. ಇಷ್ಟಕ್ಕೆ ತೃಪ್ತರಾಗದ ವಿದ್ಯಾಧೀಶರು ಮತ್ತಷ್ಟು ವಿಶೇಷಜ್ಞಾನವನ್ನು ಸಂಪಾದಿಸಲು[1] 'ಶಾಸ್ತ್ರನಗರಿ'ಯೆಂದು ಪ್ರಸಿದ್ಧವಾದ ಕಾಶಿ ಕ್ಷೇತ್ರಕ್ಕೆ ಹೋಗಿ ವಿಶದವಾಗಿ ಅಧ್ಯಯನ ಮಾಡಿ ಅವುಗಳಲ್ಲಿ ಪ್ರಭುತ್ವವನ್ನು ಪಡೆದುಕೊಂಡರು.

**ಶ್ರೀಮತ್ಕಾಲೀಯಮರ್ದನೈಕಶರಣಾಃ ಶ್ರೀಮತ್ಸುಧಾಪಾರಗಾಃ**
**ಶ್ರೀಗಂಗಾದಿಸಮಸ್ತತೀರ್ಥವಿಚರಾಃ ಕೃಷ್ಣಾಪುರಾಧೀಶ್ವರಾಃ।**

ಎಂದು ಶ್ರೀಜಂಬುಖಂಡಿ ವಾದಿರಾಜಾಚಾರ್ಯರೇ ತಾವು ರಚಿಸಿದ 'ವಿದ್ಯಾಧೀಶಾಷ್ಟಕ'ದಲ್ಲಿ ಸ್ತುತಿಸಿರುವಂತೆ ಶ್ರೀಕೃಷ್ಣಾಪುರ ಮಠಾಧೀಶರು

---

1. **ವಾಸವ ಮಾಡುವರ ದೋಷವ ಕಳೆವ। ಶ್ರೀ**
**ಕಾಶಿಗೆ ಪೋಗಿ ದ್ವಾದಶಾಬ್ದ ವಾಸ ಮಾಡಿದ॥**
**ಗಂಗಾ–ಪ್ರಯಾಗ–ಗಯಾಪುಷ್ಕರ ನೈಮಿಷ।**
**ರಂಗನ ಸ್ಮರಿಸಿ ನಿಸ್ಸಂಗದಲಿ ಮೆರೆದ॥**
(ಭಾವಿಭಾರತಿಪತಿದಾಸರು 'ಶ್ರೀವಿದ್ಯಾಧೀಶಗುರುವೆ । ಎನ್ನನುದ್ಧರಿಸೊ । ಬುಧಜನಸುರತುರವೆ' ಎಂಬ ಕೃತಿಯಲ್ಲಿ.)

ತಮ್ಮ ಸಂಸ್ಥಾನದ ಮುಖ್ಯ ಪ್ರತಿಮೆಯಾದ ಆಚಾರ್ಯ ಶ್ರೀಮಧ್ವಪೂಜಿತ ಕಾಲೀಯಮರ್ದನ ಕೃಷ್ಣನ ಪಾದಪದ್ಮಗಳಲ್ಲಿಯೇ ಸದಾ ನೆಟ್ಟ ಮನಸ್ಸುಳ್ಳ ಜ್ಞಾನಿವರೇಣ್ಯರು. ಶ್ರೀಮನ್ನ್ಯಾಯ ಸುಧಾ ಗ್ರಂಥ ಪ್ರವಚನದಲ್ಲಿ ನಿಷ್ಣಾತರು. ಗಂಗಾದಿ ಸಮಸ್ತ ಪುಣ್ಯತೀರ್ಥ ಕ್ಷೇತ್ರಗಳನ್ನು ಚರಿಸಿದ ಪೂತಾತ್ಮರು. ಶ್ರೀನಿವಾಸನ ಅಂತರಂಗಭಕ್ತರು. ನಾಲ್ಕು ಬಾರಿ ಶ್ರೀಕೃಷ್ಣನ ಪೂಜಾ ಪರ್ಯಾಯಗಳನ್ನು ಯಶಸ್ವಿಯಾಗಿ ಪೂರೈಸಿದ ಶ್ರೀಗಳವರು ತಮ್ಮ ಪರ್ಯಾಯ ಕಾಲದಲ್ಲಿ ಅನೇಕ ಜೀರ್ಣೋದ್ಧಾರ ಕಾರ್ಯಗಳನ್ನು ಕೈಗೊಂಡು ಶ್ರೀಕೃಷ್ಣನ ಪೂಜಾವಿಧಾನಗಳು ಸಮರ್ಪಕವಾಗಿ ನಡೆಯುವಂತೆ ಸೂಕ್ತ ವ್ಯವಸ್ಥೆ ಮಾಡಿದರು. ಅನೇಕ ಪೀಠಾಧಿಪತಿಗಳಿಗೆ ಶಾಸ್ತ್ರಪಾಠಗಳನ್ನು ಹೇಳಿ, ಹಲವಾರು ಧೀಮಂತ ಶಿಷ್ಯರನ್ನು ರೂಪಿಸಿ, ಹನ್ನೆರಡು ಬಾರಿ ಶ್ರೀಮನ್ನ್ಯಾಯಸುಧಾ ಗ್ರಂಥದ ಮಂಗಳ ಮಾಡಿ ಅಭೂತಪೂರ್ವ ಕೀರ್ತಿಯನ್ನು ಸಂಪಾದಿಸಿದರು. ಅಸಂಖ್ಯಾತ ಶಿಷ್ಯರನ್ನು ತಯಾರು ಮಾಡಿದ ಶ್ರೀಗಳವರು ಆಗಿನ ಪೇಜಾವರ, ಶೀರೂರು ಮತ್ತು ಸೋದಾ ಮಠದ ಶ್ರೀಗಳವರಿಗೂ ಸುಧಾಂತಪಾಠವನ್ನು ಹೇಳಿದರು. ಹರಿದಾಸ ಸಾಹಿತ್ಯವನ್ನೂ ಸಹ ಶ್ರೀವಿದ್ಯಾಧೀಶರು ಸಮಾನ ಶ್ರದ್ಧೆಯಿಂದ ಕಾಣುತ್ತಿದ್ದರು. ಹಾಗಾಗಿ ಅವರ ಬಳಿಯಲ್ಲಿ ಸುರಪುರದ ಶ್ರೀಆನಂದದಾಸರಿಂದ 'ಕಮಲಾಪತಿ ವಿಠಲ' ಎಂಬ ಅಂಕಿತ ದೀಕ್ಷೆ ಪಡೆದಿದ್ದ ಶ್ರೀಸಂತೇಬೆನ್ನೂರು ರಾಮಾಚಾರ್ಯರೇ ಮೊದಲಾದ ಅನೇಕ ಹರಿದಾಸರು ಶಾಸ್ತ್ರವ್ಯಾಸಂಗ ನಿರತರಾಗಿದ್ದರು.

ಶ್ರೀಮದ್ವಾದಿರಾಜರನ್ನು ಭಾವಿಸಮೀರರೆಂದು ದೃಢವಾಗಿ ನಂಬುತ್ತಿದ್ದ ಕೃಷ್ಣಾಪುರ ಮಠಾಧೀಶರು ರಾಜರ ಋಜುತ್ವ ಮಹಿಮಾ ಪ್ರಚಾರವನ್ನು ತಮ್ಮ ಅಜೀವ ಪರ್ಯಂತ ಮಾಡಿದರು.

**ಶ್ರೀಮದ್ವಿಕ್ರಮವತ್ಸರೇ ಮಿಥುನಗೇ ಸೂರ್ಯೇ ಹರೇರ್ವಾಸರೇ।**
**ಜ್ಯೇಷ್ಠೇ ಕೃಷ್ಣಾಸುಪಕ್ಷಕೇ ಗುರುವರಾಃ ವೈಕುಂಠಲೋಕಂ ಶ್ರಿತಾಃ॥**

ಎಂಬುದಾಗಿ ಶ್ರೀಜಂಬುಖಂಡಿ ಆಚಾರ್ಯರೇ ಹೇಳಿರುವಂತೆ ಶ್ರೀವಿದ್ಯಾಧೀಶರು ಕ್ರಿ.ಶ. 1881 ವಿಕ್ರಮ ಸಂವತ್ಸರದ ಜ್ಯೇಷ್ಠಾಸಿತ

ಹರಿದಿವಸದಂದು ಹರಿಸ್ಮರಣೆಯನ್ನು ಮಾಡುತ್ತಾ ಹರಿಪುರಕ್ಕೆ ಪ್ರಯಾಣ ಬೆಳೆಸಿದರು[1]. ಬೆಂಗಳೂರು ಮಾರುಕಟ್ಟೆ ಪ್ರದೇಶದಲ್ಲಿ ಈಗ ಕೃಷ್ಣಮಂದಿರವಾಗಿ ಕಂಗೊಳಿಸುತ್ತಿರುವ ಗುಂಡೋಪಂತರ ಛತ್ರದಲ್ಲಿ ಶ್ರೀವಿದ್ಯಾಧೀಶರ ವೃಂದಾವನ ನಿತ್ಯ ಪೂಜೆಗೊಳ್ಳುತ್ತಾ ಭಾವುಕರ ಮನೋಭೀಷ್ಟಗಳನ್ನು ಈ ಹೊತ್ತಿಗೂ ಪೂರೈಸುತ್ತಿದೆ. ಕಲ್ಯಾಣ ನಗರಿಯಾದ ಬೆಂಗಳೂರಿನ ಹೃದಯ ಭಾಗದಲ್ಲಿ ವಿರಾಜಿಸುತ್ತಿರುವ ಏಕೈಕ ಮೂಲವೃಂದಾವನ ಇದಾಗಿದೆ. ಇತ್ತೀಚೆಗೆ ಇಲ್ಲಿ ಶ್ರೀರಾಘವೇಂದ್ರ ಸ್ವಾಮಿಗಳ ಮೃತ್ತಿಕಾವೃಂದಾವನವೂ ಸಹ ಪ್ರತಿಷ್ಠಾಪಿಸಲ್ಪಟ್ಟಿದೆ.

ಜ್ಞಾನವೈರಾಗ್ಯದ ಮೇರುನಿಧಿಗಳೆಂದು ಖ್ಯಾತಿವೆತ್ತ ಇಂಥಾ ಕೃಷ್ಣಾಪುರ ಮಠಾಧೀಶರ ಬಳಿಯಲ್ಲಿ ವಾದಿರಾಜನ ವಿದ್ಯಾವ್ಯಾಸಂಗ ನಿರಾತಂಕವಾಗಿ ಸಾಗಿತು. ಮಧ್ವಮುನಿಗಳ ಸಾಧನಭೂಮಿಯೆನ್ನಿಸಿದ ಉಡುಪಿ ಕ್ಷೇತ್ರದಲ್ಲಿ ಪ್ರತಿನಿತ್ಯವೂ ಪವಿತ್ರವಾದ ಮಧ್ವ ಸರೋವರದಲ್ಲಿ ಸ್ನಾನಮಾಡುತ್ತಾ. ಮಧ್ವವಲ್ಲಭನಾದ ಮುದ್ದು ಕೃಷ್ಣನನ್ನು ಸಂದರ್ಶಿಸುತ್ತಾ, ಮಧ್ವಪೀಠದಲ್ಲಿ ವಿರಾಜಮಾನರಾದ ವಿದ್ಯಾಧೀಶರ ಸನ್ನಿಧಾನದಲ್ಲಿ ಮಧ್ವ ಗ್ರಂಥಾವಳಿಯನ್ನು ಅಭ್ಯಸಿಸುತ್ತಾ ವಾದಿರಾಜ ಮಧ್ವರಾಯರ ಕರುಣಾರಸವನ್ನು ಮೊಗೆ ಮೊಗೆದು ಕುಡಿದ.

ನಿರ್ಮಥ್ಯೋಗ್ರಭವಾರ್ಣವೇ ನಿಜಮನೋಽಭೀಷ್ಟಂ ದಿಶಾಮೀತಿ ಯಃ
ಸಮ್ಯಜ್ಞಾಪಯಿತುಂ ಕರೇಣ ವಿಲಸನ್ಮಂಥಾನಮನ್ಯೇನ ಚ।
ರಮ್ಯಂ ದಾಮ ದಧನ್ಮಹೇಶರಜತಗ್ರಾಮಶ್ರಿಯೋಽಲಂಕೃತಿಃ
ಕರ್ಮಂದೀಶ್ವರಭಕ್ತಿ ಬಂಧನವಶಃ ಪ್ರೀತೋಽಸ್ತು ಕೃಷ್ಣಃ ಪ್ರಭುಃ॥

ಎಂದು ವಾದಿರಾಜರು ತೀರ್ಥ ಪ್ರಬಂಧದಲ್ಲಿ ಹೇಳಿರುವಂತೆ ಭಾವಾವಿಷ್ಟನಾಗಿ ಪ್ರಾರ್ಥಿಸುತ್ತಿದ್ದ. ಬಲಗೈಯಲ್ಲಿ ಕಡಗೋಲು ಮತ್ತು

1. ಕ್ರೋಧನ ಜ್ಯೇಷ್ಠ ಕೃಷ್ಣೈಕಾದಶಿ। ಪೂರ್ಣ
ಬೋಧ ಕರಾರ್ಚಿತ ಕೃಷ್ಣನ ಸೇರಿದ॥
(ಎಂಬುದಾಗಿ ಭಾವಿಭಾರತಿಪತಿದಾಸರು ವಿದ್ಯಾಧೀಶರ ನಿರ್ಯಾಣವತ್ಸರವನ್ನು ಕ್ರೋಧನ ಎಂದು ದಾಖಲಿಸಿದ್ದಾರೆ.)

ಎಡಗೈಯಲ್ಲಿ ಮೊಸರು ಕಡೆಯುವ ಹಗ್ಗ ಹಿಡಿದ ಕೃಷ್ಣನನ್ನು ಪ್ರತಿನಿತ್ಯವೂ ನೋಡುತ್ತಾ ಧ್ಯಾನಿಸುತ್ತಿದ್ದನಾದ ಕಾರಣ, ಅಪಾರವಾದ ಶಾಸ್ತ್ರ ಸಾಗರವನ್ನು ಕಡೆಯುವ ಕಲೆಯೂ ಅವನಿಗೆ ಕರಗತವಾಗಿತ್ತು. ಹರಿಗುರುಗಳ ಪರಮಾನುಗ್ರಹದಿಂದ ಅದಕ್ಕೆ ಪೂರಕವಾಗಿ ಎಂಥವರ ಮನಸ್ಸನ್ನೂ ತನ್ನೆಡೆಗೆ ಸೆಳೆದುಕೊಳ್ಳುವ ಅಪೂರ್ವವಾದ ವಾಕ್ಪಟುತ್ವವೂ ಸಿದ್ಧಿಸಿತ್ತು. ಹಾಗಾಗಿ ವಾದಿರಾಜ ಪಂಡಿತ ಮಂಡಳಿಯಲ್ಲಿ ಬಹುಬೇಗ ಮಾನ್ಯತೆಯನ್ನು ಗಳಿಸಿದ. ಪರವಾದಿಗಳನ್ನು ಕ್ಷಣಾರ್ಧದಲ್ಲಿ ಮೂಕವಿಸ್ಮಿತರನ್ನಾಗಿ ಮಾಡಿ ಮಧ್ವಸಿದ್ಧಾಂತದ ಪತಾಕೆಯನ್ನು ಹಾರಿಸುವ ಅವನ ವಾದ ವೈದುಷ್ಯ ಮತ್ತು ಉಪಲಬ್ಧವಿರುವ ಟೀಕೆ, ಟಿಪ್ಪಣಿಗಳನ್ನು ಸುಲಲಿತವಾಗಿ ಉದಾಹರಿಸುತ್ತಾ ಅರ್ಥ ಸ್ಫುರಿಸುವಂತೆ ಶಾಸ್ತ್ರ ಗ್ರಂಥಗಳ ತಿರುಳನ್ನು ತೆರೆದಿಡುವ ಅನುವಾದ ಕೌಶಲ್ಯ ವಾದಿರಾಜನಿಗೆ ಅಪಾರ ಕೀರ್ತಿಯನ್ನು ತಂದುಕೊಟ್ಟಿದ್ದವು.

**ತತಃ ಸದಾರಂ ಪರಿಗೃಹ್ಯ ಮತ್ಪಿತಾ ರೌಪ್ಯಂ ಸುಪೀಠಂ ಪುನರೇವ ನಿರ್ಗತಃ।**
**ತತ್ರ ತ್ರಿವರ್ಷೇಷ್ವಮಠಾಧಿಕಾರಿಕ ಶ್ರೀಮತ್ಸುಧೇಶೇ ಕರುಣಾಂ ಪ್ರಕುರ್ವತಿ ॥**

ಎಂದು ಆಚಾರ್ಯರೇ ಹೇಳಿಕೊಂಡಿರುವಂತೆ ಸುಮಾರು ಮೂರು ವರ್ಷಗಳ ಕಾಲ ವಿದ್ಯಾಧೀಶರಲ್ಲಿ ದೇವಾಧಿಕಾರಿಕ ಶ್ರೀಮನ್ನ್ಯಾಯಸುಧಾ ಗ್ರಂಥವನ್ನು ಅಧ್ಯಯನ ಮಾಡಿ ವಾದಿರಾಜ, ಟೀಕಾಕೃತ್ಪಾದರ ಪರಮಾನುಗ್ರಹ ಸಂಪಾದಿಸಿದ. ನೋಡು ನೋಡುತ್ತಿದ್ದಂತೆಯೇ ಸುಧಾಪಂಡಿತನೆನ್ನಿಸಿ, ವಿದ್ವತ್ಪರಿಸರದಲ್ಲಿ "ಜಂಬುಖಂಡಿ ವಾದಿರಾಜಾ ಚಾರ್ಯ" ರೆಂದು ಪ್ರಖ್ಯಾತನಾದ.

'ನಮ್ಮ ಪರ್ಯಾಯದಲ್ಲಿ ಈ ಕಿಶೋರ ಸುಧಾಪ್ರವಚನ ಮಾಡುವನು' ಎಂದು ಹೇಳಿದ ಶ್ರೀವಿದ್ಯಾಧೀಶರ ಭವಿಷ್ಯವಾಣಿ ಸತ್ಯವಾಯಿತು. ಮುಂದೆ ಶ್ರೀವಾದಿರಾಜಾಚಾರ್ಯರು ಕೃಷ್ಣಾಪುರಮಠದ ಪರ್ಯಾಯದಲ್ಲಿ ನಡೆದ ಅಷ್ಟಯತಿವರೇಣ್ಯರಿಂದ ಶೋಭಿತವಾದ ವಿದ್ವತ್ಸಭೆಯಲ್ಲಿ ಸುಧಾಪ್ರವಚನ ವನ್ನು ಅಮೋಘವಾಗಿ ನೀಡುವ ಮೂಲಕ ವಿದ್ಯಾಧೀಶರಿಗೆ ಸಾರ್ಥಕ ಗುರುಕಾಣಿಕೆಯನ್ನು ಸಲ್ಲಿಸಿದರು.

**ಪುನಶ್ಚಿತ್ತಾಪುರಂ ಪ್ರಾಪ್ಯ ತದಾರ್ಯಾದೈತರೇಯಕಮ್ ।**
**ಭಾಷ್ಯಂ ಶ್ರುತ್ವಾ ರೌಪ್ಯಪೀಠಸ್ಥ ತಂ ಕೃಷ್ಣಂ ನನಾಮ ಸಃ ॥**

ಎಂಬ ಷಟ್ಪುರಾಚಾರ್ಯರ ಹೇಳಿಕೆಯಂತೆ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಶ್ರೀಕೃಷ್ಣಾಪುರ ಮಠಾಧೀಶರ ಬಳಿ ಶಾಸ್ತ್ರಾಧ್ಯಯನ ಪೂರೈಸಿ ಪುನಃ ಚಿತ್ತಾಪುರಕ್ಕೆ ಬಂದರು. ಜನ್ಮತಃ ಅಸಮಾನ್ಯ ಪ್ರತಿಭಾನ್ವಿತನಾದ ತಮ್ಮ ಶಿಷ್ಯ ಖ್ಯಾತಿವೆತ್ತ ಶ್ರೀವಿದ್ಯಾಧೀಶರಲ್ಲಿ ಅಧ್ಯಯನ ನಡೆಸಿ 'ಸುಧಾ ಪಂಡಿತ'ನಾಗಿ ರೂಪುಗೊಂಡಿರುವುದನ್ನು ಕಂಡು ನಿರ್ಮತ್ಸರಿಗಳೂ, ವಿಶಾಲ ಹೃದಯಿಗಳೂ ಆದ ಶ್ರೀವಾಯಿ ಶ್ರೀನಿವಾಸಾಚಾರ್ಯರಿಗೆ ತುಂಬಾ ಸಂತೋಷವಾಯಿತು. ತುಂಬು ಮನಸ್ಸಿನಿಂದ ಅವರು ಶಿಷ್ಯನನ್ನು ಆಶೀರ್ವದಿಸಿದರಲ್ಲದೇ 'ಐತರೇಯಭಾಷ್ಯ' ವನ್ನು ಶ್ರವಣಮಾಡುವ ಮಹಾಭಾಗ್ಯವನ್ನು ಸಹ ಕರುಣಿಸಿ ಪರಮಾನುಗ್ರಹ ಮಾಡಿದರು. ಇದಾದ ನಂತರ ಜಂಬುಖಂಡಿ ಆಚಾರ್ಯರು ಸಮಸ್ತವನ್ನೂ ತಮ್ಮ ಅಭ್ಯುದಯಕ್ಕೆ ಕಾರಣನಾದ ರಜತಾಸನ ನಿಲಯನಿಗೆ ಅರ್ಪಿಸಿ ಸ್ವಗ್ರಾಮಕ್ಕೆ ಹಿಂದಿರುಗಿದರು.

**ಕೃಷ್ಣಾಪುರ ಶ್ರೀಸಮನುಗ್ರಹೇಕ್ಷಿತಂ ಶ್ರೀವಾದಿರಾಜಂ ಪರಿಗೃಹ್ಯ ಮತ್ಪಿತಾ ।**
**ತುಂಗಭದ್ರಾತಟಿನೀತಟಸ್ಥೇ ಕೈಲಾಸವರ್ಯಸ್ಯ ಸಕುಡ್ಮಲಾಖ್ಯೇ ॥**

ಎಂದು ಆಚಾರ್ಯರೇ ಹೇಳಿಕೊಂಡಿರುವಂತೆ ಕೃಷ್ಣಾಪುರ ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾದ ವಾದಿರಾಜಾಚಾರ್ಯರು ತಮ್ಮ ಸ್ವಗ್ರಾಮಕ್ಕೆ ಹಿಂದಿರುಗುವ ಮುನ್ನ ತಂದೆಯವರೊಂದಿಗೆ ತುಂಗಭದ್ರಾ ತೀರಕ್ಕೆ ಭೇಟಿಯಿತ್ತು ಅಲ್ಲಿ ವಿರಾಜಿಸುವ ರುದ್ರದೇವರ ಅನುಗ್ರಹವನ್ನು ಪಡೆದುಕೊಂಡರು. ಇದು ಬಹುಶಃ ರುದ್ರಾಂಶಸಂಭೂತರೆಂದು ಪ್ರಖ್ಯಾತರಾದ ಶ್ರೀಸತ್ಯಧರ್ಮತೀರ್ಥರು ಬೃಂದಾವನಸ್ಥರಾಗಿರುವ ಹೊಳೆ ಹೊನ್ನೂರು ಅಥವಾ ಪುರಾಣ ಪ್ರಸಿದ್ಧವಾದ ಹರಿಹರ ಕ್ಷೇತ್ರವಿರಬೇಕೆಂದು ತೋರುತ್ತದೆ. ಈ ಸುಮಾರಿಗೇ ಶ್ರೀವೃಂದಾವನಾಚಾರ್ಯರು ಸೋದಾಕ್ಷೇತ್ರದ ಧವಳ ಗಂಗಾತಟದಲ್ಲಿ ಹನುಮಂತ ದೇವರ ಪ್ರತಿಷ್ಠಾಪನೆಯನ್ನು ನೆರವೇರಿಸಿದರು. ಮಹಾ ವೈಭವದಿಂದ ನಡೆದ ಪ್ರಾಣ

ಪ್ರತೀಕ ಪ್ರತಿಷ್ಠಾಪನಾ ಸಮಾರಂಭದಲ್ಲಿ ಜಂಬುಖಂಡಿ ವಾದಿರಾಜಾಚಾರ್ಯರು ಶ್ರದ್ಧಾಭಕ್ತಿಗಳಿಂದ ಭಾಗವಹಿಸಿ ಹರಿಗುರುಗಳನ್ನು ಸೇವಿಸಿದರು[1]. ಮಧ್ವಶಾಸ್ತ್ರವನ್ನು ಸವಿಯುವ ಮಹಾಭಾಗ್ಯ ಕರುಣಿಸಿದ ಭಾವಿಮಧ್ವರ ಚರಣಾರವಿಂದಗಳಲ್ಲಿ ಆಚಾರ್ಯರ ಮನಸ್ಸು ದುಂಬಿಯಂತೆ ವಿಹರಿಸಿತು. ಅಲ್ಲಿಯೇ ಆಚಾರ್ಯರು ಎರಡು ತಿಂಗಳುಗಳ ಕಾಲ ನೆಲೆಸಿ ಪ್ರತಿನಿತ್ಯವೂ ಸುಧಾಪ್ರವಚನವನ್ನು ಮಾಡುತ್ತಾ ಗುರುಬಿಂಬವನ್ನು ಸಂತುಷ್ಟಗೊಳಿಸಿದರು.



1. ತತಃ ಸೋದಾಪುರೇ ರಮ್ಯೇ ಗಂಗಾತೀರೇ ಹನೂಮತಿ ।
ವೃಂದಾವನಾಚಾರ್ಯವರ್ಯಾತ್ ಪ್ರತಿಷ್ಠಾಂ ಸುದಿನೇ ಗತೇ ॥ 9 ॥
– ಜಂಬುಖಂಡಿ ಆಚಾರ್ಯರು ರಚಿಸಿದ ಆತ್ಮಕಥನ

# ಕೊನರಿದ ಸದ್ವಂಶ ಕುಡಿ

**ಸ**ಣ್ಣ ಬಾಲಕರಾಗಿದ್ದಾಗ ಉನ್ನತ ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಊರುಬಿಟ್ಟು ಹೋಗಿದ್ದ ಜಂಬುಖಂಡಿ ವಾದಿರಾಜಾಚಾರ್ಯರು ಸುಮಾರು ಎರಡು ದಶಕಗಳ ನಂತರ ಚತುಃಶಾಸ್ತ್ರಪಾರಂಗತರಾಗಿ ತಮ್ಮ ಊರಾದ ಹಾನಗಲ್ಲಿಗೆ ಮರಳಿ ಬಂದರು. ಹರೆಯ ತುಂಬಿದ ಮಗನನ್ನು ಕಂಡು ತಂದೆಯವರಾದ ಶ್ರೀನಿವಾಸಾಚಾರ್ಯರಿಗೆ ಪರಮಾನಂದ ವಾಯಿತು. ಚಿತ್ತಾಪುರ ಮತ್ತು ಉಡುಪಿಗಳಲ್ಲಿ ತಮ್ಮ ಪುತ್ರ ಅಧ್ಯಯನ ನಿರತನಾಗಿದ್ದಾಗ ಹಬ್ಬದ ಸಂದರ್ಭಗಳಲ್ಲಿ ಹಾಗೂ ಕುಟುಂಬದಲ್ಲಿ ಆಗಾಗ ನಡೆಯುತ್ತಿದ್ದ ವಿಶೇಷ ಸಮಾರಂಭಗಳಲ್ಲಿ ಭಾಗವಹಿಸಲು ಊರಿಗೆ ಬರುತ್ತಿದ್ದನಾದರೂ, ಆತ ಮತ್ತೆ ಹೋಗುವನೆಂಬ ಆತಂಕವೇ ಹೆಚ್ಚಾಗಿದ್ದುದರಿಂದ ಅವರಿಗೆ ಪೂರ್ಣತೃಪ್ತಿ ತರುತ್ತಿರಲಿಲ್ಲ. ಜೀವನ ಸಂಗಾತಿಯನ್ನು ಕಳೆದುಕೊಂಡು ಒಂಟಿತನದ ಒಳಗುದಿಯಲ್ಲಿ ನರಳುತ್ತಿದ್ದ ಆಚಾರ್ಯರಿಗೆ ಈಗ ಮನೆಗೆ ಮರಳಿದ ಮಗನನ್ನು ಕಂಡು ತಮ್ಮ ಬದುಕಿನ ಸಾರಸರ್ವಸ್ವವೂ ಸಾಕಾರವಾಗಿ ನಿಂತಂತೆ ಆಪ್ಯಾಯಮಾನವಾದ ಅನುಭವವನ್ನು ನೀಡಿತು. ಮಧ್ವವಲ್ಲಭನಾದ ಶ್ರೀಕೃಷ್ಣನ ಕರುಣೆಯಿಂದ ಮತ್ತು ವಾದಿರಾಜ ಗುರುವರ್ಯರ ಕೃಪಾಶೀರ್ವಾದ ಬಲದಿಂದ ಬಹುಕಾಲದ ನಂತರ ಕೊನರಿದ ತಮ್ಮ ವಂಶದ ಕುಡಿ ಈಗ ಗೊನೆಬಿಡಲು ಬೆಳೆದುನಿಂತ ಬಾಳೆಯಂತೆ, ಬ್ರಹ್ಮಚರ್ಯದ ಅಲೌಕಿಕ ತೇಜಸ್ಸಿನಿಂದ ಕಂಗೊಳಿಸುತ್ತಿರುವುದನ್ನು ಅವರು ಮತ್ತೆ ಮತ್ತೆ ನೋಡುತ್ತಾ ಸಂಭ್ರಮಪಟ್ಟರು. ಮಗನನ್ನು ಪಂಡಿತಾಗ್ರಣಿಯಾಗಿ ರೂಪಿಸಬೇಕೆಂಬ ತಮ್ಮ ಬಹುಕಾಲದ ಕನಸನ್ನು ನನಸಾಗಿ ಮಾಡಿದ ಹರಿಗುರುಗಳ ಕಾರುಣ್ಯವನ್ನು ನೆನೆದು ಅವರ

ಹೃದಯ ಭಕ್ತಿಭಾವದಿಂದ ತುಂಬಿ ಬಂದಿತು. ಆಚಾರ್ಯರು ವಾತ್ಸಲ್ಯದಿಂದ ತಮ್ಮ ಮಗನ ನೆತ್ತಿಯನ್ನು ನೇವರಿಸುತ್ತಾ ಅಪೂರ್ವ ಧನ್ಯತೆಯನ್ನು ಅನುಭವಿಸಿದರು.

ತಮ್ಮ ಪತಿ ಮನೆಗೆ ಹಿಂದಿರುಗಿದ್ದನ್ನು ಕಂಡು ದೈವಭಕ್ತೆಯೂ, ಸಾಧ್ವಿಶಿರೋಮಣಿಯೂ ಆದ ಕಮಲಾಬಾಯಿಯವರಿಗೂ ಬಹಳ ಸಂತೋಷವಾಯಿತು. ಪತಿಯ ಆಗಮನಕ್ಕಾಗಿ ಅವರೂ ಜಾತಕಪಕ್ಷಿ ಯಂತೆ ಕಾಯುತ್ತಿದ್ದರು. 'ವಿಷಯಾನುಭವೇ ಸತಿ ದಿವ್ಯವೈಭವ ಯುಕ್ತಾಯಾಂ ಸುಂದರ್ಯಾ ಮಮತಾ ನಹಿ' ಎಂದು ಆಚಾರ್ಯರೇ ಹೇಳಿಕೊಂಡಿರುವುದನ್ನು ನೋಡಿದರೆ ತಾರುಣ್ಯದ ಹೊಸ್ತಿಲಿನಲ್ಲಿಯೇ ಅವರು ವೈರಾಗ್ಯಶಿಖರವನ್ನೇರಿದ್ದರೆಂದು ಊಹಿಸಬಹುದು. ಆದರೂ ವಂಶಾಭಿವೃದ್ಧಿಯನ್ನು ಕಾಣಬೇಕೆಂಬ ತಂದೆಯವರ ಹೆಬ್ಬಯಕೆಯನ್ನು ಪೂರ್ಣಮಾಡಲೋಸುಗ ಆಚಾರ್ಯರು ತಮ್ಮ ಧರ್ಮಪತ್ನಿಯೊಂದಿಗೆ ಸಂಸಾರಜೀವನವನ್ನು ಪ್ರಾರಂಭಿಸಿದರು. ವಂಶೋದ್ಧಾರಕನಾದ ಸತ್ಪುತ್ರ ನನ್ನು ಕರುಣಿಸುವಂತೆ ಅವರೂ ರೌಪ್ಯಪೀಠಾಧಿಪನನ್ನು ಅನವರತ ಪ್ರಾರ್ಥಿಸತೊಡಗಿದರು[1]. ಕ್ಷಿಪ್ರದಲ್ಲಿ ಸಂತಾನಪ್ರದನಾದ ಯಾದವೇಶ ಕೃಷ್ಣನ ಕೃಪೆಯುಂಟಾಯಿತು. ಸುಖ-ದಾಂಪತ್ಯದ ಸಂಕೇತವೆನ್ನುವಂತೆ ಅವರಿಗೆ ಕ್ರಿ.ಶ. 1864ರಲ್ಲಿ ಮುದ್ದಾದ ಗಂಡು ಮಗುವೊಂದಾಯಿತು. ತಮ್ಮೆಲ್ಲಾ ಭಾಗ್ಯೋದಯಕ್ಕೆ ಮುಖ್ಯ ಕಾರಣನಾದ ರಜತ ಪೀಠಪುರಾಧೀಶನ ನೆನಪು ಸದಾ ಬರುತ್ತಿರಬೇಕೆಂದು ಬಯಸಿ ಹಿರಿಯರ ಅಪೇಕ್ಷೆಯಂತೆ ಆಚಾರ್ಯರು ಮಗನಿಗೆ 'ಕೃಷ್ಣ' ಎಂದು ಹೆಸರಿಟ್ಟರು. ಇದಾದ ನಂತರ ಕ್ರಿ.ಶ. 1866 ಹಾಗೂ 1872ನೇ ಇಸವಿಯಲ್ಲಿ ಅವರಿಗೆ

---

1. ಅಥ ಮತ್ಸುಂದರಾರ್ಧಾಂಗ್ಯಾ ಉದರೇऽಪತ್ಯರತ್ನಕಮ್ ।
ಭವೇದ್ಯದಿ ರಮಾಕೇಲಿ ಪ್ರಿಯಂಕರ ಹರೇऽಮಲ ॥
ನಾನ್ಯಂ ಯಾಚೇ ಜಗನ್ನಾಥ ಭಕ್ತೋದ್ಧರಣದೀಕ್ಷಿತ ।
ತತ ಊರ್ಧ್ವಂ ವಿರಕ್ತಃ ಸ್ಯಾಂ ಭಾರ್ಯಾ ಸೌರತಮಜ್ಜನೇ ॥
ಇತ್ಯುಕ್ತೇ ರೌಪ್ಯಪೀಠೇಶೋ ದದೌ ಸ್ವಾಖ್ಯಾಯುತಂ ಶಿಶುಮ್ ।
– ಆಚಾರ್ಯರ ಆತ್ಮಕಥನ

ಮತ್ತೆ ಎರಡು ಗಂಡು ಮಕ್ಕಳು ಜನಿಸಿದವು. ಆಚಾರ್ಯರು ಅವುಗಳಿಗೆ ಕ್ರಮವಾಗಿ ಮಾಧವ ಮತ್ತು ಶ್ರೀನಿವಾಸ ಎಂಬ ನಾಮಕರಣ ಮಾಡಿದರು.

ತಮ್ಮ ವಂಶವೃಕ್ಷ ಟೊಂಗೆ, ಟಿಸಿಲೊಡೆದು ಹಚ್ಚ ಹಸಿರಿನಿಂದ ನಳನಳಿಸಿ ಬಿಳಲೂರತೊಡಗಿರುವುದನ್ನು ಕಂಡು ತಂದೆಯವರಾದ ಶ್ರೀನಿವಾಸಾಚಾರ್ಯರಿಗೆ ತುಂಬಾ ಸಂತೋಷವಾಯಿತು. ತಮ್ಮ ಮೊಮ್ಮಗನಾದ ಕೃಷ್ಣನ ಬಾಲಲೀಲೆಗಳನ್ನು ನೋಡಿ ಆನಂದಿಸುವ ಭಾಗ್ಯವನ್ನು ಮಾತ್ರ ಪಡೆದುಕೊಂಡು ಬಂದಿದ್ದ ಅವರು 'ತೈಲ ತೀರಿದ ಮೇಲೆ ದೀಪವಾರತೊಡಗಿದಂತೆ' ವೃದ್ಧಾಪ್ಯದ ಅಂಚನ್ನು ತಲುಪಿದರು. ಭಗವದಪರೋಕ್ಷವನ್ನು ಪಡೆದ ಪಂಡಿತಾಗ್ರಣಿಯನ್ನೂ, ಗುರುವಾದಿರಾಜರ ಋಜುತ್ವ ಪ್ರತಿಪಾದನೆಯಲ್ಲಿ ಅಲ್ಲಿಯ ತನಕ ಜಗತ್ತು ಕಂಡರಿಯದ ಅಪ್ರತಿಮ ಧೈರ್ಯ, ಸಾಹಸವುಳ್ಳ 'ಜಂಬುಖಂಡಿ' ಎಂಬ ಹೆಸರಿನ ಸಿಂಹವನ್ನೂ ಜಗತ್ತಿಗೆ ಕೊಡುಗೆಯಾಗಿ ನೀಡಿದ ಆ ಮಹಾನುಭಾವರು ಕ್ರಿ.ಶ. 1865 ಕ್ರೋಧನ ಸಂವತ್ಸರದ ಕಾರ್ತಿಕ ಬಹುಳ ದಶಮಿಯಂದು ಹರಿಧ್ಯಾನ ಮಾಡುತ್ತಾ ಕೊನೆಯುಸಿರೆಳೆದರು.

'ಕ್ರೋಧನಾಬ್ದೇ ಸ್ವಪಿತಂ ಶ್ರೀಶಪಾದಾಂಬುಜಾಶ್ರಿತೇ ।
ದಿವಿಸ್ಥೇ ಮಾಂ ಪ್ರತಿ ಹ್ಯದ್ಧಾ ಯಥೈಹಿಕಸುಭಾಷಿತಮ್ ॥
ಮದಸ್ಥಿಧರ ಏವ ತ್ವಂ ಗಂಗಾ ಗಚ್ಛೇತಿ ಮತ್ಪಿತಾ ।
ಸಮಬ್ರವೀತ್ ವಿನಿರ್ಗಚ್ಛನ್ ದಶಮ್ಯಾ ಕಾರ್ತಿಕೇಽಸಿತೇ ॥'

ಎಂದು ಆಚಾರ್ಯರೇ ತಮ್ಮ ಆತ್ಮಕಥನದಲ್ಲಿ ಹೇಳಿಕೊಂಡಿರುವಂತೆ ದೇಹ ಬಿಡುವ ಮೊದಲು ಶ್ರೀನಿವಾಸಾಚಾರ್ಯರು ಮಗನನ್ನು ಕರೆದು ತಮ್ಮ ಅಸ್ಥಿಯನ್ನು ಗಂಗಾ ನದಿಯಲ್ಲಿ ವಿಸರ್ಜಿಸುವಂತೆ ಆದೇಶವಿತ್ತರು.

ತಮ್ಮ ಜನನಕ್ಕಾಗಿ ಉಡುಪಿ ಹಾಗೂ ಸೋದಾ ಕ್ಷೇತ್ರಗಳಲ್ಲಿ ಕಠಿಣತರವಾದ ಸೇವಾದಿಗಳನ್ನು ಮಾಡಿ, ಹರಿಗುರುಗಳ ಕೃಪೆಯನ್ನು ಧಾರೆಯೆರೆದು ತಮ್ಮ ಬಾಳನ್ನು ರೂಪಿಸಿದ ತೀರ್ಥರೂಪರ ಅಗಲಿಕೆ ವಾದಿರಾಜಾಚಾರ್ಯರಿಗೆ ಅತೀವ ವೇದನೆಯನ್ನುಂಟು ಮಾಡಿತು.

ಆದರೆ ಜ್ಞಾನಿಗಳಾಗಿದ್ದುದರಿಂದ ಅಗತ್ಯ ಸ್ಥೈರಣೆಯನ್ನು ತಂದುಕೊಂಡರು. 'ಆವ ಕಾಲ ತಪ್ಪಿಸಿ ಕಾಯ್ವ, ಹರಿ ತಾನು ಸಾವ ಕಾಲ ಮಾತ್ರ ತಪ್ಪಿಸನು' ಎಂಬ ಶ್ರೀವಿಜಯರಾಯರ ವಾಕ್ಯವನ್ನು ನೆನೆದು ಮುಂದೆ ನಡೆಯು ಬೇಕಾದ ಕಾರ್ಯಗಳನ್ನೆಲ್ಲಾ ಸಾಂಗವಾಗಿ ನೆರವೇರಿಸಿದರು. ತಂದೆ ಯವರ ಆದೇಶದಂತೆ ಗಂಗಾ ನದಿಗೆ ತೆರಳಿ ಅಲ್ಲಿ ಅವರ ಅಸ್ಥಿಯನ್ನು ವಿಸರ್ಜಿಸಿದರು.

ಇಲ್ಲಿಂದ ಮುಂದೆ ವಾದಿರಾಜಾಚಾರ್ಯರ ಚಿತ್ತವೃತ್ತಿಯಲ್ಲಿ ಗಮನಾರ್ಹ ಬದಲಾವಣೆಗಳು ಕಂಡು ಬಂದವು. ಹೆತ್ತವರ ಅಗಲಿಕೆಯ ನೋವು ಕೆಲವು ಕಾಲ ಅವರ ವ್ಯಕ್ತಿತ್ವವನ್ನೇ ಅಲುಗಾಡಿಸಿದರೂ, ದಿನ ಕಳೆದಂತೆಲ್ಲಾ ಬದುಕಿನ ಯಥಾರ್ಥ ನೆಲೆಗಟ್ಟಿನ ಮೇಲೆ ನಿಂತು ಯೋಚಿಸುವ ಮತ್ತು ಹರಿಸಂಕಲ್ಪದಂತೆ ನಡೆಯುವ ಘಟನಾವಳಿಗಳನ್ನು ನಿರ್ಲಿಪ್ತತೆಯಿಂದ ವೀಕ್ಷಿಸುವ ಅಪೂರ್ವ ಗಾಂಭೀರ್ಯವನ್ನೂ, ವೈರಾಗ್ಯ ಪೂರ್ಣ ದೃಷ್ಟಿಕೋನವನ್ನೂ ತಂದುಕೊಟ್ಟಿತು. ಹಾಗಾಗಿ ಆಚಾರ್ಯರು ಹೆಚ್ಚು ಹೆಚ್ಚು ಅಂತರ್ಮುಖಿಗಳಾಗತೊಡಗಿದರು. ದಿನನಿತ್ಯದ ಬಹುಭಾಗ ಅಧ್ಯಯನ, ಅಧ್ಯಾಪನ ಮತ್ತು ಗ್ರಂಥ ರಚನೆಗೆ ಮೀಸಲಾಯಿತು. ಇದರೊಂದಿಗೆ ಸಜ್ಜನರ ಅಪೇಕ್ಷೆಯಂತೆ ಭಾಗವತಾದಿ ಪುರಾಣ ಪ್ರವಚನಗಳನ್ನು ನಡೆಸುತ್ತಾ ತಮ್ಮ ಸ್ವಗ್ರಾಮವಾದ ಹಾನಗಲ್ಲು, ಶಿರಗುಪ್ಪ, ಬಳ್ಳಾರಿ, ಜಮಖಂಡಿ ಮುಂತಾದ ಸ್ಥಳಗಳಲ್ಲಿ ನೆಲೆಸಿದ್ದ ವೈಷ್ಣವ ವೃಂದದಲ್ಲಿ ಅಪೂರ್ವ ಧಾರ್ಮಿಕ ಪ್ರಜ್ಞೆಯನ್ನು ವಾದಿರಾಜಾಚಾರ್ಯರು ಮೂಡಿಸಲಾರಂಭಿಸಿದರು.

## ಹರಿದಾಸ ದೀಕ್ಷೆ

ದಾಸಸಾಹಿತ್ಯ ನಿಷ್ಣಾತರಾಗಿದ್ದ ತಂದೆಯವರ ಪ್ರಭಾವದಿಂದ ಆಚಾರ್ಯರಿಗೆ ಹರಿದಾಸ ಸಾಹಿತ್ಯದಲ್ಲಿ ಬಾಲ್ಯದಿಂದಲೂ ಅಪರಿಮಿತವಾದ ಒಲವಿತ್ತು. ವಾಯಿ ಶ್ರೀನಿವಾಸಾಚಾರ್ಯರಲ್ಲಿ ಮತ್ತು ಕೃಷ್ಣಾಪುರ ಶ್ರೀಗಳಾದ ವಿದ್ಯಾಧೀಶತೀರ್ಥರಲ್ಲಿ ಶಾಸ್ತ್ರ ವ್ಯಾಸಂಗ

ಮಾಡುತ್ತಿದ್ದಾಗ ಅವರು ಶ್ರೀಜಗನ್ನಾಥದಾಸರ 'ಹರಿಕಥಾಮೃತಸಾರ' ಗ್ರಂಥವನ್ನು ನಿತ್ಯ ಪಾರಾಯಣ ಮಾಡುವ ಕ್ರಮವನ್ನು ಇಟ್ಟು ಕೊಂಡಿದ್ದರೂ. ಹರಿದಾಸ ಸಾಹಿತ್ಯವನ್ನು ಗಂಭೀರವಾಗಿ ಪರಿಗಣಿಸಿ ಅದನ್ನು ಆಳವಾಗಿ ಅಭ್ಯಾಸ ಮಾಡುವ ಸದವಕಾಶ ದೊರಕಿರಲಿಲ್ಲ. 'ಸುಧಾ ಓದಿ ಪದ ನೋಡು' ಎನ್ನುವ ನಾಣ್ನುಡಿಯಂತೆ ಶಾಸ್ತ್ರವೇತ್ತರಾದ ಆಚಾರ್ಯರಿಗೆ ಹರಿದಾಸ ಸಾಹಿತ್ಯವನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡುವ ಹಂಬಲ ಈಗ ತುಂಬಿ ಬಂದಿತು. ಅದಕ್ಕೆ ಸೂಕ್ತವಾದ ಅವಕಾಶವೂ ಲಭ್ಯವಾಯಿತು. ಆಚಾರ್ಯರು ಶ್ರದ್ಧೆಯಿಂದ ಹರಿದಾಸರ ಸುಳಾದಿ, ಉಗಾಭೋಗ ಮತ್ತು ಕೀರ್ತನೆಗಳನ್ನು ಪ್ರತಿನಿತ್ಯ ಅತೀವ ಶ್ರದ್ಧೆಯಿಂದ ಹೇಳಿಕೊಳ್ಳತೊಡಗಿದರು.

ದಾಸ ಸಾಹಿತ್ಯವನ್ನು ಅಭ್ಯಾಸ ಮಾಡುತ್ತಿದ್ದಂತೆಲ್ಲಾ ಆಚಾರ್ಯರ ಮನಸ್ಸು, ಪಾಂಡಿತ್ಯದಿಂದ ಪರಿಪೂರ್ಣವಾಗಿ ಅರಳಿದ ಪುಷ್ಪಕ್ಕೆ ಭಕ್ತಿ ಯೆಂಬ ಪರಿಮಳವನ್ನು ಲೇಪಿಸಿದಂತೆ ಪ್ರಫುಲ್ಲವಾಯಿತು. ಸಕಲ ಶಾಸ್ತ್ರಸಾರವನ್ನು ಬಲ್ಲವರಾಗಿದ್ದ ಕಾರಣ ಅಪರೋಕ್ಷ ಜ್ಞಾನಿಗಳಾದ ಹರಿದಾಸರ ನುಡಿಮುತ್ತುಗಳು ನೇರವಾಗಿ ಹೃದಯವನ್ನೇ ಹೊಕ್ಕು ಹೃತ್ಪ್ರಭೆಯನ್ನು ಮತ್ತಷ್ಟು ಪ್ರಜ್ವಲಗೊಳಿಸಿ ನೀಲಮೇಘಶ್ಯಾಮನ ಗುಣಾವಳಿಗಳೆಂಬ ನೀಲಾಕಾಶದಲ್ಲಿ ಭಗವತ್ಪ್ರೇಮದ ರೆಕ್ಕೆಗಳೊಂದಿಗೆ ಹಕ್ಕಿಯಂತೆ ಸ್ವಚ್ಛಂದವಾಗಿ ಹಾರಾಡುವಂತೆ ಮಾಡಿಬಿಟ್ಟವು. ಈ ಹಂತದಲ್ಲಿಯೇ ಆಚಾರ್ಯರಿಗೆ ತಾವೂ ಹರಿದಾಸರಾಗಿ ನೀತಗುರು ಗಳಿಂದ ಅಂಕಿತೋಪದೇಶವನ್ನು ಪಡೆದುಕೊಳ್ಳಬೇಕೆಂಬ ಹೆಬ್ಬಯಕೆ ಒಡ ಮೂಡಿರಬೇಕು. "ಕೆರೆಯ ನೀರನು ಕೆರೆಗೆ ಚೆಲ್ಲಿ" ಎಂಬಂತೆ ಭಗವದನು ಗ್ರಹದಿಂದ ಪ್ರಾಪ್ತವಾದ ತಮ್ಮ ಬದುಕಿನ ಸಾರಸರ್ವಸ್ವವನ್ನು ಭಗವದರ್ಪಣ ಮಾಡಿ, ಸಮಸ್ತ ಠಾವಿನಲ್ಲೂ ವಿವಿಧ ರೂಪಗಳಿಂದ ತನ್ನ ಪರಿವಾರಸಹಿತ ವ್ಯಾಪ್ತನಾಗಿ ವಿವಿಧ ವ್ಯಾಪಾರಗಳನ್ನು ಆಯಾ ಜೀವಿಯ ಕರ್ಮಾನುಸಾರ ತಾನೇ ಮಾಡಿ, ಮಾಡಿಸುತ್ತಾ ನಿರ್ಲಿಪ್ತನಾಗಿರುವ ಸರ್ವಬಿಂಬನೂ ಆದ ಸ್ವಬಿಂಬಮೂರ್ತಿಯ ದರ್ಶನ ಸುಖವನ್ನು

ಅನವರತವೂ ಅನುಭವಿಸಬೇಕೆಂದು ಆಚಾರ್ಯರು ಕಾತರಿಸ ತೊಡಗಿದರು.

ಹರಿದಾಸನಾಗಬೇಕಾದರೆ ಭಗವಂತನ ಕೃಪೆಯಾಗಬೇಕು. ಕೇವಲ ಪುಸ್ತಕ ಪಾಂಡಿತ್ಯದಿಂದ ಭಗವತ್ಕೃಪೆಯನ್ನು ಪಡೆಯಲು ಸಾಧ್ಯವಾಗದು. ಪಾಂಡಿತ್ಯಕ್ಕೆ ನಿಲುಕದ ಮೇರುಸದೃಶ ಜ್ಞಾನವನ್ನು ಸಂಪಾದಿಸಬೇಕು. 'ಹಾದಿ ದೊರೆಯದೋ ಬುಧರ ಪಾದ ನಂಬದೇ' ಎನ್ನುವಂತೆ ನೀತಗುರುಗಳ ಒಲುಮೆಗೆ ಪಾತ್ರನಾಗಿ ಅವರಿಂದ ಅಂಕಿತ ಪ್ರಾಪ್ತಿಯಾಗಬೇಕು. ಇದಲ್ಲದೆ ಅನ್ಯಮಾರ್ಗವಿಲ್ಲ. ಹಾಗಿಲ್ಲದಿದ್ದರೆ ಕಲ್ಲೂರ ಸುಬ್ಬಣ್ಣಾಚಾರ್ಯ, ಮಾನವಿ ಶ್ರೀನಿವಾಸಾಚಾರ್ಯರಂತಹ ಸುಧಾ ಪಾಠೀಕರು, ಪಂಡಿತಾಗ್ರಣಿಗಳು ಲೋಕದ ದೃಷ್ಟಿಯಲ್ಲಿ ಕ್ರಮಬದ್ಧವಾಗಿ ಶಾಸ್ತ್ರಾಭ್ಯಾಸವನ್ನೇ ಮಾಡಿರದ ಶ್ರೀವಿಜಯದಾಸರಿಗೆ ಶರಣಾಗಿ ಅವರಿಂದ ಉಪದಿಷ್ಟರಾಗುತ್ತಿರಲಿಲ್ಲ. ಅವರನ್ನು ಕುರಿತು ಹಾಡುಗಳನ್ನು ಕಟ್ಟಿ ಹೊಗಳುತ್ತಿರಲಿಲ್ಲ. "ಅಂಕಿತವಿಲ್ಲದ ದೇಹ ನಿಷಿದ್ಧ; ಅಂಕಿತವಿಲ್ಲದ ಕಾರ್ಯ ಶೋಭಿಸದು; ಅಂಕಿತವಿಲ್ಲದಿರಬಾರದು". ಆದರೆ ನೀತಗುರುಗಳಿಂದ ಅಂಕಿತೋಪದೇಶ ಪಡೆಯುವುದು ಸುಲಭದ ಮಾತಲ್ಲ. 'ದಾಸನಾಗುವುದು ಏಸು ಜನುಮದ ಸುಕೃತ' ಎಂಬಂತೆ ಹಲವಾರು ಜನುಮಗಳ ಪುಣ್ಯರಾಶಿ; ಹಲವಾರು ಜನುಮಗಳ ಜಪ, ತಪ, ಸಾಧನೆ; ಹಲವಾರು ಜನುಮಗಳಲ್ಲಿ ಮಾಡಿದ ಹಲಧರಾನುಜನ ಪೂಜಾಫಲ; ಅಲವಬೋಧರ ಕೃಪಾಬಲ – ಇವೆಲ್ಲಾ ಮಿಳಿತಗೊಂಡಿದ್ದರೆ ಮಾತ್ರ ಗುರುಮುಖೇನ ಅಂಕಿತೋಪದೇಶ ಸಾಧ್ಯ ಎಂದೆಲ್ಲಾ ವಿಚಾರ ಮಾಡುತ್ತಾ ಆಚಾರ್ಯರ ಮನಸ್ಸು ತಲ್ಲಣಗೊಂಡಿತು. ಕಡೆಗೆ ಅವರು ತದೇಕಚಿತ್ತದಿಂದ ತಮ್ಮ ಇಷ್ಟ ಗುರುಗಳಾದ ಶ್ರೀವಾದಿರಾಜರ ಅಂತರ್ಯಾಮಿ ಶ್ರೀಲಕ್ಷ್ಮೀಹಯಾಸ್ಯನ ಪಾದಾರವಿಂದಗಳನ್ನೇ ಮೊರೆಹೊಕ್ಕರು.

'ಪಿತೃಮಾತ್ರನಭಿಮಾನೀ ಚೇದ್ಭಾರ್ಯಾವತ್ ಸವತ್ಸಲಃ।
ನ ಚೇತ್ಕಿಂ ಬಹುನೋಕ್ತೇನ ಗುರುರಾಜಪ್ರಿಯಂಕರ॥

ಚೇದೇವಾದಧಃಪತಿಷ್ಯಾಮಿ ನರಕೇ ಭೃಶದಾರುಣೇ ।
ತಾಸ್ಮಾತ್ ಕಮಲನೇತ್ರ ತ್ವಂ ಮಾಮುದ್ಧರ ಸುಪಾಪಿನಮ್ ॥'

"ನಾನು ಈ ಸ್ಥಿತಿಯಲ್ಲಿಯೇ ಇದ್ದರೆ ನರಕಕ್ಕೆ ಬೀಳುವುದು ಖಂಡಿತ. ಆದ್ದರಿಂದ ಭಕ್ತಾನುಕಂಪಿಯಾದ ನೀನು ಕೃಪೆಯಿಟ್ಟು ಪ್ರಸನ್ನತೆಯಿಂದ ಈಕ್ಷಿಸಿ, ಪಾಪಿಯಾದ ನನ್ನನ್ನು ಉದ್ಧರಿಸು" ಎಂದು ಪರಿಪರಿಯಾಗಿ ಪ್ರಾರ್ಥಿಸತೊಡಗಿದರು. ಸ್ವತಃ ಕವಿಗಳಾಗಿದ್ದುದರಿಂದ ಅತ್ಮವಿಶ್ಲೇಷಣೆಯ ಉತ್ಕಟ ಕ್ಷಣಗಳಲ್ಲಿ ಒಡಮೂಡಿದ ಭಾವಗಳೆಲ್ಲವೂ ಲಯಬದ್ಧವಾದ ಸ್ತೋತ್ರಗಳಾಗತೊಡಗಿದವು. ಗುರ್ವಂತರ್ಗತನ ಅನುಗ್ರಹವನ್ನು ಪಡೆಯಲು ತೊಡಕಾಗಿರುವ ಅಹಂಕಾರದ ತೆರೆಯನ್ನು ಸರಿಸಲೆಂದೇ ಪ್ರಕಟವಾದ ಈ ಸ್ತುತಿಪುಷ್ಪಗಳು ಅಂತರಂಗದ ಕದವನ್ನು ಪ್ರಾಮಾಣಿಕವಾಗಿ ತೆರೆದಿಟ್ಟ ಭಕ್ತಹೃದಯದ ಸಾರ್ವತ್ರಿಕ ಪ್ರಾರ್ಥನೆಯಾಗಿಯೂ ಗಮನಸೆಳೆಯುತ್ತವೆ[1].

---

1. ಶ್ರೀಹಯಾಸ್ಯಂ ಚ ಯೋ ದಧ್ರೇ ಕಮಲಾಲಿಂಗಿತಂ ಪ್ರಭುಮ್ ।
ಗುರುರಾಜಂ ಋಜುಶ್ರೇಷ್ಠಂ ಭಜೇ ಭವವಿಮುಕ್ತಯೇ ॥
ಕಮಲಾಕ್ಷಲಸದ್ಧಾರಸರಗ್ರೀವ ಸುರಪ್ರಿಯ ।
ವಿಕಸದ್ವಕ್ಷಶ್ರೀವಕ್ಷಃ ಪ್ರಿಯಭಕ್ತ ಸುರಕ್ಷಕ ॥
ಹೇ ಸಂಪುಟೀಕೃತಕರ ಸುಂದರಂ ಬಾದರಾಯಣಂ ।
ಜಟಾದೀಧಿತಿಭೀರಾಜನ್ಮಸ್ತಕಂ ಸುಪ್ರಶಸ್ತಕಮ್ ॥
ದರಾಕ್ಷಪುಸ್ತಕಬೋಧೇತಹಸ್ತದ್ವಂದ್ವವಿರಾಜಿತಮ್ ।
ಗುರುಸ್ತವನಮಾರ್ಗೇಣ ವಿಜ್ಞಪ್ತಂ ಚೇಂದಿರಾಧವಮ್ ॥
ಹೇ ವಾದಿರಾಜ ಸುಗುರೋ ಪಾಪಿನಂ ಮಾಂ ನ ಮೋಚಯಃ ।
ಹರೀ ಕ್ರೋಧೀ ದಯಾಶೂನ್ಯಃ ಪರಶ್ರೇಯೋ ವಿಹಿಂಸಕಃ ॥
ಸದಾ ನಿಷ್ಠುರಭಾಷೀ ಚ ದುರ್ವೃತ್ತೋ ದುಷ್ಟಸಂಗವಾನ್ ।
ದುರಾಲೋಚನವಾನ್ ಕ್ರೂರೋ ಹಿಂಸಾನಿರತ ಏವ ಚ ॥
ಲುಪ್ತಸಂಧ್ಯಾಕ್ರಿಯಃ ಶ್ರೀಶಪೂಜಾದೂರೋ ಮಮ ಪ್ರಭೋ ।
ಉದರಂಭರಣೇ ದೀಕ್ಷಾ ಯಸ್ಯ ನಿತ್ಯಂ ಪ್ರವರ್ಧತೇ ॥

– ಆಚಾರ್ಯರ ಆತ್ಮಕಥನದಲ್ಲಿ ಬರುವ
ಆತ್ಮನಿವೇದನೆಯ ಕೆಲವು ಶ್ಲೋಕಗಳು.

'ಪ್ರತಿ ದಿವಸ ತನ್ನಂಘ್ರಿ ಸೇವಾರತ ಮಹಾತ್ಮರು ಮಾಡುತಿಹ ಸಂಸ್ತುತಿಗೆ ವಶನಾಗುವ' ಸಾಮಸನ್ನುತ ಸಕಲಗುಣಗಣಧಾಮ ಶ್ರೀಜಗನ್ನಾಥವಿಠಲ ತನ್ನ ಭಕ್ತಾಗ್ರಣಿಯಾದ ಆಚಾರ್ಯರ ಮನದಿಚ್ಛೆಯನ್ನು ಪೂರೈಸದಿರುವನೇ? ಬಿಂಬೋಪಾಸನೆಗೆ ಇಂಬು ತೋರೆಂದು ತುಂಬುಹಂಬಲದಿಂದ ಮನದುಂಬಿ ಪ್ರಾರ್ಥಿಸುತ್ತಾ, ಹರಿಕಥಾಮೃತಸಾರ ಸುಧಾಸಾಗರದಲ್ಲಿ ಸದಾ ಮೀನಾಗಿ ಕ್ರೀಡಿಸುತ್ತಿದ್ದ ಆಚಾರ್ಯರಿಗೆ ಕ್ಷಿಪ್ರದಲ್ಲಿ ಭಗವದನುಗ್ರಹವಾಯಿತು. ನೀತಗುರುಗಳ ದ್ವಾರಾ **'ಇಭವರದ ವಿಠಲ'** ಎಂಬ ಅಂಕಿತ ಪ್ರಾಪ್ತವಾಯಿತು[1].

ಜಂಬುಖಂಡಿ ವಾದಿರಾಜಾಚಾರ್ಯರಿಗೆ ಅಂಕಿತೋಪದೇಶ ನೀಡಿದ ಗುರುಗಳು ಯಾರು? ಎಂಬುದರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಈ ವಿಷಯದಲ್ಲಿ ಯಾವುದೇ ಲಿಖಿತ ದಾಖಲೆಗಳಿಲ್ಲದಿರುವುದರಿಂದ ಒಬ್ಬೊಬ್ಬರೂ ಒಬ್ಬೊಬ್ಬ ದಾಸರ ಹೆಸರನ್ನು ಹೇಳಿ ಅವರೇ ಆಚಾರ್ಯರ ಗುರುಗಳೆಂದು ತರ್ಕಿಸುತ್ತಾರೆ. ಆಚಾರ್ಯರು ತುಂಬ ಗೌರವ ಭಾವನೆಯಿಂದ ಕಾಣುತ್ತಿದ್ದ ಶ್ರೀಶಪ್ರಾಣೇಶವಿಠಲಾಂಕಿತ ಲಿಂಗಸೂಗೂರು ಶ್ರೀರಾಮದಾಸರಿಂದ ಅಂಕಿತೋಪದೇಶ ಪಡೆದಿರಬಹುದೆಂದು ಒಬ್ಬರು ಹೇಳಿದರೆ; ಮತ್ತೊಬ್ಬರು ರಾಮದಾಸರು 'ಕಂಡು ಧನ್ಯನಾದೆನೋ ಸಿರಿ ಮಂಗಳಾತ್ಮರ' ಎಂದು ಆಚಾರ್ಯರನ್ನೇ ಸ್ತೋತ್ರ ಮಾಡಿರುವ ಕಾರಣ ನೀಡಿ ದಾಸರು ಆಚಾರ್ಯರ ಗುರುಗಳೆಂಬ ಅಭಿಪ್ರಾಯವನ್ನು ನಿರಾಕರಿಸುತ್ತಾರೆ. ಆದರೆ ನಮ್ಮ ಪರಂಪರೆಯಲ್ಲಿ ಗುಣಗ್ರಾಹಿಗಳಾದ ಗುರುಗಳು ತಮ್ಮ ಶಿಷ್ಯರ ಮಹಿಮೋತ್ಕರ್ಷವನ್ನು ಕೊಂಡಾಡಿರುವ ಉದಾಹರಣೆಗಳು ಸಾಕಷ್ಟಿವೆ. ವ್ಯಾಸದಾಸ ಸಾಹಿತ್ಯದ ದಿಗ್ಗಜರಾಗಿದ್ದ ಶ್ರೀಪಾದರಾಜರು ತಮ್ಮ ಶಿಷ್ಯೋತ್ತಮರಾದ ಶ್ರೀವ್ಯಾಸರಾಜರನ್ನು 'ಸಾಸಿರಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸಮುನಿರಾಯರ ಸನ್ನ್ಯಾಸದಿರವ' ಎಂದು ಶ್ಲಾಘಿಸಿದ್ದರೆ; ಶ್ರೀವ್ಯಾಸರಾಜರು ತಮ್ಮ ಪ್ರಥಮ

1. ಕೆಲವರು ಆಚಾರ್ಯರ ಅಂಕಿತವನ್ನು 'ಶ್ರೀವಿಭಾವನಾವಿಠಲ' ಎಂಬುದಾಗಿಯೂ ಹೇಳುತ್ತಾರೆ.

ಗೃಹಸ್ಥ ಶಿಷ್ಯರೂ, ದಾಸಶ್ರೇಷ್ಠರೂ ಆದ ಶ್ರೀಪುರಂದರ ದಾಸರನ್ನು 'ದಾಸರೆಂದರೆ ಪುರಂದರ ದಾಸರಯ್ಯಾ' ಎಂದು ಹಾಡಿ ಹೊಗಳಿದ್ದಾರೆ. ಹಾಗಾಗಿ ಹೆಳವರಾಗಿದ್ದ ತಮ್ಮನ್ನು ಅಪರಿಮಿತ ಪೂಜ್ಯ ಭಾವನೆಯಿಂದ ಹೆಗಲ ಮೇಲೆ ಕೂಡಿಸಿಕೊಂಡು "ನಮ್ಮ ದೇವರು, ನಮ್ಮ ದೇವರು" ಎಂದು ಹೊತ್ತು ತಿರುಗುತ್ತಾ ಮೆರೆಸುತ್ತಿದ್ದ ಮಂಗಳಾತ್ಮರಾದ ಜಂಬುಖಂಡಿ ಆಚಾರ್ಯರನ್ನು ಲಿಂಗಸೂಗೂರು ರಾಮದಾಸರು 'ಶ್ರೀಶಪ್ರಾಣೇಶವಿಠಲ ಹೃದಯಾಕಾಶದಲ್ಲಿ ಸಿರಿಸಹಿತ ವಾಸವಾಗಿ ತೋರಿ ಪೊಳೆವ ಭಾಸುರ ಕೀರ್ತಿಲಿ ಮೆರೆವವರನ್ನ' ಎಂದು ಎದೆ ತುಂಬಿ ಕೊಂಡಾಡಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಆಚಾರ್ಯರು ತಾವು ಹರಿಕಥಾಮೃತಸಾರಕ್ಕೆ ಬರೆದ 'ಭಾವಸೂಚನೆ' ಎಂಬ ವ್ಯಾಖ್ಯಾನದಲ್ಲಿ 'ಹರಿಕಥಾಮೃತಸಾರಾವತಾರಿಕಾ ಮಂಜೂಷಾಯಾಂ ಕಮಲಾಪತಿದಾಸವರ್ಯೈಃ' ಎಂದು ಪ್ರತಿಸಂಧಿಯಲ್ಲೂ ಅವತಾರಿಕೆ ಗಳನ್ನು ಕೊಟ್ಟು ಶ್ರೀಕಮಲಾಪತಿ ವಿಠಲರು ರಚಿಸಿರುವ ಭಾಮಿನೀ ಶೈಲಿಯ ಪದ್ಯಗಳನ್ನು ಉಲ್ಲೇಖಿಸುತ್ತಾ, ದಾಸರ ಅಭಿಪ್ರಾಯಗಳನ್ನು ಗೌರವಿಸಿರುವುದರಿಂದ ಆಚಾರ್ಯರು ಶ್ರೀಜಗನ್ನಾಥದಾಸರ ಪೀಳಿಗೆ ಯಲ್ಲಿ ಬಂದ ಕಮಲಾಪತಿವಿಠಲದಾಸರಿಂದ ಅನುಗ್ರಹೀತರಾಗಿರ ಬಹುದೆಂಬ ಅಭಿಪ್ರಾಯವೂ ಇದೆ.

'ಧೀರ ಕೃಷ್ಣಾಪುರ ಯತಿಗಳ
ಚಾರುಚರಣಸರೋಜ ಯುಗಕೆ
ಸ್ಥೈರ್ಯಮನದಿಂ ನಮಿಸುವೆ ಸಮ್ಯಗ್‌ಜ್ಞಾನಪ್ರದರೆಂದು।
ಸರಸವಾಕ್ಯಗಳೋದಿ ತಿಳಿಯದ
ಮರುತಶಾಸ್ತ್ರದ ಮರ್ಮವರಿಯದ
ಕರುಣಿ ಕಮಲಾಪತಿಯ ದಾಸನ ಕರುಣದೊಳು ನಿಂತು।
ಹರಿಕಥಾಮೃತಸಾರ ಗ್ರಂಥಕೆ
ಹರಿಯು ಬರೆಸಿದ ಭಾವದರ್ಪಣ
ವರಗುಣಾಢ್ಯರು ನೋಡಿ ನಿರುತದಿ ಕರುಣಮಾಡುವರು।'

ಎಂದು ದಾಸರು ರಚಿಸಿರುವ ಶ್ರೀಹರಿಕಥಾಮೃತಸಾರದ ವ್ಯಾಖ್ಯಾನವಾದ 'ಭಾವದರ್ಪಣ'ದ ಈ ಮಂಗಳಾಚರಣೆಯ ಪಂಕ್ತಿಗಳನ್ನು ನೋಡಿದರೆ ಕಮಲಾಪತಿದಾಸರು ಉಡುಪಿ ಕೃಷ್ಣಾಪುರಮಠದ ಶ್ರೀಗಳವರಲ್ಲಿ ಅಧ್ಯಯನ ಮಾಡಿದ್ದರೆಂದು ತಿಳಿದು ಬರುತ್ತದೆ. ಹಾಗಾಗಿ ಕಮಲಾಪತಿ ದಾಸರಿಗೆ ಕೃಷ್ಣಾಪುರಾಧೀಶರಲ್ಲಿಯೇ ವಿದ್ಯಾರ್ಜನೆ ಮಾಡಿದ ಜಂಬುಖಂಡಿ ಆಚಾರ್ಯರೊಂದಿಗೆ ನಿಕಟ ಸಂಪರ್ಕವೇರ್ಪಟ್ಟಿರ ಬಹುದು. ಸಂತೆಬೆನ್ನೂರಿನವರಾದ ಇವರ ಲೌಕಿಕನಾಮಧೇಯವೂ ಸಹ ರಾಮಾಚಾರ್ಯ ಅಥವಾ ರಾಮರಾಯರು ಎಂಬುದಾಗಿಯೇ ಇದ್ದಿತು. ಶ್ರೀಜಗನ್ನಾಥದಾಸರ ಪೀಳಿಗೆಯಲ್ಲಿ ಬಂದ ಸುರಪುರದ ಶ್ರೀಆನಂದ ದಾಸರ ಶಿಷ್ಯರಾದ ಇವರಿಗೆ ಶ್ರೀಜಗನ್ನಾಥ ದಾಸವರ್ಯರಲ್ಲಿ ಅಪರಿಮಿತವಾದ ಭಕ್ತಿ. ದಾಸರನ್ನು ಪರಿಪರಿಯಾಗಿ ಕೊಂಡಾಡಿ ಹಲವಾರು ಕೃತಿಗಳನ್ನು ರಚಿಸಿರುವ ಕಮಲಾಪತಿ ವಿಠಲರು ಶ್ರೀಜಗನ್ನಾಥದಾಸರು ಮಾನವಿಯ ತಮ್ಮ ಮನೆಯಲ್ಲಿ ಕಂಭವೊಂದರಲ್ಲಿ ಸನ್ನಿಹಿತರಾಗಿರುವ ಕಾರಣವನ್ನು ಹೀಗೆ ಬಿಚ್ಚಿಡುತ್ತಾರೆ.

'ಅಂಬುಜಾಕ್ಷಿ ಸ್ತಂಭದಿಹರ್‍ಯಾಕೆ। ಯಾರೇ। ಸಾರೇ।
ಫುಲ್ಲಲೋಚನೆ ಬಲ್ಲೆಯಾ ಇವ। ರಲ್ಲಿರುವ ಕಾರಣವಿದೇನೇ।
ಫುಲ್ಲನಾಭನ ಹುಡುಕಲು।
ಪ್ರಹ್ಲಾದನನುಜ ಸಹ್ಲಾದರಿವರೇ ॥'

'ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಲು ಕಂಭದಲ್ಲಿ ಪ್ರಕಟವಾದ ಶ್ರೀನರಸಿಂಹ ದೇವರನ್ನು ಹುಡುಕಲಿಕ್ಕಾಗಿಯೇ ಪ್ರಹ್ಲಾದನ ಸಹೋದರರೂ, ನರಸಿಂಹೋಪಾಸಕರೂ ಆದ ಸಹ್ಲಾದಾಂಶಸಂಭೂತ ಶ್ರೀಜಗನ್ನಾಥದಾಸ ರಾಯರು ಕಂಭದಲ್ಲಿ ಸನ್ನಿಹಿತರಾಗಿರುವರೆ'ಂಬ ಇಲ್ಲಿನ ಉತ್ಪ್ರೇಕ್ಷಾಲಂಕಾರದ ಸೊಗಸು ತುಂಬಾ ಹೃದ್ಯವಾಗಿ ಒಡಮೂಡಿದೆ. ಇದೇ ತರಹದ 'ಹರಿಕಥಾಮೃತಸಾರದ ಫಲಶ್ರುತಿ'ಯಲ್ಲಿ 'ಹರಿಕಥಾಮೃತಸಾರ' ಎಂಬ ಅಷ್ಟಾಕ್ಷರವನ್ನು ನುಡಿದ ಮಾತ್ರಕ್ಕೆ ಸಿಕ್ಕುವ ಫಲವನ್ನು ಅವರು ನುಡಿಯ ಹಂದರದಲ್ಲಿ ಹೀಗೆ ಕಮನೀಯವಾಗಿ ಹಿಡಿದಿಡುತ್ತಾರೆ.

ಹ ಯೆನಲು ಹರಿಯೊಲಿವನು
ರಿ ಯೆನಲು ರಿಕ್ತತ್ವ ಹರಿಸುವ
ಕ ಯೆನಲು ಕತ್ತಲೆಯೆಂಬಾ ಜ್ಞಾನವು ಪರಿಹರಿಪಾ।
ಥಾ ಯೆನಲು ಸ್ಥಾಪಿಸುವ ಜ್ಞಾನ
ಮೃ ಯೆನಲು ಮೃತಿಜನಿಯ ಬಿಡಿಸುವ
ತ ಯೆನಲು ಹರಿ ತನ್ನ ಮೂರ್ತಿಯ ತೋರುವ ನಿತ್ಯಾ॥
ಸಾ ಯೆನಲು ಸಾಧಿಸುವ ಮುಕ್ತೀ
ರ ಯೆನಲು ರತಿಯಿತ್ತು ರಮಿಪನು
ಕಾಯ ವಾಙ್ಮನದೆಂತು ಅಕ್ಷರ ನುಡಿದರದರೊಳಗೇ।
ಶ್ರೀಯರಸು ವಿಶ್ವಾದಿ ಅಷ್ಟೈ–
ಶ್ವರ್ಯ ರೂಪದಿ ನಿಂತು ತಾ ಪರ–
ಕೀಯನೆನಿಸದೆ ಇವನ ಮನದೊಳು ರಾಜಿಪನು ಬಿಡದೇ॥

ಪಂಡಿತರಾದ ಶ್ರೀಪಂಢರೀನಾಥಾಚಾರ್ಯ ಗಲಗಲಿಯವರು ತಾವು ರಚಿಸಿದ 'ಮಾಧ್ವವಾಙ್ಮಯ ತಪಸ್ವಿಗಳು' ಎಂಬ ಗ್ರಂಥದಲ್ಲಿ "ಕಮಲಾಪತಿ – ದಾಸರಿಗೆ ಗುರು ಕಮಲಾಪತಿವಿಠಲ, ರಮಾಪತಿವಿಠಲ, ಮಧ್ವೇಶ ವಿಠಲ, ಗಂಡೀಶವಿಠಲ, ಇಭವರದ ವಿಠಲ ಮುಂತಾದ ಅನೇಕ ಜನ ಶಿಷ್ಯರಿದ್ದು ಇವರಿಂದ ಅಂಕಿತ ಪಡೆದು ಹರಿದಾಸರಾಗಿ ಕನ್ನಡಮ್ಮನ ಉಡಿ ತುಂಬಿದ್ದಾರೆ" ಎಂದು ತಿಳಿಸಿದ್ದಾರೆ.

ಡಾ॥ ಅನಂತಪದ್ಮನಾಭರಾವ್ ಅವರು ತಾವು ರಚಿಸಿರುವ 'ಹತ್ತೊಂಬತ್ತನೆಯ ಶತಮಾನದ ಹರಿದಾಸ ಸಾಹಿತ್ಯ' ಎಂಬ ಸಂಶೋಧನಾತ್ಮಕ ಕೃತಿಯಲ್ಲಿ "ಶ್ರೀಶವಿಠಲರಿಂದ ಅಂಕಿತ ಪಡೆದವರಲ್ಲಿ ಗುರುಶ್ರೀಶವಿಠಲರು, ಸುರಪುರದ ಆನಂದದಾಸರು ಪ್ರಮುಖರು. ಸುರಪುರದ ಆನಂದದಾಸರು ಗಾಯನ, ನರ್ತನಗಳಿಂದ ರಾಜಮನ್ನಣೆ ಪಡೆದಿದ್ದರು. ಮಧುರಭಕ್ತಿ ಮತ್ತು ಶೃಂಗಾರದಿಂದ ಕೂಡಿದ ಕೀರ್ತನೆಗಳನ್ನು ಬರೆದವರು. ಇವರಿಗೆ ಅಪಾರ ಸಂಖ್ಯೆಯ ಸಂಗೀತ ಶಿಷ್ಯರು, ಹರಿದಾಸ ಶಿಷ್ಯರು ಇದ್ದರು. ದಾಸಸಾಹಿತ್ಯವನ್ನು ವ್ಯಾಪಕವಾಗಿ ಪ್ರಚಾರಮಾಡಿದ ಕಮಲಾಪತಿವಿಠಲರು ಇವರ ಹರಿದಾಸ ಶಿಷ್ಯರಾದರೆ,

ಕೀರ್ತನ ಮಾಧ್ಯಮದಲ್ಲಿ ಹಿರಿಯ ಹೆಸರು ಪಡೆದಿದ್ದ ಬೇಲೂರು ವೇಂಕಟಸುಬ್ಬದಾಸರು ಸಂಗೀತ ಶಿಷ್ಯರು. ಕಮಲಾಪತಿವಿಠಲರು ಹರಿಕಥಾಮೃತಸಾರಕ್ಕೆ 'ಭಾವದರ್ಪಣ' ಎಂಬ ಟೀಕೆಯನ್ನು ಬರೆದರು. ಇವರಿಗೆ ಹದಿನಾಲ್ಕು ಮಂದಿ ಶಿಷ್ಯರು. ಇವರಲ್ಲಿ ಪ್ರಮುಖರಾದ ಜಂಬುಖಂಡಿ ವಾದಿರಾಜಾಚಾರ್ಯರು (ಇಭವರದವಿಠಲ) ಭಾವ ದರ್ಪಣ ಟೀಕೆಯನ್ನು ವಿಸ್ತರಿಸಿ ಸಂಸ್ಕೃತದಲ್ಲಿ ಬರೆದರು" ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ.

ಇವೆಲ್ಲವನ್ನೂ ನೋಡಿದರೆ ಆಚಾರ್ಯರು ಕಮಲಾಪತಿವಿಠಲರಿಂದ ಅಂಕಿತೋಪದೇಶವನ್ನು ಪಡೆದಿರಬಹುದೆಂದು ತೋರುತ್ತದೆ. ಅಲ್ಲದೇ ಹರಿಕಥಾಮೃತಸಾರಕ್ಕೆ ಅವರು ರಚಿಸಿರುವ "ಭಾವಸೂಚನೆ" ಎಂಬ ಸಂಸ್ಕೃತ–ಕನ್ನಡ ಮಿಶ್ರಿತವಾದ ಟೀಕೆ ಗುರುಗಳಾದ ಕಮಲಾಪತಿದಾಸರ ಭಾವದರ್ಪಣದ ಹೆಜ್ಜೆ ಗುರುತುಗಳನ್ನನುಸರಿಸಿ ಮಾಡಿದ ವ್ಯಾಖ್ಯಾನವಾಗಿರಬಹುದೇ ಎನ್ನಿಸುತ್ತದೆ. ಕಮಲಾಪತಿವಿಠಲದಾಸರೂ ಸೇರಿದಂತೆ ಬೇಲೂರು ವೇಂಕಟಸುಬ್ಬದಾಸರು, ವಿಜಯಮೋಹನ ವಿಠಲದಾಸರು ಮುಂತಾದವರು ಕೃಷ್ಣಾಪುರ ಮಠಾಧೀಶರ ವಿದ್ಯಾಶಿಷ್ಯ ರಾಗಿದ್ದರೆಂಬ ಉಲ್ಲೇಖವೂ ಇದೆ[1].

ಇದಲ್ಲದೇ ಆಚಾರ್ಯರು ತಮ್ಮ ಹರಿಕಥಾಮೃತಸಾರ ವ್ಯಾಖ್ಯಾನಗಳ ಪ್ರತಿಸಂಧಿಯ ಅಂತ್ಯದಲ್ಲೂ 'ಶ್ರೀಸೋದೇಶಾನುಗ್ರಹೀತ ಜಂಬುಖಂಡಿ

---

1. 'ಉಡುಪಿಯ ಕೃಷ್ಣಾಪುರಮಠದ ಯತಿಗಳಲ್ಲಿ ಅನೇಕರು ಹರಿದಾಸ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದರು. 'ಸಮ್ಯಗ್‌ಜ್ಞಾನಪರರಾದ' ಕೃಷ್ಣಾಪುರದ ಯತಿಗಳು ಕಮಲಾಪತಿ ವಿಠಲದಾಸರಿಗೆ ವಿದ್ಯಾಗುರುಗಳು. ವರಾಹ ತಿಮ್ಮಪ್ಪ, ಶ್ರೀವತ್ಸಾಂಕಿತರು ವಿಬುಧೇಂದ್ರರ ಶಿಷ್ಯರಾಗಿದ್ದರು. ವಿದ್ಯಾತೀರ್ಥರು ನೆಕ್ಕರೆ ಕೃಷ್ಣದಾಸರ ಸಹಪಾಠಿಗಳು. ಬೇಲೂರು ವೇಂಕಟಸುಬ್ಬದಾಸರು, ವಿಜಯಮೋಹನವಿಠಲರು ವಿದ್ಯಾಧೀಶರ ಶಿಷ್ಯವರ್ಗಕ್ಕೆ ಸೇರಿದವರು".

– ಡಾ॥ ಅನಂತಪದ್ಮನಾಭರಾವ್

(ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ)

ಶ್ರೀನಿವಾಸಾಚಾರ್ಯಸೂನು ವಾದಿರಾಜವಿರಚಿತೇ' ಎಂದು ಅಭಿಮಾನದಿಂದ ಹೇಳಿಕೊಂಡಿರುವುದನ್ನು ನೋಡಿದರೆ ಸ್ವತಃ ದಾಸದೀಕ್ಷಾಪರರಾಗಿದ್ದ ತಂದೆಯವರೇ ಆಚಾರ್ಯರಿಗೆ ಅಂಕಿತೋಪದೇಶವನ್ನು ಮಾಡಿರಬಹುದೆಂಬ ಕೆಲವರ ಊಹೆಯನ್ನೂ ಉದಾಸೀನ ಮಾಡುವಂತಿಲ್ಲ.

ಆದರೆ ಆಗ ಜನಪ್ರಿಯರಾಗಿದ್ದ ಮತ್ತು ಚಿಪ್ಪಗಿರಿಯೇ ಮೊದಲಾದ ಪುಣ್ಯಕ್ಷೇತ್ರದಲ್ಲಿ ಆಚಾರ್ಯರನ್ನು ಪದೇ ಪದೇ ಭೇಟಿಯಾಗುತ್ತಿದ್ದ ಹೊನ್ನಾಳಿಯ ಶ್ರೀಭೀಮೇಶವಿಠಲದಾಸರೇ ಆಚಾರ್ಯರಿಗೆ ಅಂಕಿತೋಪದೇಶ ನೀಡಿದ ಗುರುಗಳೆಂಬುದು ಮತ್ತೆ ಕೆಲವರ ಅಭಿಪ್ರಾಯ ವೆನ್ನಬಹುದು. ಶ್ರೀಜಗನ್ನಾಥದಾಸರ ಪೀಳಿಗೆಯಲ್ಲಿಯೇ ಬಂದ ಶ್ರೀದವಿಠಲದಾಸರ ಶಿಷ್ಯರಾದ ಹೊನ್ನಾಳಿ ಶ್ರೀಭೀಮೇಶವಿಠಲದಾಸರಿಗೆ ಶ್ರೀಇಭವರದ ವಿಠಲ, ಶ್ರೀನಿವಾಸ ವಿಠಲ ಮತ್ತು ಗುರು ಶ್ರೀನಿವಾಸವಿಠಲ ಎಂಬ ಅಂಕಿತೋಪದೇಶ ಹೊಂದಿದ ಶಿಷ್ಯರಿದ್ದರೆಂಬುದಾಗಿ ತಿಳಿದು ಬರುತ್ತದೆ.

ಶ್ರೀಗುರುಗೋವಿಂದದಾಸರೂ ಸಹ ತಾವು ಬರೆದಿರುವ "ಹರಿಭಕ್ತ ವಿಜಯ ಭಾಗ–1" ರಲ್ಲಿ : "ಆಚಾರ್ಯರು ಯಾರಿಂದ ಅಂಕಿತೋಪದಿಷ್ಟರಾದರು ಎಂಬ ವಿಚಾರವು ವಿವಾದಾಸ್ಪದವಾಗಿರುತ್ತದೆ. ಕಮಲಾಪತಿದಾಸರಿಂದ ಉಪದಿಷ್ಟರಾದರೆಂದು ಕೆಲವರು, ಇನ್ನು ಕೆಲವರು ಹೊನ್ನಾಳಿಯ ದಾಸರಾದ ಭೀಮೇಶವಿಠಲರಿಂದ ಎಂತಲೂ ಹೇಳುತ್ತಾರೆ. ಲಿಂಗಸೂಗೂರು ವರದೇಂದ್ರ ಸಾಹಿತ್ಯ ಮಂಡಳಿಯವರಿಂದ ಪ್ರಕಟಿತವಾದ ಸಂಪುಟ–2 ಸಂಚಿಕೆ–1ರ ದಾಸರ ಪೀಳಿಗೆಯ ಪಟ್ಟಿಯಲ್ಲಿ ಭೀಮೇಶವಿಠಲ (ಹೊನ್ನಾಳಿದಾಸರು) ರಿಂದ ಅಂಕಿತಪ್ರದಾನವಾದಂತೆ ಕಾಣಿಸಿರುತ್ತಾರೆ. ಪ್ರಕಟನೆಯ ಸಂಪಾದಕರಾದ ಶ್ರೀಮಾನ್ ಗೋರೆಬಾಳು ಹನುಮಂತರಾಯರು ವಿಮರ್ಶಾತ್ಮಕ ದೃಷ್ಟಿಯಿಂದ ಗುರೂಪದಿಷ್ಟ ಅಂಕಿತಪದಗಳನ್ನೂ ಸಂಗ್ರಹಿಸಿ ಪೀಳಿಗೆಯನ್ನು ತಯಾರಿಸಿದ್ದಾರೆ. ಆದರೆ ಅವರ ಪಟ್ಟಿಯಲ್ಲಿ ಸಮಸ್ತ ದಾಸರ ಅಂಕಿತ ಪದಗಳು ದೊರೆತಿಲ್ಲವೆಂದು ಕಾಣುತ್ತೆ. ಈಗ್ಯೆ ಸುಮಾರು 1945ರಲ್ಲಿ ಪ್ರಕಟವಾಗಿದ್ದ ಸಂಚಿಕೆಯೊಂದರಲ್ಲಿ ಅಂಕಿತ

ಪದಗಳನ್ನು ಪ್ರಕಟಿಸಿದ್ದರೂ ಆ ಸಂಚಿಕೆಯು ಈಗ ಉಪಲಬ್ಧವಿಲ್ಲ. ಹೇಗಾದರೂ ಇರಲಿ, ಇದಕ್ಕಿಂತ ಪೂರ್ವಭಾವಿಯಾಗಿ ಶ್ರೀಕಮಲದಾನಿಯವರು ಮತ್ತು ಶ್ರೀಬೇಂದ್ರೆಯವರು ಪ್ರಕಟಿಸಿದ್ದನ್ನು ಶೋಧಿಸಿ ತಪ್ಪುಗಳನ್ನು ತಿದ್ದಿ ತಾವು ಸರಿಯಾದ ಪೀಳಿಗೆಯನ್ನು ಅಚ್ಚು ಹಾಕಿಸಿದ್ದೇವೆ ಎಂದು ಶ್ರೀಹನುಮಂತರಾಯರು ಬರೆದಿರುವ ವಚನಗಳಿಗೆ ಮಾನ್ಯ ಮಾಡಿ ನಮ್ಮ ಆಚಾರ್ಯರು ಶ್ರೀಭೀಮೇಶವಿಠಲದಾಸರಿಂದ ಅಂಕಿತೋಪದಿಷ್ಟರಾದರೆಂದು ಗ್ರಹಿಸಿ ಚರಿತ್ರೆಯನ್ನು ಮುಂದುವರೆಸುತ್ತೇವೆ" ಎಂಬ ನಿಲುವಿಗೆ ಬರುತ್ತಾರೆ.

ಈ ಎಲ್ಲಾ ಅಭಿಪ್ರಾಯಗಳೊಂದಿಗೆ ಶ್ರೀವಿಜಯದಾಸರಿಗೆ ಶ್ರೀಪುರಂದರದಾಸರು ಮತ್ತು ಮೊದಲುಕಲ್ಲು ಶೇಷದಾಸರಿಗೆ ಶ್ರೀವಿಜಯದಾಸರು ಸ್ವಪ್ನ ಮೂಲಕ ತೋರಿಕೊಂಡು ಉಪದೇಶಿಸಿದಂತೆ ಹರಿಗುರುಗಳ ಏಕಾಂತಭಕ್ತರೂ ಸದಾಚಾರಸಂಪನ್ನರೂ ಆದ ಜಂಬುಖಂಡಿ ಆಚಾರ್ಯರಿಗೆ ಭಕ್ತಾನುಕಂಪಿಗಳೂ, ಮಹಾಮಹಿಮರೂ ಆದ ಶ್ರೀವಿಜಯದಾಸರೋ ಅಥವಾ ಶ್ರೀಜಗನ್ನಾಥದಾಸರೋ ಸ್ವಪ್ನದ್ವಾರಾ ಕಾಣಿಸಿಕೊಂಡು 'ಶ್ರೀಇಭವರದವಿಠಲ' ಎಂಬ ಅಂಕಿತವಿತ್ತಿರಬಹುದೆಂಬ ಕೆಲವರ ತರ್ಕವನ್ನೂ ಸಹ ತಳ್ಳಿಹಾಕುವಂತಿಲ್ಲ.

ಆಚಾರ್ಯರ ಶಿಷ್ಯರಾದ ಶ್ರೀಶಪ್ರಸನ್ನ ಕೇಶವವಿಠಲಾಂಕಿತ ವಾಳವೇಕರ್ ಶ್ರೀಭೀಮಾಚಾರ್ಯರು ಗುರುಗಳನ್ನು ಕುರಿತು ತಾವು ರಚಿಸಿರುವ "ಮಾಧ್ವ ಗ್ರಂಥದಿ ಶೋಭಿಪ ಬುಧವರನ್ಯಾರೆ ಪೇಳಮ್ಮಯ್ಯಾ" ಎಂಬ ಕೀರ್ತನೆಯಲ್ಲಿ :

ಕಂಬುಧರನ ದಿವ್ಯನೃತ್ಯದಿ ಒಲಿಸುವನ್ಯಾರೇ ಪೇಳಮ್ಮಯ್ಯಾ।
ಬಿಂಬಜ್ಞಾನದಿ ಚೇತೋಹಲಹರನ್ಯಾರೇ ಪೇಳಮ್ಮಯ್ಯಾ।
ನಂಬಿದ ಜನರಿಗೆ ಅಂಬುಜಾಕ್ಷನ ತೋರುವ
ಶಂಬರಾರಿಜನಕ ಭಕ್ತಾಗ್ರಣಿ ಕಾಣಮ್ಮಯ್ಯಾ॥

ಎಂದು ಕೊಂಡಾಡಿರುವುದನ್ನು ನೋಡಿದರೆ ಆಚಾರ್ಯರು

ಬಿಂಬೋಪಾಸನೆಯಲ್ಲಿ ನಿಷ್ಣಾತರಾಗಿದ್ದರೆಂದು ತೋರುತ್ತದೆ. ಹಾಗಾಗಿ ಅಂಕಿತ ಪ್ರಾಪ್ತಿಯಾದ ನಂತರ ಅವರು ತಮಗೆ ಬಿಂಬಮೂರ್ತಿಯ ಇಂಬುತೋರುವ ಹರಿದಾಸ ದೀಕ್ಷೆಯನ್ನಿತ್ತ ಗುರುಗಳನ್ನೂ ಅವರ ಪೀಳಿಗೆಯ ಹಿರಿಯರನ್ನೂ ಕುರಿತು ತುಂಬು ಸಂಭ್ರಮದಿಂದ ಅನೇಕ ಕೃತಿಗಳನ್ನು ರಚಿಸಿರಬೇಕು. ಸಾಧನೆಯ ಸತ್ಪಥಕ್ಕೆ ಹಚ್ಚಿದ ಹರಿ, ಗುರುಗಳ ಉಪಕೃತಿಯನ್ನು ಸ್ಮರಿಸಿ ಮುಕ್ತಕಂಠದಿಂದ ಅವರ ಕಾರುಣ್ಯವನ್ನೂ, ಗುಣಮಹಿಮೆಗಳನ್ನೂ ಕೊಂಡಾಡಿರಬೇಕು. ಆದರೆ ನಮ್ಮ ದುರಾದೃಷ್ಟದಿಂದ ಅಂತಹ ಯಾವ ಕೃತಿಗಳೂ ಇಲ್ಲಿಯ ತನಕ ನಮಗೆ ದೊರಕಿಲ್ಲ. ಆಚಾರ್ಯರು ತಮ್ಮ ಲೌಕಿಕನಾಮದಿಂದ ಪ್ರಸಿದ್ಧರಾದಷ್ಟು ಅಂಕಿತನಾಮದಿಂದ ಆಗಲಿಲ್ಲ. ಅಲ್ಲದೆ ಹರಿಕಥಾಮೃತಸಾರಕ್ಕೆ ಆಚಾರ್ಯರು ರಚಿಸಿರುವ 'ಭಾವಸೂಚನೆ' ವ್ಯಾಖ್ಯಾನದ ಅರ್ಪಣಾಪದ್ಯಗಳ ಅಂತ್ಯದಲ್ಲಿ ಮಾತ್ರ 'ಶ್ರೀಇಭವರದವಿಠಲ' ಎಂಬ ಪ್ರಯೋಗವಿದ್ದರೂ ಲಭ್ಯವಿರುವ ಅವರ ಯಾವುದೇ ಕೃತಿಯಲ್ಲಿಯೂ ಸಹ ಈ ಅಂಕಿತ ಕಂಡುಬರುವುದಿಲ್ಲ. ಇದನ್ನು ಕುರಿತು ಶ್ರೀಗುರುಗೋವಿಂದದಾಸರು ಹೀಗೆ ಅಭಿಪ್ರಾಯ ಪಡುತ್ತಾರೆ. "ಆಚಾರ್ಯರಿಂದ ರಚಿತವಾಗಿ ನಮಗೆ ದೊರೆತ ನಾಲ್ಕು-ಐದು ಗ್ರಂಥಗಳಲ್ಲಿ ಭಾವಸೂಚನೆಯ ಅಂತ್ಯಮಂಗಳವನ್ನು ಬಿಟ್ಟರೆ, ಬೇರೆ ಯಾವ ಕಡೆಯೂ ಇಭವರದವಿಠಲಾಂಕಿತವಿಲ್ಲ. ಹೀಗಿರುವುದಕ್ಕೆ ಕಾರಣಗಳೂ ಉಂಟು. ಗುರುಗಳು ಅಂಕಿತನಾಮವನ್ನು ಉಪದೇಶಿಸಿರುವುದು ರಹಸ್ಯೋಪಾಸನೆಗೆ. ಈ ಕಾರಣದಿಂದ ಹೆಚ್ಚಿಗೆ ಪ್ರಕಟ ಮಾಡಿರಲಾರರು ಅಥವಾ ಪಂಡಿತಪ್ರಕಾಂಡರ ಗೋಷ್ಠಿಯಲ್ಲಿ ಸರ್ವದಾ ಇರತಕ್ಕವರೂ, ಯುಕ್ತಿಮಲ್ಲಿಕಾ, ಸುಧಾದಿಪ್ರೌಢ ಗ್ರಂಥನಿಷ್ಣಾತರಾಗಿ ಅವೈಷ್ಣವ ಮತಗಳನ್ನು ಖಂಡಿಸಿ ತುಂಡು ತುಂಡು ಮಾಡುತ್ತಿದ್ದು 'ಸುಧಾಯಾಮದ್ವಿತೀಯೋಽಸ್ಮಿ ಯಾದುಪತ್ಯೇ ವಿಶೇಷತಃ' ಎಂದು ಹೇಳಿಕೊಳ್ಳುತ್ತಿದ್ದ ಈ ಧೀರರು, ತಮ್ಮ ಲೌಕಿಕನಾಮದಿಂದಲೇ ಹೆಚ್ಚು ಪ್ರಸಿದ್ಧರಾದರು".

ಇದೇನೇ ಇರಲಿ, ಆಚಾರ್ಯರು ಅಂಕಿತಸ್ಥರಾಗಿ ಹರಿದಾಸರಾದರು. ಪಾಂಡಿತ್ಯದಿಂದ ವಿಕಸಿತಗೊಂಡಿದ್ದ ಸುಂದರಕುಸುಮ, ಹರಿದಾಸ ದೀಕ್ಷೆಯ ಸುಗಂಧ ಲೇಪನದಿಂದಾಗಿ ಅಪೂರ್ವ ಕಾಂತಿಯುಕ್ತವಾಯಿತು. ನಡೆದ ಸ್ಥಳ ಹರಿಮಂದಿರವಾಯಿತು. ನುಡಿದ ನುಡಿ ಹರಿಸ್ತವನವಾಯಿತು, ನೋಡಿದ ವಸ್ತು ಹರಿಮೂರ್ತಿಯೆನಿಸಿತು. ಅನುದಿನದ ಸಾಧನೆಯ ದಿಕ್ಕೇ ಬದಲಾಯಿತು. ಸಮಸ್ತವೂ ಶ್ರೀಇಭವರದವಿಠಲನ ಅಧೀನವೆಂಬ ಚಿಂತನವೇ ಅಧಿಕ ಸಾಧನವೆನ್ನಿಸಿತು.

## ಶ್ರೀಮದ್ಹರಿಕಥಾಮೃತಸಾರವ್ಯಾಖ್ಯಾನ

ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಕನ್ನಡದ ಹರಿದಾಸ ಸಾಹಿತ್ಯಕ್ಕೆ ಮತ್ತು ಇಡೀ ಆಸ್ತಿಕ ಸಮುದಾಯಕ್ಕೆ ನೀಡಿದ ಮಹತ್ತರವಾದ ಕೊಡುಗೆಯೆಂದರೆ ಶ್ರೀಜಗನ್ನಾಥದಾಸರಾಯರ ಮೇರು ಕೃತಿಯಾದ ಶ್ರೀಮದ್ಧರಿಕಥಾಮೃತಸಾರ ಗ್ರಂಥಕ್ಕೆ ಅವರು ರಚಿಸಿದ ಪ್ರಬುದ್ಧವಾದ ವ್ಯಾಖ್ಯಾನಗಳು. ಆಚಾರ್ಯರು ಪಂಡಿತಾಗ್ರಣಿಗಳಾಗಿದ್ದರೂ ವಿನಯವೇ ಮೂರ್ತಿವೆತ್ತ ಹರಿದಾಸ ಹೃದಯವುಳ್ಳವರಾಗಿದ್ದರು ಎಂಬುದಕ್ಕೆ ಅವರು ಬರೆದಿರುವ 'ಶ್ರೀವ್ಯಾಸ–ದಾಸಸಿದ್ಧಾಂತಕೌಮುದೀ' ಮತ್ತು 'ಭಾವ ಸೂಚನೆ' ಎಂಬ ವ್ಯಾಖ್ಯಾನ ಗ್ರಂಥಗಳೇ ಸಾಕ್ಷಿಯಾಗಿವೆ. ವ್ಯಾಸ–ದಾಸಸಾಹಿತ್ಯಗಳ ಸಮನ್ವಯವನ್ನು ಸಾಧಿಸಲೆಂದೇ ಪ್ರಕಟವಾಗಿರುವ 'ಶ್ರೀವ್ಯಾಸ–ದಾಸಸಿದ್ಧಾಂತಕೌಮುದೀ' ವ್ಯಾಖ್ಯಾನ ಸಂಸ್ಕೃತ ಭಾಷೆ ಯಲ್ಲಿದ್ದರೆ, 'ಭಾವಸೂಚನೆ' ಎಂಬುದು ಸಂಸ್ಕೃತ ಮಿಶ್ರಿತ ಕನ್ನಡದಲ್ಲಿ ರಚಿತಗೊಂಡಿದೆ. ತಮಿಳುನಾಡಿನ ಕರಪುಂಡಿ ಎಂಬಲ್ಲಿ ವೃಂದಾವನಸ್ಥ ರಾಗಿರುವ ಶ್ರೀಸಂಕರ್ಷಣ ಒಡೆಯರೇ[1] ಮೊದಲಾದವರು

---

1. ಶ್ರೀಸತ್ಯಪರಾಯಣತೀರ್ಥರ ಕರಕಮಲಸಂಜಾತರಾದ ಶ್ರೀಸಂಕರ್ಷಣ ಒಡೆಯರು, ಹರಿಕಥಾಮೃತಸಾರಕ್ಕೆ ದಿವ್ಯವ್ಯಾಖ್ಯಾನಕಾರರು, ವಾದಿರಾಜ ಋಜುತ್ವ ದೀಕ್ಷಾಯುಕ್ತರು. 1863ನೇ ಇಸ್ವಿಯಲ್ಲಿ ಕರಪುಂಡಿ ಗ್ರಾಮದಲ್ಲಿ →

ಹರಿಕಥಾಮೃತಸಾರಕ್ಕೆ ಕನ್ನಡದಲ್ಲಿ ಪ್ರೌಢವಾದ ವ್ಯಾಖ್ಯಾನವನ್ನು ರಚಿಸಿದ್ದರೂ ಕನ್ನಡ ಗ್ರಂಥವೊಂದಕ್ಕೆ ಪಂಡಿತಮಾನ್ಯವಾದ ಸಂಸ್ಕೃತ ಭಾಷೆಯಲ್ಲಿ ವ್ಯಾಖ್ಯಾನಗಳನ್ನು ರಚಿಸಿರುವುದು ಆಚಾರ್ಯರ ಹೆಗ್ಗಳಿಕೆ ಎಂದೇ ಹೇಳಬಹುದು. ಇವೆರಡಲ್ಲದೆ ಆಚಾರ್ಯರು 'ಶ್ರೀಹರಿಕಥಾಮೃತ ಸಾರ ಪಂಚಿಕಾ' ಎಂಬ ಮತ್ತೊಂದು ವ್ಯಾಖ್ಯಾನವನ್ನು ಸಹ ಸಂಸ್ಕೃತದಲ್ಲಿ ರಚಿಸಿರುತ್ತಾರೆ. ಆದರೆ ಅದು ಪೂರ್ಣ ಉಪಲಬ್ಧವಿಲ್ಲ. ಶ್ರೀವ್ಯಾಸ-ದಾಸಸಿದ್ಧಾಂತಕೌಮುದಿಯ ಅಣು-ವ್ಯಾಖ್ಯಾನದಂತೆ ಅದರ ನೆರಳನ್ನು ಅನುಸರಿಸಿ ರೂಪುಗೊಂಡಿರುವ ಈ ವ್ಯಾಖ್ಯಾನದ ಕುರಿತಾಗಿ ಡಾ. ಗುರುರಾಜಾಚಾರ್ಯ ಕೃ. ನಿಪ್ಪಾಣಿ ಅವರು ತಾವು ಸಂಪಾದಿಸಿರುವ 'ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ'ಯಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ : "ಶ್ರೀಹರಿಕಥಾಮೃತಸಾರಪಂಚಿಕಾ ಆಚಾರ್ಯರ ವಂಶೀಕರಲ್ಲಿ ಇತ್ತೀಚೆಗೆ ಹಸ್ತಪ್ರತಿಗಳನ್ನು ಶೋಧಿಸಿದಾಗ ದೊರಕಿದೆ. ಅಪೂರ್ಣ ದೊರೆತಿದ್ದು ಎರಡನೆಯ ಸಂಧಿಯ ಕೊನೆಯ ಭಾಗ ಮತ್ತು ಮೂರನೆಯ ಸಂಧಿಯ ಆರಂಭವು ಉಪಲಬ್ಧವಿವೆ. ಉಳಿದದ್ದು ದೊರೆತಿಲ್ಲ. ಹಸ್ತಪ್ರತಿಯನ್ನು ನೋಡಿದಾಗ, ಶ್ರೀವ್ಯಾಸ-ದಾಸಸಿದ್ಧಾಂತ ಕೌಮುದಿಗೆ ಸಂಬಂಧಪಟ್ಟಂತೆ ಅಲ್ಲಲ್ಲಿ ಹೆಚ್ಚಿನ ಸ್ಪಷ್ಟ ವಿವರಣೆಯನ್ನು ಕೊಡಲಾಗಿದೆ. ಈ ವ್ಯಾಖ್ಯಾನವು ಪೂರ್ತಿಯಾಗಿ ರಚಿಸಲ್ಪಟ್ಟಿತೋ ಅಥವಾ ಇಲ್ಲವೋ ಎಂಬುದು ತಿಳಿದುಬಂದಿಲ್ಲ."

ಜಂಬುಖಂಡಿ ಆಚಾರ್ಯರಿಗೆ ಬಾಲ್ಯದಿಂದಲೂ ಹರಿಕಥಾಮೃತ ಸಾರದಲ್ಲಿ ಅಪರಿಮಿತವಾದ ಆಸಕ್ತಿಯಿತ್ತು. ಇದರ ಪಠಣಕ್ರಮವನ್ನು ಮತ್ತು ಅರ್ಥ ವಿವರಣೆಯನ್ನು ತಮ್ಮ ತಂದೆಯವರಿಂದಲೇ ಅರಿತುಕೊಂಡಿದ್ದರು. ಹಾಗಾಗಿ ಪ್ರತಿನಿತ್ಯವೂ ಹರಿಕಥಾಮೃತಸಾರವನ್ನು

---

→ ವೃಂದಾವನಸ್ಥರಾದ ದೊಡ್ಡ ಜ್ಞಾನಿಗಳು. ಅವರ ಶಿಷ್ಯ ಪ್ರಶಿಷ್ಯರೂ ಹಾಗೆಯೇ ದೀಕ್ಷಾ ಉಳ್ಳವರಾಗಿ ಬದುಕಿದ್ದಾರೆ.

– 'ಶ್ರೀಮದ್ವಾದಿರಾಜ ಋಜುತ್ವಸಿದ್ಧಾಂತ'

ವಿದ್ವಾನ್ ಶ್ರೀ ಹೆಚ್. ಸುಬ್ಬರಾವ್, ಮೈಸೂರು

ಅತ್ಯಂತ ಶ್ರದ್ಧಾದರಗಳಿಂದ ಪಾರಾಯಣ ಮಾಡುತ್ತಿದ್ದ ಅವರು ತಮ್ಮ ವಿದ್ಯಾಭ್ಯಾಸ ಕಾಲದಲ್ಲಿಯೂ ಸಹ ಈ ಕ್ರಮವನ್ನು ಎಂದೂ ತಪ್ಪಿಸಿದವರಲ್ಲ. ಆಚಾರ್ಯರು ಶ್ರೀಮದ್ಧರಿಕಥಾಮೃತಸಾರಕ್ಕೆ ಸಂಸ್ಕೃತ ದಲ್ಲಿ ವ್ಯಾಖ್ಯಾನವನ್ನು ರಚಿಸಲು ಪ್ರೇರೇಪಣೆ ನೀಡಿದ ಘಟನೆಯೊಂದು ತುಂಬಾ ಸ್ವಾರಸ್ಯವಾಗಿದೆ.

ಆಚಾರ್ಯರು ಉಡುಪಿ ಶ್ರೀಕೃಷ್ಣಾಪುರದ ಮಠಾಧೀಶರಲ್ಲಿ ಸುಧಾಂತ ವ್ಯಾಸಂಗ ಮಾಡುತ್ತಿದ್ದಾಗ ನಡೆದ ಘಟನೆ : ಒಂದು ದಿವಸ ಬಿಡುವಿನ ವೇಳೆಯಲ್ಲಿ ಆಚಾರ್ಯರು ತಮ್ಮ ಎಂದಿನ ಕ್ರಮದಂತೆ ಶ್ರೀಹರಿಕಥಾಮೃತಸಾರ ಕೃತಿಯನ್ನು ಪಾರಾಯಣ ಮಾಡುತ್ತಿದ್ದಾಗ ಆಕಸ್ಮಿಕವೆಂಬಂತೆ ಗುರುಗಳಾದ ಶ್ರೀವಿದ್ಯಾಧೀಶರ ಸವಾರಿ ಅಲ್ಲಿಗೆ ಚಿತ್ತೈಸಿತು. ತಮ್ಮ ನೆಚ್ಚಿನ ಶಿಷ್ಯರು ನಡೆಸುತ್ತಿರುವ ಮೆಚ್ಚಿನ ಪಾರಾಯಣದ ಕಡೆಗೆ ಶ್ರೀಗಳವರ ದೃಷ್ಟಿಯು ಬಿದ್ದಿತು. ಕ್ಷಣಕಾಲ ಅವರ ಪಾರಾಯಣವನ್ನು ಆಲಿಸಿದ ಶ್ರೀಗಳವರು "ಇದೇನು ಕನ್ನಡ ಗ್ರಂಥದ ಪಾರಾಯಣ ಮಾಡುತ್ತಿರುವಿ! ಯಾವ ಗ್ರಂಥ ಅದು?" ಎಂದು ಪ್ರಶ್ನಿಸಿದರು. ತಮ್ಮ ವಿದ್ಯಾಗುರುಗಳು ಬಂದಿದ್ದನ್ನು ಕಂಡು ಆಚಾರ್ಯರು ದಡಬಡಿಸಿ ಎದ್ದು ನಿಂತು ಗೌರವಭಾವದಿಂದ ಅವರಿಗೆ ಸಾಷ್ಟಾಂಗ ಪ್ರಣಾಮಗೈಯುತ್ತಾ 'ಶ್ರೀಜಗನ್ನಾಥ ದಾಸರಾಯರು ರಚಿಸಿರುವ ಹರಿಕಥಾಮೃತಸಾರವನ್ನು ಯಥಾಶಕ್ತಿ ಪಠಿಸುತ್ತಿದ್ದೇನೆ, ಗುರುಗಳೇ' ಎಂದು ಅಭಿಮಾನದಿಂದಲೇ ಉತ್ತರಕೊಟ್ಟರು. ಇದನ್ನು ಕೇಳಿ ವಿದ್ಯಾಧೀಶರು ಏನೊಂದೂ ಮಾತನಾಡದೆ ಉದಾಸೀನ ಮಿಶ್ರಿತ ನಸುನಗೆಯನ್ನು ನಕ್ಕು ಅಲ್ಲಿಂದ ಹೊರಟುಹೋದರು. ಅತೀವ ಶ್ರದ್ಧೆಯಿಂದ ಹರಿಕಥಾಮೃತಸಾರವನ್ನು ಪಠಿಸುತ್ತಿದ್ದ ಅಚಾರ್ಯರಿಗೆ ತಮ್ಮ ಗುರುಗಳ ಈ ವರ್ತನೆ ಬೇಸರವನ್ನುಂಟುಮಾಡುವ ಬದಲು ಹೊಸ ಸಾಹಸಕ್ಕೇ ಪ್ರೇರೇಪಿಸಿತು. "ಮೋಕ್ಷಪ್ರದ ಪವಿತ್ರ ಗ್ರಂಥವಾದ ಶ್ರೀಮದ್ಧರಿಕಥಾಮೃತಸಾರಕ್ಕೆ ತಾವೇಕೆ ಗೀರ್ವಾಣ ಭಾಷೆಯಲ್ಲಿ ವ್ಯಾಖ್ಯಾನವನ್ನು ಬರೆಯಬಾರದು. ಹಾಗೆ ಬರೆಯುವುದರಿಂದ ಈ ಮಹಾಗ್ರಂಥದ ಪ್ರೌಢಿಮೆಯ ಬಗ್ಗೆ ಗುರುಗಳ

ಗಮನವನ್ನೂ ಸೆಳೆದಂತಾಗುತ್ತದೆ ಮತ್ತು ಪಂಡಿತಪ್ರಪಂಚಕ್ಕೂ ದಾಸರಾಯರು ಕನ್ನಡದಲ್ಲಿ ಸಾದರಪಡಿಸಿರುವ ಅಮೂಲ್ಯ ನುಡಿಮುತ್ತುಗಳನ್ನು ತೋರಿಸಿದಂತಾಗುತ್ತದೆ. ಕಸ್ತೂರಿಯೆನ್ನಿಸಿದ ಕನ್ನಡದ ಕಂಪನ್ನು ದಶದಿಕ್ಕುಗಳಲ್ಲಿ ಪಸರಿಸಿದಂತಾಗುವುದಲ್ಲದೆ ಅಪರೋಕ್ಷಿಗಳಾದ ಅನೇಕ ದಾಸರಾಯರು ಕನ್ನಡ ನುಡಿಗೆ ನೀಡಿರುವ ದೇವಭಾಷೆಯ ಸ್ಥಾನಮಾನವನ್ನು ಸಹ ಧ್ವನಿಪೂರ್ಣವಾಗಿ ಸ್ಥಾಪಿಸಿದಂತಾಗುತ್ತದೆ. ವ್ಯಾಸ–ದಾಸ ಸಾಹಿತ್ಯಗಳ ಸಮನ್ವಯವನ್ನೂ ತನ್ಮೂಲಕ ಸಾಧಿಸಿದಂತಾಗುತ್ತದೆ" ಎಂದೆಲ್ಲಾ ಆಚಾರ್ಯರು ವಿಚಾರ ಮಾಡಲಾರಂಭಿಸಿದರು. ತಮ್ಮ ಗುರುಗಳಾದ ವಿದ್ಯಾಧೀಶರಲ್ಲಿ ನಿಂತು ಯಾದವೇಶನೇ ಇಂತಹ ಅಪೂರ್ವ ಅವಕಾಶವನ್ನು ಒದಗಿಸಿದ್ದಾನೆ. ಇದು ಅವನದೇ ಪ್ರೇರಣೆ. ಇದನ್ನು ವ್ಯರ್ಥಗೊಳಿಸಲು ಬಿಡಬಾರದು ಎಂದು ಚಿಂತಿಸಿ ಕೂಡಲೇ ಕಾರ್ಯೋನ್ಮುಖರಾಗಲು ಆಚಾರ್ಯರು ದೃಢಸಂಕಲ್ಪವನ್ನು ಮಾಡಿದರು.

ನಂತರ ವಾದಿರಾಜರ ಸಂದರ್ಶನಕ್ಕಾಗಿ ಗುರುಗಳ ಅಪ್ಪಣೆಯನ್ನು ಪಡೆದು ಉಡುಪಿಯಿಂದ ಹೊರಡುವ ಮುನ್ನ ಮಧ್ವವರದನಾದ ಶ್ರೀಕೃಷ್ಣನಿಗೆ ನಮಸ್ಕರಿಸಿ ಕಾರ್ಯಸಿದ್ಧಿಗಾಗಿ ಪ್ರಾರ್ಥಿಸಿದರು. "ವಾದಿರಾಜರ ಕೋಶಕ್ಕೊಪ್ಪುವ" ಹರಿಕಥಾಮೃತಸಾರದ ವ್ಯಾಖ್ಯಾನವನ್ನು ಗುರ್ವಂತರ್ಯಾಮಿಯಾದ ಶ್ರೀಶನೊಪ್ಪುವಂತೆ ಮಾಡಬೇಕಾದರೆ ಭಾವಿ ಭಾರತಿಪತಿಯ ಒಲುಮೆ ಪಡೆಯಬೇಕಾದುದು ಅತಿಮುಖ್ಯವಲ್ಲವೇ? ಹಾಗಾಗಿ ಆಚಾರ್ಯರು ಅಲ್ಲಿಂದ ತಮ್ಮ ಇಷ್ಟ ಗುರುಗಳ ಸನ್ನಿಧಾನಯುಕ್ತ ಸೋದಾಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಅಲ್ಲಿ ದಿಂಡುರುಳಿದ ಬಾಳೆಯಂತೆ ರಾಜರಿಗೆ ಶರಣಾಗಿ ಒಂದು ಸಪ್ತಾಹಕಾಲ ಗುರುಗಳ ಸನ್ನಿಧಿಯಲ್ಲಿ ತಮ್ಮ ಅಭೀಷ್ಟ ಸಿದ್ಧಿಗಾಗಿ ಸೇವೆ ಸಲ್ಲಿಸಿದರು. ಕ್ಷಿಪ್ರದಲ್ಲಿ ಆಚಾರ್ಯರಿಗೆ ರಾಜರೊಲುಮೆ ಉಂಟಾಯಿತು. ಅಲ್ಲಿಂದ ಏನೋ ನಿಶ್ಚಯ ಮಾಡಿದವರಂತೆ ವಾರಣಾಸಿಗೆ ಹೊರಟು ಬಂದರು. ಅವರು ಯಾವ ಗುರುಗಳಿಂದ ಪ್ರೇರೇಪಿತರಾಗಿ ಉಡುಪಿಯಿಂದ ವಾರಣಾಸಿಗೆ

ಬಂದಿದ್ದರೋ ಆ ಗುರುಗಳಾದ ಶ್ರೀವಿದ್ಯಾಧೀಶರೂ ಸಹ ಹಿಂದೆ ತಮ್ಮ ಉನ್ನತ ಶಾಸ್ತ್ರ ವ್ಯಾಸಂಗಕ್ಕಾಗಿ ಸುಮಾರು ಹನ್ನೆರಡು ವರ್ಷಗಳ ಕಾಲ ವಾರಣಾಸಿಯನ್ನೇ ಆಶ್ರಯಿಸಿದ್ದರು. ಎಲ್ಲಿಯ ಉಡುಪಿ, ಎಲ್ಲಿಯ ವಾರಣಾಸಿ! ಬಹುಶಃ ಆಚಾರ್ಯರಿಗೆ ಹೀಗೆನ್ನಿಸಿರಬೇಕು. "ಜಗನ್ನಾಥ ದಾಸರ ಭಾಗ್ಯೋದಯಕ್ಕೆ ಕಾರಣರಾದವರು ಶ್ರೀವಿಜಯದಾಸರು. ವಿಜಯದಾಸರಿಗೆ ಪರಮಪ್ರೀತ್ಯಾಸ್ಪದವಾದ ಸ್ಥಳವೆಂದರೆ ವಾರಣಾಸಿ. ದಾಸರಿಗೆ ವಿಜಯವಿಠಲನ ಕೃಪೆಯಾಗಿ, ಅಂಕಿತವಾದದ್ದೂ ಅಲ್ಲಿಯೇ. ಪುರಂದರದಾಸರ ರೂಪದಿಂದ ಶ್ರೀಹರಿಯು ಹೃದಯದಲ್ಲಿ ಹೊಳೆದಾಗ 'ಅಂತರಂಗದ ಕದವು ತೆರೆಯಿತಿಂದು' ಎಂದು ದಾಸರು ಭಾವಪೂರಿತ ವಾಗಿ ಹಾಡಿದ್ದು ಸಹ ಅಲ್ಲಿಯೇ. ಗುರು ವಿಜಯರಾಯರ ಅನುಗ್ರಹಬಲ ದಿಂದ ತಾವು ರಚಿಸಲಿರುವ ಶ್ರೀಮದ್ಧರಿಕಥಾಮೃತಸಾರದ ವ್ಯಾಖ್ಯಾನ ಹರಿಯ ಪಾದೋದ್ಭವೆಯಾದ ಗಂಗಾ ಸಲಿಲದಂತೆ, ತುಂಬು ಸಂಭ್ರಮ ದಿಂದ ಯಾವುದೇ ಅಡೆತಡೆಗಳಿಲ್ಲದೆ ಹರಿದು ಮುಂದೆ ಸಾಗಬೇಕಾದರೆ 'ಕ್ಷೇತ್ರದೊಳಗೆ ಅತ್ಯುತ್ತಮವೆಂದು ಪ್ರಸಿದ್ಧವಾದ' ವಾರಣಾಸಿಯೇ ಸೂಕ್ತಸ್ಥಳ." ಈ ಪ್ರಕಾರ ಯೋಚಿಸಿ ಆಚಾರ್ಯರು ವಾರಣಾಸಿಗೆ ಬಂದಿಳಿದರು. ಪರಮಪವಿತ್ರವಾದ ಗಂಗಾ ನದಿಯಲ್ಲಿ ಮಿಂದು ಮನೋಭಿಮಾನಿಯಾದ ಕಾಶಿ ವಿಶ್ವೇಶ್ವರನಿಗೆ ನಮಸ್ಕರಿಸಿ, ಹರಿಪದದಲ್ಲಿ ಶುದ್ಧ ಮನಸ್ಸನ್ನು ಕೊಡಲು ಪ್ರಾರ್ಥಿಸಿದರು.

'ಖಂಡೇಂದು ಗಂಗರಾಜಚ್ಛ್ರೀಮಸ್ತಂ ಶ್ರೀರಾಮಕಿಂಕರಃ ।
ಶಂಕರಂ ಪಾರ್ವತೀನಾಥಂ ತತ್ಪದಾರ್ಹಂ ಶ್ರಯೇ ಮುದೇ ॥'

ಎಂಬುದಾಗಿ ಪಾರ್ವತೀನಾಥನಾದ ಶಂಕರನನ್ನು ಸ್ತುತಿಸುವಾಗಲೂ ಸಹ ಅವರ ಮನಸ್ಸು ಮುಂದಿನ ರುದ್ರಪಟ್ಟಕ್ಕೆ ಬರುವ ಭೂತರಾಜರನ್ನು ಭಕ್ತಿಪೂರ್ವಕವಾಗಿ ಸ್ಮರಿಸಲು ಮರೆಯಲಿಲ್ಲ. ತದನಂತರ ತಾಯಿ ವಿಶಾಲಾಕ್ಷಿಯನ್ನೂ, ಕ್ಷೇತ್ರ ಪ್ರಭುವಾದ ಬಿಂದುಮಾಧವನನ್ನೂ, ವ್ಯಾಸಕಾಶಿಯಲ್ಲಿ ವೇದವ್ಯಾಸ ದೇವರನ್ನೂ ಸಂದರ್ಶಿಸಿ ಕಾರ್ಯ ಸಿದ್ಧಿಗಾಗಿ ಪ್ರಾರ್ಥಿಸಿದರು. ಅಲ್ಲಿಂದ ಒಂದು ಮಂಡಲಪರ್ಯಂತ

ದೀಕ್ಷಾರತರಾಗಿ ವಾರಣಾಸಿಯಲ್ಲಿ ನೆಲೆನಿಂತು ಕೇವಲ ಮೂರು ಮುಷ್ಟಿ ಭತ್ತದ ಅರಳನ್ನು ಮಾತ್ರ ಸೇವಿಸುತ್ತಾ ಆಚಾರ್ಯರು ಹರಿಕಥಾಮೃತ ಸಾರಕ್ಕೆ ವ್ಯಾಖ್ಯಾನವನ್ನು ರಚಿಸಿದರು.

ಇದಾದ ನಂತರ ಆಚಾರ್ಯರು ಪುನಃ ಉಡುಪಿಗೆ ಬಂದು ತಾವು ಬರೆದ ವ್ಯಾಖ್ಯಾನಗಳನ್ನು ಗುರುಗಳಾದ ಶ್ರೀವಿದ್ಯಾಧೀಶರಿಗೆ ಸಮರ್ಪಿಸಿದರು. ಶಿಷ್ಯನು ಕೈಗೊಂಡ ಸಾಹಸ ಕಾರ್ಯಗಳನ್ನು ಕೇಳಿ ಸಂತೋಷ ಭರಿತರಾದ ಶ್ರೀಗಳವರು ಹರಿಕಥಾಮೃತಸಾರದ ಹಿರಿಮೆಯನ್ನೂ, ತಮ್ಮ ಶಿಷ್ಯನ ಪಾಂಡಿತ್ಯವನ್ನೂ ಪರಿಚಯಿಸುವ ವ್ಯಾಖ್ಯಾನಗ್ರಂಥಗಳನ್ನು ಸಂಪೂರ್ಣವಾಗಿ ಓದಿ ಅವುಗಳಲ್ಲಿ ಅಡಗಿರುವ ಬೃಹತೀ ಸಹಸ್ರ ಋಗರ್ಥಗಳ ತತ್ತ್ವಪುಂಜವನ್ನು ಕಂಡು ಬೆಕ್ಕಸ ಬೆರಗಾದರಂತೆ. ಗೀರ್ವಾಣ ಭಾಷೆಯ ಎತ್ತರಕ್ಕೆ ಸರಿಸಾಟಿಯಾಗಿ, ಕೆಲವೊಮ್ಮೆ ಅದಕ್ಕೆ ಮೀರುವಂತೆ ನಿಲ್ಲಬಲ್ಲ ಪ್ರಾಕೃತ ಭಾಷೆಯ ಕೃತಿರತ್ನದ ಸೊಬಗಿಗೆ ಸಂತೋಷಿಸಿ ಅಪಾರ ಮೆಚ್ಚುಗೆ ಸೂಚಿಸಿದರಂತೆ. ಉಡುಪಿಯಲ್ಲಿ ನಡೆದ ವಿದ್ವದ್ಗೋಷ್ಠಿಯಲ್ಲಿಯೂ ಸಹ ಈ ಗ್ರಂಥಗಳನ್ನು ಕುರಿತು ಮಾತನಾಡಲು ಆಚಾರ್ಯರಿಗೆ ವಿದ್ಯಾಧೀಶರು ಅವಕಾಶ ಕೊಟ್ಟರಲ್ಲದೆ ಶಿಷ್ಯನ ವ್ಯಾಖ್ಯಾನ ಕೌಶಲವನ್ನು ತುಂಬಿದ ಪಂಡಿತ ಮಂಡಲಿಯಲ್ಲಿ ಹೃತ್ಪೂರ್ವಕವಾಗಿ ಶ್ಲಾಘಿಸಿದರಂತೆ.

ಆಚಾರ್ಯರು ಶ್ರೀಮದ್ಧರಿಕಥಾಮೃತಸಾರಕ್ಕೆ ಬರೆದ 'ಶ್ರೀವ್ಯಾಸ–ದಾಸಸಿದ್ಧಾಂತಕೌಮುದೀ' ಮತ್ತು 'ಭಾವಸೂಚನೆ' ಎಂಬ ಎರಡೂ ವ್ಯಾಖ್ಯಾನಗಳು ಪ್ರೌಢವಾದ ಭಾಷಾ ಬಂಧುರದಲ್ಲಿ ರಚಿತವಾಗಿದ್ದು ಮೂಲಗ್ರಂಥದ ಮುಖ್ಯೋದ್ದೇಶವನ್ನೂ, ಅದರ ಹಿರಿಮೆ–ಗರಿಮೆಗಳನ್ನೂ ಮನೋಜ್ಞಶೈಲಿಯಲ್ಲಿ ಬಿಂಬಿಸುತ್ತವೆ. ವ್ಯಾಸ–ದಾಸಸಾಹಿತ್ಯಗಳ ಮೂಲ ಉದ್ದೇಶ ಭವಬೇಗೆಯಿಂದ ಬೆಂದ ಹೃದಯಕ್ಕೆ ಭಗವದನುಗ್ರಹವೆಂಬ ಬೆಳದಿಂಗಳನ್ನು ಉಂಟು ಮಾಡುವುದೇ ಆಗಿದೆ. ಈ ಎರಡೂ ವ್ಯಾಖ್ಯಾನಗಳು ಪರಸ್ಪರ ಪೂರಕವಾಗಿದ್ದು ಹರಿಕಥಾಮೃತಸಾರವನ್ನು ಆಳವಾಗಿ ಅಭ್ಯಾಸ ಮಾಡಲಿಚ್ಛಿಸುವವರಿಗೆ ಕಾಮಧೇನು, ಕಲ್ಪವೃಕ್ಷಗಳಂತೆ

ಅವರ ಮನೋಬಯಕೆಯನ್ನು ತುಂಬುವುದರಲ್ಲಿಯೂ ನೆರವಾಗುತ್ತದೆ. "ಸೋದಾಪುರಾಧೀಶರ ಕಾರುಣ್ಯ ವಿಶೇಷದಿಂದ ಜನಿಸಿದ ನಾನು ಮಧ್ವ ಗುರುರಾಜರ ಕೃಪಾಬಲದಿಂದ ಮಾನವಿದಾಸರ ಈ ಶ್ರೇಷ್ಠ ನುಡಿಗಳನ್ನು ಅನುಸರಿಸಿ ವೀಣೆ ನುಡಿಸುವಂತೆ 'ಶ್ರೀವ್ಯಾಸ-ದಾಸ ಸಿದ್ಧಾಂತಕೌಮುದೀ' ಎಂಬ ಹರಿಕತಾಮೃತಸಾರ ವ್ಯಾಖ್ಯಾನವನ್ನು ರಚಿಸುತ್ತೇನೆ" ಎಂದು ಗ್ರಂಥಾರಂಭದಲ್ಲಿ ಹೇಳಿಕೊಳ್ಳುವ ಆಚಾರ್ಯರ ಈ ವಿನಯವೇ[1] ವಿದ್ವತ್ಪೂರ್ಣವಾದ ಅವರ ಹೃದಯ ಶ್ರೀಮಂತಿಕೆಯನ್ನು ಬಿಂಬಿಸುತ್ತದೆ.

ಲಿಂಗಸೂಗೂರಿನ 'ಶ್ರೀವರದೇಂದ್ರ ಸಾಹಿತ್ಯ ಮಂಡಲಿ' ಹೊರ ತಂದಿರುವ 'ಪಂಚರತ್ನಪ್ರಕಾಶಿಕಾ'ದ ಅನುವಾದಕರಾದ ಪಂಡಿತವರೇಣ್ಯ ಶ್ರೀಕೇಶವಾಚಾರ್ಯ ಜಾಲೀಹಾಳ ಅವರು ಜಂಬುಖಂಡಿ ಆಚಾರ್ಯರ ಈ ಅಪೂರ್ವ ವ್ಯಾಖ್ಯಾನಗಳ ಬಗ್ಗೆ ಪ್ರಾರಂಭದ ಪೀಠಿಕೆಯಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ: "ವ್ಯಾಸದಾಸಸಿದ್ಧಾಂತಗಳಿಗೆ ಇದು ಚಂದ್ರಿಕೆ (ಬೆಳದಿಂಗಳು)ಯಂತೆ ಪ್ರಕಾಶಿಕೆಯಾಗಿರುವುದರಿಂದ ಇದಕ್ಕೆ 'ವ್ಯಾಸದಾಸ ಸಿದ್ಧಾಂತಕೌಮುದೀ' ಎಂಬ ಹೆಸರನ್ನು ಇಟ್ಟಿದ್ದಾರೆ. ಇವರ ಬರಹವು ಬಲು ಬಿಗುವಿನಲ್ಲಿರುತ್ತದೆ. ಮೇಲೆ ಶ್ಲೇಷರೂಪಕ ಮುಂತಾದ ಅಲಂಕಾರಗಳಿಂದ ಬಂಧುರವಾದ ಪದ್ಯಗಳನ್ನೂ ಒಳಗೊಂಡಿರುತ್ತದೆ. ನಾರೀಕೇಲಪಾಕದಂತಿರುವ ಇವರ ಬರಹಸರಣಿಯು ಕವಿ ತಾರ್ಕಿಕ ಚೂಡಾಮಣಿ ಶ್ರೀಹರ್ಷನ 'ಗ್ರಂಥಗ್ರಂಥಿರಹ ಕ್ವಚಿತ್ ಕ್ವಚಿದಪಿ ನ್ಯಾಸಿ ಪ್ರಯತ್ನಾನ್ಮಯಾ' ಎಂಬ ವಾಕ್ಯವನ್ನು ನೆನಪಿಸುತ್ತದೆ. ಗುರು ಸಂಪ್ರದಾಯದ ಸರ್ಪಕಾವಲದಲ್ಲಿ ಸುಭದ್ರವಾಗಿರುವ ರಹಸ್ಯ ವಿಷಯ ಮಣಿಗಳನ್ನು ಹೊರತಂದು, ವ್ಯಾಸ ಸಾಹಿತ್ಯದ ದರ್ಶನ ಸ್ವರೂಪದಲ್ಲಿ, ಕಾವ್ಯಮಣಿಯ

---

1. ದೇವಮಾನುಷವಿತ್ತಸ್ಯ ವರ್ಧಕಾನ್ ಪಿತೃಶೇಖರಾನ್ ।
ಶ್ರೀನಿವಾಸಾಹ್ವಯಾನ್ನತ್ವಾ ಸೋದೇಡ್ ಜಾತೋಽಹಮಲ್ಪಕಃ ॥
ವಾದೀ ಮಧ್ವಸುಪದ್ಯಸ್ಥ ವೀಣೇವ ಕರುಣಾಲವಾತ್ ।
ಶ್ರೀವ್ಯಾಸದಾಸಸಿದ್ಧಾಂತಕೌಮುದೀಮಾತನೋಮ್ಯಲಮ್ ॥
– ಶ್ರೀವ್ಯಾಸದಾಸಸಿದ್ಧಾಂತಕೌಮುದೀ (ಮಂಗಳಾಚರಣೆ)

ಸುವರ್ಣದ ಮೆರಗಿನಲ್ಲಿ ಹೊಳೆಯುವಂತೆ ವಿಶದ ಪಡಿಸಿರುವ ಇವರ ಬರಹಕ್ಕೆ ಕಾಠಿಣ್ಯವೂ ಒಂದು ಭೂಷಣವೆಂದು ಹೇಳಬಹುದು. ಶ್ರೀವೇದ ಶಾಸ್ತ್ರೇತಿಹಾಸ ಪುರಾಣಗಳಿಗೂ ಶ್ರೀಸುಳಾದಿ, ಪದ, ಹರಿಕಥಾಮೃತಸಾರ ಮುಂತಾದ ದಾಸರಾಯರ ವಚನಗಳಿಗೂ ಇರುವ ಪರಸ್ಪರ ಸಂಬಂಧ ವನ್ನು ತೋರಿಸಿ ಕೊಡುವುದೇ ಈ ವ್ಯಾಖ್ಯಾನದ ಮುಖ್ಯ ಉದ್ದೇಶ.

ಶ್ರೀಮದಾಚಾರ್ಯರ ಸತ್ಸಿದ್ಧಾಂತದ ಮೂಲ ಸಂಪ್ರದಾಯವನ್ನು ಅರಿಯದವರ ಅಪಾರ್ಥಗಳನ್ನು ಜರೆದು, ಮೂಲಶಾಸ್ತ್ರದ ನೆರಳಿನಂತೆ ನಡೆಯುವುದೇ ದಾಸಸಾಹಿತ್ಯದ ಹೆಗ್ಗುರಿ; ಎಂಬುದನ್ನು ಸ್ಫುಟಪಡಿಸಲು ಈ ವ್ಯಾಖ್ಯಾನಕಾರರ ಭಗೀರಥಪ್ರಯತ್ನ. ತತ್ತ್ವವನ್ನು ತಿಳಿಯದ ಅರ್ಥಮರ್ಥ ಓದಿದವರ ಹಿಡಿತದಿಂದ ವಿರುದ್ಧ ದೆಶೆಯಲ್ಲಿ ಹರಿಯ ಹೊರಟಿರುವ ದಾಸ ವಚನಗಳ ನದಿಗಳನ್ನು ವ್ಯಾಸ ಸಾಹಿತ್ಯಪಯೋನಿಧಿ ಯೊಡನೆ ಸಂಗಮಿಸಿ, ಈ ಗಂಗಾ ಸಾಗರದಲ್ಲಿ ಸಜ್ಜನರ ಅವಗಾನಸ್ನಾನ ಮುಂತಾದ ಪರ್ವೋತ್ಸವವನ್ನು ನೋಡಿ ನಲಿಯುವುದೇ ಇವರ ಹೆಗ್ಗುರಿ; ಎಂದು ತೋರದಿರಲಾರದು. ಶ್ರೀಜಂಬುಖಂಡಿ ಆಚಾರ್ಯರ ಈ ಮಹೋಪಕಾರವನ್ನು ಉಭಯ ಸಂಪ್ರದಾಯದವರು ಎಂದಿಗೂ ಮರೆಯುವಂತಿಲ್ಲ.

ಭಾವಸೂಚನೆ ವ್ಯಾಖ್ಯಾನದಲ್ಲಿಯೂ ಸಹ 'ಪ್ರಮಾಣಗಳ ಸಮಾಖ್ಯೆಯೊಡನೆ ವಿಷಯಗಳನ್ನು ಸಯುಕ್ತಿಕವಾಗಿ ನಿರ್ಣಯಿಸಿ ವಿವರಿಸುವುದು ಇವರ ಬರಹದ ವಿಶಿಷ್ಟತೆ. ಪ್ರಾಚೀನದಾಸರ ಪದ, ಸುಳಾದಿಗಳನ್ನೂ, ಪುರಾಣ ವಚನಗಳನ್ನೂ, ಪರಸ್ಪರ ಉಚಿತವಾಗಿ ಹೊಂದಿಸಿ ಬರೆಯುವುದರಿಂದ ಕುಂದಣದಿಂದೊಪ್ಪುವ ಸುವರ್ಣದಂತೆ ಈ ವ್ಯಾಖ್ಯಾನವು ಸಹೃದಯರಿಗೆ ಮನೋಹರವಾಗಿರುತ್ತದೆ.

ಸಂಸ್ಕೃತದರ್ಶನಭಾಷೆಯಲ್ಲಿರುವ ಪ್ರಬಂಧಗಳಿಗೆ ಕನ್ನಡದಲ್ಲಿ ಅನುವಾದ ಮುಂತಾದವುಗಳಿರಬಹುದು. ಆದರೆ ಕನ್ನಡದಲ್ಲಿಯೇ ಇರುವ ಮೂಲ ಗ್ರಂಥವನ್ನು ಸಂಸ್ಕೃತದಲ್ಲಿ ವ್ಯಾಖ್ಯಾನಿಸುವುದು ತೀರ

ವಿರಳ. ಶ್ರೀಹರಿಕಥಾಮೃತಸಾರಕ್ಕೆ ಎರಡು ಸಂಸ್ಕೃತವ್ಯಾಖ್ಯಾನಗಳ ರಚನೆಯಾಗಿರುವುದು ಕನ್ನಡಿಗರ ಸುದೈವದ ಹೆಮ್ಮೆಯ ಸಂಗತಿ ಯಾಗಿದೆ."

ಮೇಲ್ಕಂಡ ಈ ಎರಡೂ ವ್ಯಾಖ್ಯಾನಗಳ ಸ್ವಾದವನ್ನು ಸವಿಯಲು ಅವುಗಳ ಮಂಗಳಾಚರಣಾ ಮತ್ತು ಇಭವರದ ವಿಠಲಾಂಕಿತದಲ್ಲಿರುವ ಭಾವಸೂಚನೆಯ ಅರ್ಪಣಾ ಪದ್ಯಗಳನ್ನು ನೋಡಬಹುದು :

ಶ್ರೀವ್ಯಾಸದಾಸಸಿದ್ಧಾಂತಕೌಮುದೀ –

ಮಂಗಳಾಚರಣಶ್ಲೋಕಾಃ –
ಶ್ರೀಮದ್ಗುರುಹೃದಯಾಂಭೋಜಮಂದಿರ ಶ್ರೀಮತ್ಸಮೀರತತ್ವದಾರ್ಹ
ಶ್ರೀಗುರುರಾಜಶರ್ಯಾರ್ಚಿತ ಶ್ರೀಮದ್ಗಂಧರ್ವಕಂಧರ ಭೂತರಾಜಾದಿ
ಸಂಸೇವಿತ ಮಾಂ ಪಾಹಿ। ಉಭೌ ಗುರೂತ್ತಮೌ ರಕ್ಷಂತಾಮ್ ॥

ಪದ್ಮೋದ್ಭವಾಪತಿಂ ನಾಭಿಸಂಭೂತಾಯ ತ್ರಯೀಪದಮ್।
ಸಮೀರಗುರುರಾಜೇಂದ್ರವಂದಿತಂ ನೌಮಿ ಮೇ ಪ್ರಿಯಮ್ ॥ 1 ॥

ಲಕ್ಷ್ಮೀಮಕ್ಷರಪಾದಾಬ್ಜಷಟ್ಪದಾಂ ಮಮ ಸೌಖ್ಯದಾಮ್।
ಗುರುರಾಜನುತಾಮಂಬಾಮರ್ಥಯೇ ಜ್ಞಾನದಾಯಿನೀಮ್ ॥ 2 ॥

ನಾಭಿ ತಾಮರಸೋದ್ಭೂತಮಮರಾಸುರವಂದಿತಮ್।
ಮುಖ್ಯೈರ್ವಿದ್ಯಾಃ ಸೃಜಂತಂ ತಮೀಡೇ ಮದುಹತೇಃ (ಹೃತಃ) ಸುತಮ್ ॥ 3 ॥

ಮತಿಮಂತಂ ಹನೂಮಂತಂ ಭೀಮಂ ಭೈಷ್ಮೀಪತಿಪ್ರಿಯಮ್।
ಮಧ್ವಂ ಧ್ವಸ್ತಗುಣ (೦) ವ್ಯಾಸಮುರಹಂತುಃ ಪ್ರಿಯಂ ಭಜೇ ॥ 4 ॥

ಸರಸ್ವತ್ಯೈ ಕೃತೋನ್ನತ್ಯೈ ರತಿಮತ್ಯೈ ಹರೇಃ ಪದೇ।
ಮನೋಜ್ಞಮೂರ್ತ್ಯೈ ಭಾರತ್ಯೈಮಯಿಭೂತ್ಯೈ ನಮೋ ನಮಃ ॥ 5 ॥

ಖಂಡೇಂದುಗಂಗಾರಾಜಚ್ಛ್ರೀಮಸ್ತಂ ಶ್ರೀರಾಮಕಿಂಕರಮ್।
ಶಂಕರಂ ಪಾರ್ವತೀನಾಥಂ ತತ್ವದಾರ್ಹಂ ಶ್ರಯೇ ಮುದೇ ॥ 6 ॥

ವೃಂದಾರಕಾಣಾಂ ಭವ್ಯಾನಾಂ ವೃಂದಂ ವೃಂದಾವನೇ ಗತಮ್ ।
ಯಾಚೇ ಧೀನಿರ್ಮಲಂ ಸೋದಾಪುರವಾಸಸುಸೇವಕಮ್ ॥ 7 ॥

ಪುರಂದರೇಣ ಚಿತ್ತೇನ ಪಾಲಿತಾನ್ ಸುಪುರಂದರಾತ್ ।
ವರ್ಣಯಂತೋ ನಯಂ(ನ) ದೇಶಕಾಲಂ ಕಾಲನಿರೀಕ್ಷಣಾತ್ ॥ 8 ॥

ಪುರಂದರಾಖ್ಯಸದ್ದಾಸಪ್ರಮುಖಾನರ್ಥಯೇಽನಿಶಮ್ ।
ಚಿಪ್ಪಗಿರ್ಯಧಿಪಾನ್ ಶಿಷ್ಯತ್ರಿತಯಂ ಮಾ ಪತೇಃ ಪ್ರಿಯಮ್ ॥ 9 ॥

ಹರೇಃಕಥಾಸುಧಾಸಾರೇ ಚಂಚರೀಕಾಃ ಮರುತ್ಪ್ರಿಯಾಃ ।
ಜಗಧೀಶಸ್ಯ ದಾಸಾ ಯೇ ಪ್ರೇಕ್ಷಾಂ ಮಹ್ಯಂ ದಿಶಂತು ತೇ ॥ 10 ॥

ಶ್ರೀಮಧ್ವಶುದ್ಧರಾದ್ಧಾಂತಭೂಮಿನ್(ಮಿ) ಶ್ರೀಕೃಷ್ಣಸೇವಕಾನ್ ।
ವಿದ್ಯಾಧೀಶಮುನೀನ್ ಸತ್ಯಪರಾಕ್ರಮಗುರೂನ್ ಭಜೇ ॥ 11 ॥

ದೇವಮಾನುಷ ವಿತ್ತಸ್ಯ ವರ್ಧಕಾನ್ ಪಿತೃಶೇಖರಾನ್ ।
ಶ್ರೀನಿವಾಸಾಹ್ವಯಾನ್ನತ್ವಾ ಸೋದೇಡ್‌ಜಾತೋಽಹಮಲ್ಪಕಃ ॥ 12 ॥

ವಾದೀ ಮಧ್ವ ಸುಪದ್ಯಸ್ಥ ವೀಣೇವ ಕರುಣಾಲವಾತ್ ।
ಶ್ರೀವ್ಯಾಸದಾಸಸಿದ್ಧಾಂತಕೌಮುದೀಮಾತನೋಮ್ಯಲಮ್ ॥ 13 ॥

ಭಾವಸೂಚನೆ

ಮಂಗಳಾಚರಣಶ್ಲೋಕಾಃ –

ಪದ್ಮಾವತೀಪ್ರಿಯಂ ದೇವಂ ಪದ್ಮಜಾದ್ಯಭಿವಂದಿತಮ್ ।
ಜ್ಞಾನಾನಂದಾದಿನಿಕರಂ ನೌಮ್ಯಹಂ ಸೃತಿಮುಕ್ತಯೇ ॥ 1 ॥

ಶ್ರೀಮದಾನಂದತೀರ್ಥಾರ್ಯಾನ್ ವಾದಿರಾಜಗುರೂಂಸ್ತಥಾ ।
ಜಗನ್ನಾಥಗುರೂನ್ ದಿವ್ಯಕಥಾಮೃತನಿಷೇವಕಾನ್ ॥ 2 ॥

ವಿದ್ಯಾಸಮುದ್ರಸತ್ತೀರ್ಥಾನ್ ವಿದ್ಯಾದಾನ್ ಪ್ರಣಮಾಮ್ಯಹಮ್ ।
ವಾದಿರಾಜಾಭಿಧೋಽಹಂ ವೈ ವಾದಿರಾಜಕೃಪಾಬಲಾತ್ ॥ 3 ॥

ಹರಿಕಥಾ(ಸುರಕಥಾ) ಮೃತಸಾರಸ್ಯ ವ್ಯಾಖ್ಯಾಂ ಕುರ್ವೇ ಯಥಾಮತಿ ।
ದಯಾಂ ಕುರ್ವಂತು ವಿದ್ವಾಂಸೋ ಜಗನ್ನಾಥದಯಾಶ್ರಯಾಃ ॥ 4 ॥

ಅರ್ಪಣಾ ಪದ್ಯಗಳು –

ಹರಿಕತಾಮೃತವೆನಿಪ ತಂತಿಲಿ
ವರಪ್ರಮಾಣಗಳೆಂಬ ರತ್ನಗಳ್
ಧರಿಸುತೆನ್ನಯ ಹೃದಗುಹಾಶಯನಾದ ಕಾರಣದಿ ।
ವರವ ಬೇಡುವೆನೀಗಲೇ ತವ
ಚರಣಯುಗಲವಲಂಬಿಗೇ ಪರಿ–
ಪರಿಯ ಜನ್ಮಗಳೆತ್ತಿದಾದರು ಮರಿದೆ ಕರುಣಿಪುದು ॥ 1 ॥

ಹರಿಕಥಾಮೃತಸಾರ ಪಠಿಸುವ
ಹಿರಿದು ಜನ್ಮವನೆತ್ತಿದರೂ ಸರಿ
ವರೆದು ಕೇಳುವುದಾದರೂ ಸರಿ ಮಷಿ(ಸಿ)ಯು ಲೇಖಣಿ(ನಿ)ಂದೂ ।
ಕರೆದರೂ ಸರಿ ಪತ್ರವೆನುತಲಿ
ಬೆರದಿಹೋ ಚೇತನನಿವೆನಿಸುತ
ಪೊರೆಯೊ ಪಾವನ ಶತ್ರುತಾಪನ ಜಿತಜರಾಮರಣ ॥ 2 ॥

ಧೀರರಾಜರ ಹೃದಗಗನಗತ
ಈರನಂತರ್ಯಾಮಿ ತಾನಾ–
ಪಾರ ಕರುಣದಿ ಹರಿಕಥಾಮೃತಸಾರ ಗ್ರಂಥಕ್ಕೆ ।
ತೋರಿಸಿದ ವ್ಯಾಖ್ಯಾನವೆನುತಲಿ
ಸೂರಿಗಳು ಚಿತ್ತೈಸಲಾಕ್ಷಣ
ತಾರತಮ್ಯದಿ ಒಲಿವ ಶ್ರೀಇಭವರದವಿಠಲ ॥ 3 ॥

## ಕಠಿಣ ಅನುಷ್ಠಾನ

ಜಂಬುಖಂಡಿ ಆಚಾರ್ಯರ ಆತ್ಮಕಥನ ಮತ್ತು ಶ್ರೀಸುಧಾಕರ ಗುರುಗುಣರತ್ನಮಾಲೆಯನ್ನು ಅವಲೋಕಿಸಿದಾಗ ಅವರು ತಮ್ಮ

ಜೀವಿತದ ಬಹುಭಾಗವನ್ನು ತೀರ್ಥಯಾತ್ರೆಯಲ್ಲಿಯೇ ಕಳೆಯುತ್ತಿದ್ದಂತೆ ತೋರುತ್ತದೆ. "ಕಾಲಿಗೆ ಭೂಷಣ ಹರಿಯಾತ್ರೆಯು" ಎಂಬ ವಚನಕ್ಕನುಗುಣವಾಗಿ ಆಚಾರ್ಯರು ಅಂಕಿತ ಪಡೆದನಂತರವಂತೂ ವಿಶೇಷವಾಗಿ ಪುಣ್ಯಕ್ಷೇತ್ರಗಳ ಯಾತ್ರೆ ಕೈಗೊಳ್ಳತೊಡಗಿದರೆನ್ನಬಹುದು : 'ಕೀರ್ತನೈರ್ನರ್ತನೈರ್ದಿವ್ಯೈಃ ಪದ್ಯೈರ್ಗದ್ಯೈಃ ಸುಮಂಗಲ್ಯೈಃ ॥' ಎಂಬಂತಹ ಉಲ್ಲೇಖ ಆಚಾರ್ಯರು ಯಾತ್ರಾ ಸಮಯದಲ್ಲಿ ಹರಿದಾಸ ದೀಕ್ಷೆಗನುಗುಣವಾಗಿ ಕೀರ್ತನೆಗಳನ್ನು ಹಾಡುತ್ತಾ ನರ್ತಿಸುತ್ತಿದ್ದರೆಂಬು ದನ್ನು ಸ್ಪಷ್ಟಪಡಿಸುತ್ತದೆ. ಆಚಾರ್ಯರು ತಮ್ಮ ತಂದೆಯವರು ಮರಣ ಹೊಂದುವ ಮೊದಲು ನೀಡಿದ ಆದೇಶದಂತೆ ಅವರ ಅಸ್ಥಿಯನ್ನು ವಿಸರ್ಜಿಸಲು ಗಂಗಾ ನದಿಯನ್ನು ಕುರಿತು ಪ್ರಯಾಣ ಮಾಡಿ ಕಾಶಿ, ಪ್ರಯಾಗ, ಗಯಾ, ಬದರೀ ಮುಂತಾದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದ್ದರು.

ಪಾಂಚಾಲೇ ತು ಕುರುಕ್ಷೇತ್ರೇ ಇಂದ್ರಪ್ರಸ್ಥೇ ತು ಕೀಕಟೇ ।
ಪುನರ್ಗಮನಮೇವಾದ್ಧಾಽರೋಚಯಂ ಮತ್ಪಿತಃ ಪ್ರಭೋ ॥

ಎಂಬುದಾಗಿ ತಾವು ರಚಿಸಿರುವ ಆತ್ಮಕಥನದಲ್ಲಿ ಹೇಳಿರುವುದನ್ನು ನೋಡಿದರೆ ಆಚಾರ್ಯರು ಆ ಕಾರಣಕ್ಕಾಗಿಯೇ ಪಾಂಚಾಲದೇಶ, ಕುರುಕ್ಷೇತ್ರ, ಇಂದ್ರಪ್ರಸ್ಥ ಹಾಗೂ ಕೀಟಕದೇಶಗಳಿಗೆ ಭೇಟಿಕೊಟ್ಟು ಅಲ್ಲಿ ಅನುಷ್ಠಾನಪರರಾಗಿದ್ದರೆಂದು ತಿಳಿದು ಬರುತ್ತದೆ. ದಾಸ ದೀಕ್ಷೆಯನ್ನು ಪಡೆದ ನಂತರ ಅವರ ಪ್ರತಿಯೊಂದು ತೀರ್ಥ ಯಾತ್ರೆಯೂ ಸಹ ಸ್ವಬಿಂಬನಲ್ಲಿ ಕ್ಷೇತ್ರ ಪ್ರಭುವಿನ ಐಕ್ಯ ಚಿಂತನೆ ಮತ್ತು ವ್ಯಾಪ್ತೋಪಾಸನೆಗೆ ಅಪೂರ್ವ ಅವಕಾಶವನ್ನೇ ಕಲ್ಪಿಸಿತು. ಒಂದೊಂದು ಕ್ಷೇತ್ರದಲ್ಲಿಯೂ ಪ್ರಾಪ್ತವಾದ ಅಚ್ಯುತಾಂಘ್ರಿನಿಷ್ಠರ ಸಂಗಸುಖ ಮಂಟಪವನ್ನೇರುವ ನವೋಲ್ಲಾಸವನ್ನು ತುಂಬತೊಡಗಿತು. ಹಾಗಾಗಿ ಆಚಾರ್ಯರು ತಿರುಪತಿಯ ಬ್ರಹ್ಮೋತ್ಸವಗಳಲ್ಲಿ, ಉಡುಪಿಯ ಪರ್ಯಾಯೋತ್ಸವ ಗಳಲ್ಲಿ, ಮಳಖೇಡ, ಸೋದೆ, ಮಂತ್ರಾಲಯ, ಚಿಪ್ಪಗಿರಿ ಮುಂತಾದ

ಕ್ಷೇತ್ರಗಳಲ್ಲಿ ನಡೆಯುವ ಆರಾಧನಾ ಸಂದರ್ಭಗಳಲ್ಲಿ ತಪ್ಪದೇ ಕಾಣಿಸಿಕೊಳ್ಳಲು ಪ್ರಾರಂಭಿಸಿದರು. ಆಗಾಗ ಉತ್ತರ ಭಾರತಕ್ಕೂ ತೆರಳಿ ಗಂಗಾದಿ ಪವಿತ್ರ ತೀರ್ಥಗಳನ್ನು ಪರಮಾದರದಿಂದ ಸೇವಿಸ ತೊಡಗಿದರು.

ದಿವ್ಯವೀಣಾಮೃದಂಗಾದ್ಯೈಃ ದಾಸವರ್ಯಕೃತೈಃ ಪದ್ಯೈಃ ।
ಯುಕ್ತಂ ಮನೋರಮಃ ನೃತ್ಯಂ ತನ್ವನ್ಸಂಸದ್ಯರಾಜತ ॥

ವಹನ್ ಮಾಧುಕರೀಂ ವೃತ್ತಿಂ ಭೋಜಯನ್ ಸದ್ವಿಜಾನ್ ಬಹೂನ್ ।
ಜಪನ್ ಮಂತ್ರಾನ್ ಪಠನ್ ಗ್ರಂಥಾನ್ ಪ್ರೀಣಯಾಮಾಸ ಮಾಪತಿಮ್ ॥

ಎಂಬ ಶ್ರೀಷಟ್ಪುರಾಚಾರ್ಯರ ಉಕ್ತಿಯಂತೆ ಹರಿದಾಸರ ಪದ, ಸುಳಾದಿಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದ ಆಚಾರ್ಯರಿಗೆ ವೀಣೆ, ಮೃದಂಗಾದಿ ಸಂಗೀತ ವಾದ್ಯಗಳಲ್ಲಿ ಅಪಾರ ಪರಿಶ್ರಮವಿತ್ತು. ತಾವು ಪಂಡಿತರೆಂಬ ಒಣ ಅಭಿಮಾನವನ್ನು ತೊರೆದು, ದೇಹಮೋಹವನ್ನು ಬದಿಗೊತ್ತಿ ದಾಸ ದೀಕ್ಷೆಗನುಗುಣವಾಗಿ ಕಾಲಿಗೆ ಗೆಜ್ಜೆ ಕಟ್ಟಿ, ಹೆಜ್ಜೆ ಹೆಜ್ಜೆಗೂ ಕ್ಷೇತ್ರ ಪ್ರಭುವಿನ ಗುಣಾವಳಿಗಳನ್ನು ಕೊಂಡಾಡುತ್ತಾ ಲಜ್ಜೆಬಿಟ್ಟು ಮನೋಹರವಾಗಿ ನರ್ತಿಸುತ್ತಿದ್ದರು. ಇದಲ್ಲವೇ ಶ್ರೀಹರಿಯ ಗುಣಮಾಹಾತ್ಮ್ಯಗಳನ್ನು ಅರಿತ ಶಾಸ್ತ್ರಜ್ಞರ ನಿಜವಾದ ಲಕ್ಷಣ! ವಿನಯಾಭರಣಭೂಷಿತರಾದ ಪಂಡಿತವರೇಣ್ಯರ ಮಹೋನ್ನತ ಗುಣ! ಆಚಾರ್ಯರು ಪ್ರತಿಯೊಂದು ಸ್ಥಳದಲ್ಲಿಯೂ ಮಧುಕರಿ ವೃತ್ತಿಯನ್ನು ಕೈಗೊಂಡು, ಅದರಿಂದ ಪ್ರಾಪ್ತವಾದ ಧನಧಾನ್ಯಗಳನ್ನು ದೇವ ಬ್ರಾಹ್ಮಣರ ಆರಾಧನೆಗಾಗಿ ವಿನಿಯೋಗಿಸಿ ನೂರಾರು ಸದ್ವೈಷ್ಣವರಿಗೆ ನಿತ್ಯವೂ ಮೃಷ್ಟಾನ್ನ ಉಣಿಸುತ್ತಿದ್ದರು. ಬಾಗಿ ಭಜಿಸುವವರಿಗೆ ಜ್ಞಾನಭಕ್ತಿ ವೈರಾಗ್ಯಗಳ ಸತ್ಪಥವನ್ನು ತೋರಿಸಿ ಭವಬಂಧವನ್ನೇ ನೀಗುತ್ತಿದ್ದರು. ಗೋವತ್ಸನ್ಯಾಯ ದಂತೆ ತತ್ತ್ವಸುಧೆಯನ್ನು ಸೇವಿಸಲು ಕಾತುರರಾದ ಸುಜೀವಿಗಳನ್ನು ತಾವೇ ಮುಂದಾಗಿ ಹುಡುಕಿಕೊಂಡು ಹೋಗಿ ಅವರಿಗೆ ತಮ್ಮ ಉಪದೇಶಾಮೃತದಿಂದ ಉದ್ಧಾರದ ಹಾದಿಯನ್ನು ತೋರುತ್ತಿದ್ದರು.

ಕಮಲಾಪತಿಯ ಸಂಪ್ರೀತಿಗಾಗಿ ತಾವೂ ಸಹ ಸ್ವತಃ ಸಾಧನಪರರಾಗಿ ಜಪತಪಾದಿ ಕಠಿಣ ಅನುಷ್ಠಾನಗಳನ್ನು ಕೈಗೊಳ್ಳುತ್ತಿದ್ದರು[1].

ಪ್ರತಿವರ್ಷವೂ ಬ್ರಹ್ಮೋತ್ಸವದ ಸಂದರ್ಭದಲ್ಲಿ ಭೂವೈಕುಂಠವೆನ್ನಿಸಿದ ತಿರುಪತಿ ಕ್ಷೇತ್ರಕ್ಕೆ ಪ್ರಯಾಣ ಬೆಳೆಸುತ್ತಿದ್ದ ಆಚಾರ್ಯರ ಸಾಧನಕ್ರಮ ವಿಚಿತ್ರವೂ, ವಿಸ್ಮಯಕರವೂ ಆಗಿದ್ದಿತು. 'ಮತ್ಸರವನು ಅಳಿದು ಶ್ರೀವೇಂಕಟೇಶನ ಯಾತ್ರೆ ಉತ್ಸಾಹದಲಿ ಮಾಡೆ ವಿಜಯವಿಠಲ ಒಲಿವಾ' ಎಂಬ ಶ್ರೀವಿಜಯದಾಸರ ವಚನದಂತೆ ಉತ್ಸಾಹದ ಬುಗ್ಗೆಯಂತಿದ್ದ ಅವರು ತಿರುಮಲೆಯಲ್ಲಿ ಇದ್ದಷ್ಟು ಕಾಲವೂ ಪ್ರತಿದಿವಸ ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ಅಲ್ಲಿನ ಪವಿತ್ರ ತೀರ್ಥಗಳಾದ ಆಕಾಶಗಂಗಾ, ಪಾಪನಾಶಿನಿ, ವೈಕುಂಠತೀರ್ಥ, ಅನಂತತೀರ್ಥ, ಪಾಂಡುತೀರ್ಥ, ಕುಮಾರಧಾರಿಕಾ, ದುಗ್ಧಗಂಗಾ, ಜಾಬಲಿತೀರ್ಥ ಮತ್ತು ಸ್ವಾಮಿಪುಷ್ಕರಿಣಿ ಗಳಿಗೆ ತೆರಳಿ ಅವುಗಳಲ್ಲಿ ಜಲರೂಪದಲ್ಲಿ ಸನ್ನಿಹಿತನಾಗಿರುವ ತಿರುಮಲೇಶನನ್ನು ಚಿಂತಿಸುತ್ತಾ ವಿಧ್ಯುಕ್ತವಾಗಿ ಮೀಯುತ್ತಿದ್ದರು. ಸ್ನಾನಾಹ್ನಿಕಗಳ ನಂತರ ಸಂಭ್ರಮದಿಂದ ಲಕ್ಷ್ಮೀಧರನೂ ಚಿದಾನಂದಪ್ರದನೂ ಆದ ಶ್ರೀನಿವಾಸನ ಆನಂದಮಯಮೂರ್ತಿಯನ್ನು ಸಂದರ್ಶಿಸುತ್ತಿದ್ದರು. ಆಗ ಶ್ರೀಮದ್ವಾದಿರಾಜ ಪೂಜ್ಯ ಚರಣರು ತೀರ್ಥ ಪ್ರಬಂಧದಲ್ಲಿ ಹೇಳಿರುವ –

'ಸಮಸ್ತಸುಜನಾಧಾರಂ ದೋಷದೂರಂ ಗುಣಾಕರಮ್ ।
ಶ್ರೀವೇಂಕಟಾಚಲವಾಸಂ ಶ್ರೀನಿವಾಸಂ ಭಜೇಽನಿಶಮ್ ॥
ಆನಂದತೀರ್ಥವರದೇ ದಾನವಾರಣ್ಯಪಾವಕೇ ।
ಜ್ಞಾನದಾಯಿನಿ ಸರ್ವೇಶೇ ಶ್ರೀನಿವಾಸೇಽಸ್ತು ಮೇ ಮನಃ ॥'

---

1. ಏವಂ ಸಂಪಾದ್ಯ ಯತ್ನೈರ್ಗುರುವರಪರಮಾನುಗ್ರಹಂ ಮೋದಯುಕ್ತಃ
ಸ್ವೀಯಾನುದ್ಧರ್ತುಕಾಮಃ ಸರಣಿಮಕಲುಷಾಂ ದರ್ಶಯಾನ್ ಬಂಧಮುಕ್ತೇಃ ।
ನೃತ್ಯೈರ್ಗೀತ್ಯೈ ರಮೇಶಂ ನತಭವದಹನಂ ಪ್ರೀಣಯನ್ ಸರ್ವಕಾಲಂ
ಪಾಯಾತ್ ಶ್ರೀಜಂಬುಖಂಡ್ಯಾಭಿಧಗುರುರನುಕಂಪಾಂಬುಧಿಃ ಸಂಸೃತೇರ್ನಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ಚತುರ್ಥಾವಲಿ–27)

ಮುಂತಾದ ಪಂಕ್ತಿಗಳು ಸ್ಮರಣೆಗೆ ಬಂದರಂತೂ ಆಚಾರ್ಯರು ಭಕ್ತ್ಯುದ್ರೇಕದಿಂದ ಭಾವಪರವಶರಾಗುತ್ತಿದ್ದರು. 'ನಮೋನಮೋ ವಿಜಯ ವಿಠಲ ತಿರುವೆಂಗಳಪ್ಪ ಕೋಲಾ । ನಮೋ ನಮೋ ನಮ್ಮನು ಸಾಕುವ ಸೊಬಗೇ' ಎಂದು ಪುನಃ ಪುನಃ ಪ್ರಣಾಮಗಳನ್ನು ಸಲ್ಲಿಸುತ್ತಾ ಪುಳಕಿತ ರಾಗುತ್ತಿದ್ದರು. ವೇದವೇದ್ಯನೂ ಅಪ್ರಾಕೃತನೂ ಆದ ಅವನ ಗುಣಾವಳಿ ಗಳನ್ನು ಶ್ರುತಿ, ಸ್ಮೃತಿ, ಪುರಾಣೋಕ್ತ ಸ್ತೋತ್ರಗಳಿಂದ ಮತ್ತು ಹರಿದಾಸರ ಪದಘದ್ಯಗಳಿಂದ ಕೊಂಡಾಡುತ್ತಾ ಶ್ರದ್ಧಾಭಕ್ತಿಗಳಿಂದ ಅವನ ಕೈಂಕರ್ಯ ನಿರತರಾಗುತ್ತಿದ್ದರು.

'ಸುರರು ಗಂಧರ್ವರು ಉರಗ ಯಕ್ಷ ಸಿದ್ಧ।
ಗರುಡ ಕಿಂಪುರುಷ ಕಿನ್ನರರು ಗುಹ್ಯಕರು ಸಾ।
ಧ್ಯರು ತುಂಬುರಾದಿ ನಿಕರವಲ್ಲಿಗಲ್ಲಿಗೆ।
ವರ ತಪಸಿಗಳಾಗಿ ಗಿರಿಯ ತಪ್ಪಲಲ್ಲೀ।
ಗರುಡಾಸನ ನಮ್ಮ ವಿಜಯವಿಠಲನ್ನ।
ಸ್ಮರಣೆ ಮಾಡುತ ಸಂಚರಿಪುದು ಕಂಡೆ ॥'

ಎಂಬುದಾಗಿ ಶ್ರೀವಿಜಯದಾಸಾರ್ಯರು ನುಡಿದಂತೆ ದೇವತಾದಿಗಳು ತಾಪಸಿಗಳಾಗಿ ಶ್ರೀನಿವಾಸನ ಮಂಗಳ ರೂಪವನ್ನರಸುತ್ತಾ ನಿತ್ಯ ಸಂಚರಿಸುವ ಅಲ್ಲಿನ ದುರ್ಗಮವಾದ ಅರಣ್ಯ ಪ್ರದೇಶಗಳ ನಡುವೆ ಆಚಾರ್ಯರು ನಿರ್ಭಯವಾಗಿ ನಡೆದಾಡುತ್ತಾ ಶ್ರೀಶನ ಒಲುಮೆಗಾಗಿ ನಿರಶನಾದಿ ವ್ರತಗಳನ್ನು ಕೈಗೊಂಡು ಅವರು ನಡೆಸುತ್ತಿದ್ದ ಮನುಷ್ಯ ಪ್ರಯತ್ನಕ್ಕೆ ಮೀರಿದ ಅನುಷ್ಠಾನ ಎಂತಹವರಲ್ಲಿಯೂ ಆಶ್ಚರ್ಯ ಮೂಡಿಸುವಂತಿತ್ತು. ತಿರುಪತಿಯಲ್ಲಿದ್ದಾಗಲೇ ಒಮ್ಮೆ ತೀವ್ರವಾಗಿ ಕಾಡಿದ ಶೀತಜ್ವರಬಾಧೆಯಿಂದಾಗಿ ಸುಮಾರು ಎಂಟು ತಿಂಗಳುಗಳ ಕಾಲ ನರಳಬೇಕಾಗಿಬಂದರೂ ಆಚಾರ್ಯರು ಧೃತಿಗೆಡದೆ ಸಂಕಲ್ಪಿತ ಸೇವೆಯನ್ನು ಪೂರ್ಣಗೊಳಿಸಿದ್ದು ಮತ್ತೊಂದು ವಿಶೇಷವಾಗಿತ್ತು[1].

1. ಶ್ರೀನಿವಾಸಂ ಪರಿದ್ರಷ್ಟುಂ ಏಕಸ್ಮಿನ್ ಪ್ರಗತೇ ಮಯಿ।
ಅಷ್ಟಮಾಸಾ ಹ್ಯತಿಕ್ರಾಂತಾ ಹೈಮಜ್ವರಸುಪೀಡಿತೇ ॥

– ಆಚಾರ್ಯರ ಆತ್ಮಕಥನ

ಒಂದು ಸಲ ಜಂಬುಖಂಡಿ ಆಚಾರ್ಯರು ತಮ್ಮ ವಿದ್ಯಾಗುರುಗಳಾದ ಕೃಷ್ಣಾಪುರಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥರ ಜೊತೆಗೆ ತಿರುಪತಿಗೆ ಹೋಗಿದ್ದಾಗ ಅಲ್ಲಿನ ಅರ್ಚಕನೊಬ್ಬ ಶ್ರೀಗಳವರಿಗೆ ಅಗೌರವವುಂಟಾಗುವಂತೆ ನಡೆದುಕೊಂಡನಲ್ಲದೆ, ಸಂಸ್ಥಾನಾಧಿಪತಿಗಳಾದ ಅವರಿಗೆ ಏಕಾಂತ ದರ್ಶನಕ್ಕೂ ಸಹ ಅಡ್ಡಿಪಡಿಸಿದ. ಇದನ್ನು ಕಂಡು ಗುರುಸೇವಾಧುರಂಧರರಾದ ಆಚಾರ್ಯರಿಗೆ ಬಹಳ ದುಃಖವುಂಟಾಯಿತು.

ತೇನ ಕಿಂಚಿದ್‌ದೂಯಮಾನಮಾನಸಾನವಲೋಕ್ಯ ಸ।
ಪೂಜಕಂ ಪ್ರತ್ಯುವಾಚೇದಂ ಘನಗಂಭೀರಯಾ ಗಿರಾ ॥

ಆಗ್ರಹಗ್ರಸ್ತಮದ್ವಾಕ್ಯಂ ಸಾವಧಾನಂ ಶ್ರುಣಷ್ವ ಭೋ।
ಶ್ವರೇವ ನಿಕಟೇ ಸ್ಥಾತುಂ ವೇಂಕಟಾಚಲವಾಸಿನಃ ॥

ಮಯ್ಯೈವ ಸಾಧು ರಾಜಾಜ್ಞಾನೀಯತೇ ಪಶ್ಯ ಪೂಜಕ।
ನೋ ಚೇತ್ಕೃತಂ ಮಯ್ಯೈವೇದನ್ಯಥಾ ಸಾಮ ಮೇ ಭವೇತ್ ॥

– ಶ್ರೀಸುಧಾಕರಗುರುಗುಣರತ್ನಮಾಲಾ (ಚತುರ್ಥಾವಲಿ 12/14)

ಎಂಬಂತೆ ಅವರು ಆ ಅರ್ಚಕನಿಗೆ ಎಷ್ಟು ಪರಿಯಾಗಿ ತಿಳಿ ಹೇಳಿದರೂ ಆತ ಕೇಳದಿದ್ದಾಗ ಆಚಾರ್ಯರು ಕೆರಳಿ "ಎಲವೋ ದುರಾಗ್ರಹಿಯಾದ ಅರ್ಚಕ, ಮಹಾತಪಸ್ವಿಗಳೂ ಪರಮಹಂಸರೂ ಆದ ನಮ್ಮ ಗುರುವರ್ಯರು ನಿರಾತಂಕವಾಗಿ ಶ್ರೀನಿವಾಸನ ದರ್ಶನ ಮಾಡಲು ಅಡ್ಡಿಪಡಿಸುವ ನಿನ್ನ ಉದ್ಧಟತನ ಸರ್ವದಾ ಸರಿಯಲ್ಲ. ಈ ಪುಣ್ಯ ಸನ್ನಿಧಿಯಲ್ಲಿರುವ ನಿನ್ನ ಸ್ಥಾನಕ್ಕೂ ಶೋಭೆತರುವಂತಹುದಲ್ಲ. ಇರಲಿ, ನಿನ್ನೊಡನೆ ವಾದಿಸಿ ಏನು ಪ್ರಯೋಜನ? ನಮ್ಮ ಪ್ರತಿಜ್ಞೆಯನ್ನು ಕೇಳು. ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮಹಾಸಂಸ್ಥಾನದ ಅಧಿಪತಿಗಳಾದ ನಮ್ಮ ಗುರುಗಳನ್ನು ಈ ದೇವಸ್ಥಾನದ ಅರ್ಚಕ ಮಂಡಲಿಯೇ ಪೂರ್ಣಕುಂಭದಿಂದ ಸ್ವಾಗತಿಸಿ ಗೌರವಪೂರ್ವಕವಾಗಿ ಸ್ವಾಮಿಯ ದರ್ಶನಕ್ಕೆ ಕರೆದುಕೊಂಡು ಹೋಗಬೇಕು. ಹಾಗೆ ಮಾಡುತ್ತೇವೆ. ಇದನ್ನು ಕಾರ್ಯಗತಗೊಳಿಸಲು ಸೂಕ್ತ ರಾಜಾಜ್ಞೆಯನ್ನು ನಾಳಿನ ದಿವಸವೇ ತರುತ್ತೇವೆ. ಇದು ನಿಶ್ಚಯ. ಹಾಗೆ ಮಾಡದಿದ್ದರೆ ಸ್ವಾದೀಶರ

ಪರಮಾನುಗ್ರಹದಿಂದ ಜನಿಸಿದ 'ವಾದಿರಾಜಾಚಾರ್ಯ'ರೆಂಬ ನಮ್ಮ ಹೆಸರನ್ನೇ ಬದಲಾಯಿಸಿಕೊಳ್ಳುತ್ತೇವೆ. ಇದು ಸತ್ಯ" ಎಂದು ಘನಗಂಭೀರ ವಾಣಿಯಿಂದ ಸವಾಲೆಸೆದರು. ಆಚಾರ್ಯರ ಆ ಸಾತ್ವಿಕರೋಷವನ್ನು ಕಂಡು ಆ ಅರ್ಚಕನಿಗೆ ಅತ್ಯಾಶ್ಚರ್ಯವಾಯಿತು. ಇಂತಹ ಸಿಂಹಗರ್ಜನೆಯನ್ನು ಆತ ಸ್ವಾಮಿಯ ದರ್ಶನಕ್ಕಾಗಿ ಬಂದ ಒಬ್ಬ ಸಾಮಾನ್ಯ ವೈದಿಕ ಬ್ರಾಹ್ಮಣನಿಂದ ನಿರೀಕ್ಷಿಸಿರಲಿಲ್ಲ. ಆತ ದಂಗು ಬಡಿದವನಂತೆ ನಿಂತುಬಿಟ್ಟ. ಆದರೆ ಆಚಾರ್ಯರು ಮಾತ್ರ ಅಷ್ಟಕ್ಕೆ ನಿಲ್ಲಲಿಲ್ಲ. ಛಲಗಾರರಾದ ಅವರು ಕೂಡಲೇ ತಮ್ಮ ಗುರುಗಳ ಅಪ್ಪಣೆಯನ್ನು ಪಡೆದು ಗಿರಿಯನ್ನಿಳಿದು ಗೋವಿಂದರಾಜಪಟ್ಟಣಕ್ಕೆ ಬಂದರು. ಅಲ್ಲಿಂದ ರಾಜದರ್ಶನಕ್ಕಾಗಿ ಸಾಕಷ್ಟು ಪ್ರಯತ್ನಪಟ್ಟರು. ತಕ್ಷಣವೇ ಫಲಸಿಗದಿದ್ದಾಗ ಹರಿಗುರುಗಳನ್ನು ಪ್ರಾರ್ಥಿಸಿ ರಾಜನಿಗೆ ನಿಕಟವಾಗಿದ್ದ ಮಂತ್ರಿಯೊಬ್ಬನ ಶಿಫಾರಸ್ಸಿನ ಮೂಲಕ ರಾಜನನ್ನು ಭೇಟಿಯಾದರು. ರಾಜನಿಗೆ ಅಲ್ಲಿನ ತನಕ ನಡೆದ ಸಾದ್ಯಂತ ವಿಷಯಗಳನ್ನು ತಿಳಿಸಿದ ಆಚಾರ್ಯರು ತೀರ್ಥ ಕ್ಷೇತ್ರಗಳನ್ನೇ ಪವಿತ್ರೀಕರಿಸುವ ತಪೋನಿಧಿಗಳಾದ ತಮ್ಮ ಗುರುಗಳಿಗೆ ತಿರುಮಲೆಯಲ್ಲಿರುವ ಕೆಲವು ಉದ್ಧಟರ ದೆಸೆಯಿಂದ ಸ್ವಾಮಿಯ ದರ್ಶನಭಾಗ್ಯಕ್ಕೆ ಅವಕಾಶವಿಲ್ಲದಾಗಿದೆ. ಆ ಮಹಾನುಭಾವರಿಗೆ ಕ್ಷಿಪ್ರದಲ್ಲಿ ಶ್ರೀನಿವಾಸನ ಏಕಾಂತದರ್ಶನ ಮಾಡಲು ಸೂಕ್ತ ರಾಜಾಜ್ಞೆಯನ್ನು ಹೊರಡಿಸಬೇಕೆಂದು ಪ್ರಾರ್ಥಿಸಿದರು. ಆಚಾರ್ಯರ ಧೀರೋದಾತ್ತ ನಿಲುವು, ತೇಜಃಪುಂಜವದನ, ನೋಡುವವರ ಅಂತರಾಳವನ್ನು ಕ್ಷಣಾರ್ಧದಲ್ಲಿ ಶೋಧಿಸುವಂತಹ ಪ್ರಖರ ಕಣ್ಣುಗಳು, ಸ್ಫಟಿಕದ ಶಲಾಕೆಯಂತಹ ಸುಸ್ಪಷ್ಟವಾಣಿ, ಅನುಪಮ ಗುರುಭಕ್ತಿ ಮುಂತಾದವುಗಳು ಧರ್ಮಿಷ್ಠನಾದ ರಾಜನ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು. "ಇವರೇ ಹೀಗಿರುವರೆಂದ ಮೇಲೆ ಇವರ ಗುರುಗಳಾದ ಶ್ರೀಗಳವರು ಇನ್ನೆಂತಹ ಮಹಿಮಾನ್ವಿತ ವ್ಯಕ್ತಿತ್ವವನ್ನು ಹೊಂದಿರಬಹುದು. ಇಂತಹ ಮಹಾತ್ಮರನ್ನು ದೈವದರ್ಶನಕ್ಕೆ ಅಡ್ಡಿಪಡಿಸುವುದು ಮಹಾಪರಾಧ' ಎಂದು ವಿಚಾರ ಮಾಡಿದ ಸಾಧುಸ್ವಭಾವದ ಆ ರಾಜ ಕೂಡಲೇ ತಮ್ಮ ಸಚಿವರನ್ನು ಬರಮಾಡಿಕೊಂಡು ರಾಜಾಜ್ಞೆಯ ಪತ್ರವನ್ನು ಸಿದ್ಧಪಡಿಸಲು ಸೂಚಿಸಿದ.

“ಶ್ರೀನಿವಾಸನ ದರ್ಶನಕ್ಕೆ ಆಗಮಿಸಿರುವ ಉಡುಪಿ ಮಠದ ಪರಮಪೂಜ್ಯ ಶ್ರೀಕೃಷ್ಣಾಪುರ ಮಠಾಧೀಶರಿಗೆ ಆಶ್ರಮೋಚಿತ ಗೌರವವನ್ನು ಸಲ್ಲಿಸಿ ಅವರಿಗೆ ಮತ್ತು ಅವರ ಶಿಷ್ಯವರ್ಗದವರಿಗೆ ಸಕಲ ಮರ್ಯಾದೆ ಗಳೊಂದಿಗೆ ದೇವರ ದರ್ಶನಕ್ಕೆ ಅನುಕೂಲ ಮಾಡಿಕೊಡತಕ್ಕದು. ಈ ಯತಿವರೇಣ್ಯರ ಮನಸ್ಸಿಗೆ ಖೇದವುಂಟಾಗದಂತೆ ನಡೆದುಕೊಂಡು ಅವರಿಗೆ ಸ್ವಾಮಿಯ ಏಕಾಂತ ದರ್ಶನಕ್ಕೆ ಅವಕಾಶ ಕಲ್ಪಿಸತಕ್ಕದ್ದು. ಇದು ರಾಜಾಜ್ಞೆ. ಇದನ್ನು ಪಾಲಿಸದಿದ್ದವರು ಕಠಿಣ ಶಿಕ್ಷೆಯನ್ನು ಎದುರಿಸ ಬೇಕಾಗುವುದು” ಎಂಬ ಆಜ್ಞಾಪತ್ರ ಕ್ಷಿಪ್ರದಲ್ಲಿ ತಯಾರಾಗಿ ರಾಜನ ಸಹಿ ಹಾಗೂ ಮೊಹರೊಡನೆ ಆಚಾರ್ಯರ ಕೈಸೇರಿತು.

ಇದನ್ನು ಕಂಡು ಆಚಾರ್ಯರಿಗೆ ಮಹದಾನಂದವಾಯಿತು. ‘ಕಿಮಲಭ್ಯಂ ಭಗವತಿ ಸುಪ್ರಸನ್ನೇ ಶ್ರೀನಿಕೇತನೇ’ ಎಂಬಂತೆ ಭಗವದನುಗ್ರಹ ವಿದ್ದರೆ ಯಾವುದು ತಾನೇ ಅಸಾಧ್ಯ! ಹರಿವಾಯು ಗುರುಗಳ ಪರಮಾನುಗ್ರಹವನ್ನು ಸ್ಮರಿಸಿ ಅವರ ಕಣ್ಣಾಲಿಗಳು ತೇಲಿಬಂದವು. ಅವರು ತಡಮಾಡದೆ ರಾಜಮುದ್ರಿಕೆಯೊಂದಿಗೆ ಮೊಹರು ಮಾಡಲಾಗಿದ್ದ ಆ ಪತ್ರವನ್ನು ತೆಗೆದುಕೊಂಡು ಕ್ಷಿಪ್ರಗತಿಯಲ್ಲಿ ಗಿರಿಯನ್ನೇರಿ ದೇವಸ್ಥಾನವನ್ನು ತಲುಪಿದರು. ಕೂಡಲೇ ಅಲ್ಲಿದ್ದ ಅ ಅರ್ಚಕನಿಗೆ ತಾವು ತಂದಿದ್ದ ರಾಜಾಜ್ಞೆಯ ಪತ್ರವನ್ನು ನೀಡಿ ಶ್ರೀಕ್ಷೇತ್ರಕ್ಕೆ ಆಗಮಿಸಿರುವ ಶ್ರೀಕೃಷ್ಣಾಪುರ ಮಠಾಧೀಶರಿಗೆ ಶ್ರೀನಿವಾಸನ ದರ್ಶನ ಮಾಡಲು ಸೂಕ್ತ ವ್ಯವಸ್ಥೆ ಮಾಡಬೇಕೆಂದು ಅದೇ ಧೀರ, ಗಂಭೀರ ವಾಣಿಯಿಂದ ಒತ್ತಾಯಿಸಿದರು. ಅರ್ಚಕನಿಗೆ ಆಚಾರ್ಯರ ಸಾಹಸವನ್ನು ಕಂಡು ಮತ್ತಷ್ಟು ಆಶ್ಚರ್ಯವಾಯಿತು. ಆದರೂ ದುರಾಗ್ರಹಿಯಾದ ಆತನ ಕೋಪ ಮಾತ್ರ ಶಮನವಾಗಲಿಲ್ಲ. ರಾಜಾಜ್ಞೆಯನ್ನು ಮೀರಿದರೆ ಕಠಿಣ ಶಿಕ್ಷೆಯನ್ನು ಎದುರಿಸಬೇಕಾದೀತೆಂಬ ಭಯದಿಂದ ಆತ ಗುರುಗಳ ದರ್ಶನಕ್ಕೆ ಅಪ್ಪಣೆಯಿತ್ತ. ಆ ನಂತರ ದೇವಸ್ಥಾನದ ಅರ್ಚಕ ಮಂಡಲಿಯಿಂದ ಶ್ರೀಕೃಷ್ಣಾಪುರ ಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರಿಗೆ ಪೂರ್ಣಕುಂಭ ಸ್ವಾಗತ ನೀಡಿ ಸಂಸ್ಥಾನೋಚಿತವಾದ

ಮರ್ಯಾದೆಗಳೊಂದಿಗೆ ದೇವಸ್ಥಾನಕ್ಕೆ ಕರೆದುಕೊಂಡು ಶ್ರೀನಿವಾಸನ ದರ್ಶನ ಮಾಡಿಸಲಾಯಿತು. ಶ್ರೀಗಳವರು ಶ್ರೀನಿವಾಸನನ್ನು ಕಣ್ತುಂಬ ನೋಡಿ ಭಕ್ತ್ಯುದ್ರೇಕದಿಂದ ಸ್ವಾಮಿಯ ಗುಣಗಾನ ಮಾಡಿ ಸಂತೋಷಪಟ್ಟರು. ಶ್ರೀಗಳವರಿಗೆ ಶ್ರೀನಿವಾಸನ ಪ್ರಸಾದರೂಪವಾಗಿ ಹೊದ್ದಿಸಿದ್ದ ಶೇಷವಸ್ತ್ರವನ್ನು ಆಚಾರ್ಯರು ಕೊಡಿಸಿದರಲ್ಲದೇ ತಾವು ಹಿಂದೆ ಕಾಶ್ಮೀರಕ್ಕೆ ಹೋಗಿದ್ದಾಗ ಅಲ್ಲಿನ ರಾಜನಿಂದ ಬಹುಮಾನವಾಗಿ ಪಡೆದುಕೊಂಡು ಬಂದಿದ್ದ ಪಲ್ಲಕ್ಕಿಯನ್ನೂ ಸಹ ಗುರುಗಳಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿದರು[1]. ಆಚಾರ್ಯರ ಗುರುಭಕ್ತಿಯನ್ನು ಕಂಡು ಶ್ರೀಗಳವರು ಪರಮಾನಂದಭರಿತರಾಗಿ ಹೃತ್ಪೂರ್ವಕವಾಗಿ ಶಿಷ್ಯರನ್ನು ಆಶೀರ್ವದಿಸಿದರು.

ತಿರುಪತಿಯಂತೆಯೇ ಪರಮಾತ್ಮನ ದಿವ್ಯಸನ್ನಿಧಾನವುಳ್ಳ, ಅಂತ್ಯರಂಗವೆಂದು ಪ್ರಸಿದ್ಧವಾದ ಶ್ರೀರಂಗಕ್ಷೇತ್ರಕ್ಕೂ ಆಚಾರ್ಯರು ಅನೇಕ ಬಾರಿ ದರ್ಶನಾಕಾಂಕ್ಷಿಯಾಗಿ ಭೇಟಿ ನೀಡಿದ್ದರು. ಒಮ್ಮೆ ಆಚಾರ್ಯರು ಶ್ರೀರಂಗಕ್ಕೆ ಆಗಮಿಸಿದಾಗ ಕೃಷ್ಣಾಪುರ ಮಠಾಧೀಶರೂ ಸಹ ಅಲ್ಲಿ ವಾಸ್ತವ್ಯ ಹೂಡಿದ್ದರು.

ಏಕದಾಗುರ್ಮಹಾಸಂಕಟೇ ಸಂಗತೇ
ರಂಗಪುರ್ಯಾಂ ಹಿ ಕೃಷ್ಣಾಪುರಾಧೀಶ್ವರಾಃ ।

---

1. ಅಥ ಕೃಷ್ಣಾಪುರಮಠಾಧೀಶಾಃ ಸ್ವಾಮಿನಂ ಭಕ್ತವತ್ಸಲಮ್ ।
ಶ್ರೀವೇಂಕಟಾಚಲವಾಸಂ ಪ್ರಣೇಮುಃ ಶ್ರೀಹರಿಂ ಮುದಾ ॥
ಅಸ್ತುವನ್ ಗದ್ಯಪದ್ಯಾದಿಶ್ಲೋಕೈಶ್ಚ ಕಮಲಾಪತಿಮ್ ।
ತದಾಜ್ಞಾಮುರರೀಕೃತ್ಯ ಗಂತುಕಾಮಾ(ಮೋ)ಯದಾ ಪುರಮ್ ॥
ತದಾಯಂ ದಾಪಯಾಮಾಸ ಕೌಶೇಯಂ ವಸ್ತ್ರಮುತ್ತಮಮ್ ।
ದಿವ್ಯಮಾಂದೋಲನಂ ತೇಷಾಂ ದದೌ ಗುರುಮನಃಪ್ರಿಯಮ್ ॥
ತತ್ಸಾಹಸಂ ತದಾ ವೀಕ್ಷ್ಯ ಪರಮಾನಂದನಿರ್ಭರಾಃ ।
ಅನ್ವಗೃಹ್ಣನ್ಯತಿವರಾಃ ಸ್ವಶುಶ್ರೂಷಣದೀಕ್ಷಿತಮ್ ॥
– ಶ್ರೀಸುಧಾಕರಗುರುಗುಣರತ್ನಮಾಲಾ
ಚತುರ್ಥಾವಲಿ (23–26)

ತ್ಯಕ್ತನ್ನೀರಾನ್ನನಿದ್ರಾದಿಕಾ ನಿರ್ಜನಾಂ
ವಸ್ತುಮತ್ಯಂತಚಿಂತಾವರೋಪಾಟವೀಮ್ ॥

ಏತ್ಯಮತ್ಯಂತದುಃಖಾನ್ವಿತಂ ಸದ್ಗುರೋಃ
ಕುಪ್ರಸಂಗಂ ನಿಶಮ್ಯಾರ್ತಚಿತ್ತೋ ಗುರುಃ ।
ತತ್ಪದಾಂಭೋಜವೀಕ್ಷೋತ್ಸುಕಃ ಸಂತ್ಯಜ-
ನ್ನನ್ನನೀರಾದಿಕಂ ನಿರ್ಗತೋ ಗ್ರಾಮತಃ ॥

ತತ್ರ ಗತ್ವಾ ನಮನ್ನಾದರೇಣಾನ್ವಿತಃ
ಸ್ವರ್ಚಯಾಮಾಸ ಗುರ್ವಂರಂಗಂ ಹರಿಮ್ ।
ಪ್ರೀಯತಾಮಿತ್ಯನೇಕೋಪಚಾರೈರಯಂ
ಭಕ್ತಿಯುಕ್ತೋ ಮಾಧವಂ ಯಥಾ ಫಲ್ಗುನಃ ॥

ಕೇಶರೈಲಾಸುಕರ್ಪೂರಕಸ್ತೂರಿಕಾ-
ಮಿಶ್ರಗಂಧೇನ ಲಿಪ್ತ್ವಾಖಿಲವಿಗ್ರಹಮ್ ।
ಪಾದಯೋಃ ಷಟ್‌ಶತಂ ಮುದ್ರಿಕಾನಾಂ ಕಿರನ್
ಮೋದತೇ ಮಾನಸಂ ಸದ್ಗುರೂಣಾಂ ಯಥಾ ॥

ಎಂಬ ಶ್ರೀಸುಧಾಕರ ಗುರುಗುಣರತ್ನಮಾಲೆಯ ಚತುರ್ಥಾವಲಿಯ ಉಕ್ತಿಗಳನ್ನು ನೋಡಿದರೆ ಆ ಸಂದರ್ಭದಲ್ಲಿ ಶ್ರೀಗಳವರು ಹಣಕಾಸಿನ ಮುಗ್ಗಟ್ಟಿನಿಂದಾಗಿ ಮಾನಸಿಕ ಕ್ಲೇಶಕ್ಕೆ ಒಳಗಾಗಿದ್ದರೆಂದೂ, ಚಲಪ್ರತಿಮಾ ಪೂಜೆಯಲ್ಲಿ ನಿಷ್ಣಾತರಾದ ಆಚಾರ್ಯರು ಫಲ್ಗುಣನು ಮಾಧವನನ್ನು ಪ್ರತ್ಯಕ್ಷವಾಗಿ ಅರ್ಚಿಸಿ, ಆರಾಧಿಸಿದಂತೆ, ಗುರುಗಳನ್ನು ದಿವ್ಯಪೀಠದ ಮೇಲೆ ಕೂಡಿಸಿ, ಪ್ರತಿಮಾದಿಗಳಿಗೆ ಮಾಡುವ ಹಾಗೆ ಅವರಿಗೆ ಕೇಸರಿ, ಕಸ್ತೂರಿ, ಕರ್ಪೂರ ಮೊದಲಾದ ಸುಗಂಧ ದ್ರವ್ಯಯುಕ್ತ ಗಂಧವನ್ನು ಲೇಪಿಸಿ ಷೋಡಶೋಪಚಾರ ಪೂಜೆಗಳನ್ನು ಮಾಡಿ ಗುರ್ವಂತರ್ಗತನನ್ನು ಸಂತುಷ್ಟಿಗೊಳಿಸಿದರಲ್ಲದೆ ಗುರುಕಾಣಿಕೆಯಾಗಿ ಆರುನೂರು ಸುವರ್ಣ ನಾಣ್ಯಗಳನ್ನು ಶ್ರೀಗಳವರ ಚರಣಾರವಿಂದಕ್ಕೆ ಅರ್ಪಿಸಿ ಅವರಿಗೆ ಬಂದಿದ್ದ ಆರ್ಥಿಕ ತೊಂದರೆಯನ್ನು ನಿವಾರಿಸಿದರೆಂದೂ ತಿಳಿದು ಬರುತ್ತದೆ. ಆಚಾರ್ಯರ ಅಸೀಮ ಗುರುಭಕ್ತಿಯನ್ನು ಮೆಚ್ಚಿಕೊಂಡ ಶ್ರೀಗಳವರು

ಶಿಷ್ಯನನ್ನು ನಾನಾ ಪರಿಯಾಗಿ ಶ್ಲಾಘಿಸಿ ಆಶೀರ್ವದಿಸಿದರೆಂಬ ಉಲ್ಲೇಖ ಶ್ರೀಸುಧಾಕರ ಗುರುಗುಣರತ್ನಮಾಲಾದಲ್ಲಿ ಬರುತ್ತದೆ.

ಕಡಗೋಲು ಹಾಗೂ ನೇಣನ್ನು ಪಿಡಿದು ಮಧ್ವಸರೋವರದ ದಂಡೆಯ ಮೇಲೆ ಮಧ್ವವರದನಾಗಿ ನಿಂತಿರುವ ಯಾದವೇಶನ ಸನ್ನಿಧಾನಯುಕ್ತ ಸ್ಥಳವಾದ ಉಡುಪಿ ಕ್ಷೇತ್ರವೂ ಆಚಾರ್ಯರಿಗೆ ಅತ್ಯಂತ ಪ್ರಿಯವಾದ ಕ್ಷೇತ್ರಗಳಲ್ಲಿ ಒಂದಾಗಿತ್ತು. ಕೃಷ್ಣನ ಸನ್ನಿಧಾನದಲ್ಲಿಯೇ ಉಪನೀತರಾಗಿ, ಅಲ್ಲಿನ ಕೃಷ್ಣಾಪುರ ಮಠದಲ್ಲಿ ಅನೇಕ ವರ್ಷಗಳ ಕಾಲ ಶಾಸ್ತ್ರ ವ್ಯಾಸಂಗದಲ್ಲಿ ತೊಡಗಿದ್ದುದರಿಂದ ಉಡುಪಿ ಅವರ ಮನೆಯಂಗಳ ದಂತೆಯೇ ತೋರುತ್ತಿತ್ತು. ಉಡುಪಿಗೊಡೆಯನಾದ ಶ್ರೀಕೃಷ್ಣ ಆಚಾರ್ಯ ರಿಗೆ ಮನಮೆಚ್ಚುವ ಇಷ್ಟ ದೈವವೇ ಆಗಿದ್ದನು.

**'ಸಕಲದೇಶದ ಜನರು ತ್ರಿವಿಧ**
**ಸುಖವಾರಿಧಿಯೊಳು ಸೂಸುತಾ**
**ಅಖಿಲವೈಭವದಿಂದ ಬಪ್ಪ**
**ಅಕಟಸಂದಣಿಗೇನೆಂಬೆ**
**ಮಕರರಾಶಿಗೆ ಸೂರ್ಯ ಬಂದ ಕಾ–**
**ಲಕೆ ಕೃಷ್ಣನ ನೋಡುವೆವೆಂದು**
**ಚಕನೆ ನಿಲ್ಲದೆ ಬಂದು ನೆರದದು**
**ಮುಕುತಾರ್ಥ ಹರಿಪ್ರೇರಕಾ ॥'**

ಎಂಬ ದಾಸವಾಣಿಯಂತೆ ಯಾದವೇಶನ ದರ್ಶನವನ್ನು ಪಡೆಯಲು ಆಚಾರ್ಯರು ಅಲ್ಲಿ ನಡೆಯುವ ಪರ್ಯಾಯೋತ್ಸವಗಳಲ್ಲಿ, ಮಕರ ಸಂಕ್ರಮಣಾದಿ ವಿಶೇಷ ಪರ್ವಕಾಲಗಳಲ್ಲಿ ತಪ್ಪದೇ ಹಾಜರಿರುತ್ತಿದ್ದರು. ಕರುಣಾಸಮುದ್ರನೂ, ಗೋಪಾಲಬಾಲನೂ ಆದ ಮಧ್ವೇಶಕೃಷ್ಣನ ಮಂಗಳಕರ ಬಾಲ ರೂಪವನ್ನು ಮನೋಮಂದಿರದಲ್ಲಿ ಪ್ರತಿಷ್ಠಾಪಿಸಿ ಕೊಂಡು 'ಬಾಲ ರೂಪವೇ ಮೂಲ ರೂಪ । ಮೂಲ ರೂಪವೇ ಬಾಲ ಪುರಂದರವಿಠಲ' ಎಂದು ನಲಿ ನಲಿದಾಡುತ್ತಿದ್ದರು.

ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ಬರೆದು ಪ್ರಸಿದ್ಧರಾದ ಶ್ರೀಜಯತೀರ್ಥರಲ್ಲಂತೂ ಆಚಾರ್ಯರಿಗೆ ಅಪರಿಮಿತವಾದ ಭಕ್ತಿಯಿತ್ತು. ಅವರ ಹೆಸರನ್ನು ಕೇಳಿದರೆ ಸಾಕು ಅವರ ಹೃದಯ ಹೂವಾಗಿ ಅರಳುತ್ತಿತ್ತು. ಗುರುಗಳ ಗುಣಾವಲಿಗಳನ್ನು ಸ್ಮರಿಸುತ್ತಾ,

ವಿಧಿನುತವರಪಾರಾಶರ್ಯಸೂತ್ರಾಣಿ ಕೃತ್ವಾ
ಜಲಧಿಮಲಘುಸೂತ್ರಾಣ್ಯಪ್ಯಮಂಥಾಚಲಂ ಚ ।
ಮರುದನುಭಣಿತಿಂ ಯನ್ಮಂಥನಾತ್ ಪ್ರಾದುರಾಸೀತ್
ಪ್ರದಿಶ ಶುಭದೃಶಂ ಮೇ ಧೀ ಸುಧೇಶ ಪ್ರಯಾಚೇ ॥

ಎಂದು ಭಾವಪರವಶರಾಗಿ ಸ್ತೋತ್ರಗೈಯುತ್ತಿದ್ದರು. ದ್ವೈತ ಸಿದ್ಧಾಂತದಲ್ಲಿ ಧ್ರುವತಾರೆಯಂತೆ ಮೂಡಿಬಂದ ಟೀಕಾಕೃತ್ಪಾದರನ್ನು ಸಂದರ್ಶಿಸುವುದೆಂದರೆ ಅವರ ಕಣ್ಣುಗಳಿಗೆ ಒಂದು ಹಬ್ಬದಂತೆ. ಎಷ್ಟೇ ಆಗಲಿ ಜಯರಾಯರ ಪುಣ್ಯ ದಿವಸದಂದೇ ಜನ್ಮತಳೆದ ಪುಣ್ಯ ಪುರುಷರಲ್ಲವೇ ಜಂಬುಖಂಡಿ ಆಚಾರ್ಯರು!

ಮೋಕ್ಷಕ್ಕೆ ಪರಮ ಸಾಧನವೆನ್ನಿಸುವ, ದೇವಲೋಕದ ಅಮೃತವನ್ನೇ ಹಿಮ್ಮೆಟ್ಟಿಸುವ ಸುಧಾಮೃತವನ್ನು ಸುಜನ ವೃಂದಕ್ಕೆ ಪಾನ ಮಾಡಿಸಿದ ಆ ಪುಣ್ಯ ಶ್ಲೋಕರ ಕೃಪೆಯನ್ನು ಪಡೆಯಲು ಆಚಾರ್ಯರು ಸಂದರ್ಭವೊದಗಿದಾಗಲೆಲ್ಲಾ ಅವರ ಸನ್ನಿಧಾನಯುಕ್ತ ಕ್ಷೇತ್ರಕ್ಕೆ ಹೋಗುತ್ತಿದ್ದರು. ಮನಸ್ಸಿನ ಮಲವನ್ನು ಕಳೆಯುವ ಮಹಾತ್ಮರ ಪವಿತ್ರ ಸನ್ನಿಧಿಯಲ್ಲಿ ಧಾರ್ಮಿಕ ನಿಷ್ಠರಾದ ಪ್ರಾಜ್ಞರಿಂದ ಮಾತ್ರ ಯಥಾರ್ಥವಾಗಿ ತಿಳಿಯಲ್ಪಡುವ ಸುಧಾ ಗ್ರಂಥವನ್ನು ನಿತ್ಯ ಪಠಿಸುತ್ತಾ ಗುರುಗಳನ್ನು ವಿಶಿಷ್ಟ ರೀತಿಯಲ್ಲಿ ಸೇವಿಸುತ್ತಿದ್ದರು. ಇದನ್ನೇ ಶ್ರೀಷಟ್ಪುರಾಚಾರ್ಯರು ಹೀಗೆ ಬಣ್ಣಿಸುತ್ತಾರೆ :

ಸುಧಾರ್ಮಿಕಬುಧಾಸ್ವಾದ್ಯಾಂ ಸುಧಾಮುಪ್ರಾಪ್ತಿಸಾಧಿಕಾಮ್ ।
ಸುಧಾಂ ಮುಧಾಕೃತಸುಧಾಂ ಸುಧಾರ್ಯನಿಕಟೇಽಜಪತ್ ॥

**ಟೀಕಾಂ ಹೃತಮನಃಶೋಕಾಂ ಪುಣ್ಯಶ್ಲೋಕಾಂಘ್ರಿಭಾಸಿಕಾಮ್ ।**
**ಭೇಕಾನೀಕಾಂತರಾಲೋಕಂ ಸ [1]ದೃಷ್ಟ್ವೈಕಾಂತತೋಽಭಜತ್ ॥**

'ಸೋದಾಕ್ಷೇತ್ರಂ ತು ಮನ್ವಾನಃ ಸ್ವಗೇಹಮಿತಿ ನಾತ್ಯಜತ್' ಎಂಬ ಶ್ರೀಸುಧಾಕರ ಗುರುಗುಣರತ್ನಮಾಲಾಕಾರರ ಉಕ್ತಿಯಂತೆ ಶ್ರೀಜಂಬುಖಂಡಿ ಆಚಾರ್ಯರು ತಮ್ಮ ಇಷ್ಟ ಗುರುಗಳು ನೆಲೆಸಿರುವ ಸೋದಾ ಕ್ಷೇತ್ರವನ್ನು ಎಂದಿಗೂ ಅಲಕ್ಷ್ಯ ಮಾಡದೇ ಆ ಪವಿತ್ರ ಸ್ಥಳವನ್ನು ತಮ್ಮ ಮನೆಯ ಹೃದಯ ಭಾಗವೆಂದೇ ಭಾವಿಸಿದ್ದರು. ಭಾವಿಸಮೀರರಾದ ಶ್ರೀವಾದಿರಾಜ ಗುರುವರ್ಯರ ಬೃಂದಾವನ ದರ್ಶನ ಸರ್ವಾಭೀಷ್ಟವೂ, ಸಮಸ್ತ ದುರಿತಹರವೂ ಎಂಬ ನಿಶ್ಚಿತ ಜ್ಞಾನ ಅವರಿಗಿತ್ತು[2]. ಗೋಪಿಯರ ಮನಸ್ಸು ಯಾದವರಾಯನ ಸಖ್ಯಸುಖಕ್ಕಾಗಿ ಬೃಂದಾವನದತ್ತ ಸೆಳೆಯುತ್ತಿದ್ದಂತೆ, ಆಚಾರ್ಯರ ಮನಸ್ಸು ತಮ್ಮ ಬಾಳಿನ ಸಾರಸರ್ವಸ್ವವೂ ಆಗಿದ್ದ ಶ್ರೀಮದ್ವಾದಿರಾಜ ಪೂಜ್ಯ ಚರಣರ ಕುಡಿನೋಟಕ್ಕೆ ಬೀಳಲು ಸದಾ ತುಡಿಯುತ್ತಿತ್ತು. ಅವರು ಸೋದಾ ಕ್ಷೇತ್ರಕ್ಕೆ ದಯಮಾಡಿಸಿದಾಗ ಅಲ್ಲಿನ ಪ್ರತಿ ಕಣಕಣವೂ ಚಿರಪರಿಚಿತವಾಗಿದೆಯೆಂಬಂತೆ ಪ್ರತಿಸ್ಪಂದಿಸುತ್ತಿತ್ತು. ವಾದಿರಾಜರು ತಮ್ಮ ಪ್ರಿಯಭಕ್ತನೊಂದಿಗೆ ಸರಸ ಸಲ್ಲಾಪದಲ್ಲಿ ತೊಡಗಿರುವರೇನೋ ಎಂಬಂತೆ ಆಚಾರ್ಯರು ತಮ್ಮ ಸ್ವರೂಪೋದ್ಧಾರಕ ಗುರುಗಳ ಬೃಂದಾವನದ ಎದುರು ಧ್ಯಾನಾಸಕ್ತರಾಗಿ ಗಂಟೆಗಟ್ಟಲೆ ನಿಂತು ಬಿಡುತ್ತಿದ್ದರು.

"ರುದ್ರಾದಿ ದೇವತೆಗಳಿಂದ ವಂದಿತರಾಗಿರುವ ವಾದಿರಾಜರೇ, ತಾವು ಮುಂದೆ ಪ್ರಾಣಾದಿ ಪಂಚರೂಪಾತ್ಮಕನಾದ ಮುಖ್ಯಪ್ರಾಣರಾಗುವರೆಂಬುದನ್ನು ಸೂಚಿಸಲು ಪಂಚರೂಪಗಳಿಂದ ಪಂಚವೃಂದಾವನದಲ್ಲಿ ವಿರಾಜಮಾನರಾಗಿದ್ದೀರಿ. ಸಕಲದುರಿತ ನಿವಾರಕರೂ, ವಾದಿಭೀಕರರೂ,

---

1. ಸೋಕಾಂಕ್ಷ್ಯೈ – (ಪಾ)
2. ತಸ್ಮಾದ್ವೃಂದಾವನಮಿದಂ ಸರ್ವಾಭೀಷ್ಟಪ್ರದಂ ಸತಾಮ್ ।
   ದರ್ಶನಂ ಸುಜನಾನಾಂ ತು ಸರ್ವಾಘೌಘವಿನಾಶನಮ್ ॥
   – ಅಣುವೃಂದಾವನಾಖ್ಯಾನ

ಜ್ಞಾನಕರ್ಮೇಂದ್ರಿಯ ಮನಸ್ಸುಗಳ ನಿಯಾಮಕರೂ, ಪಾಂಚಜನ್ಯಧಾರಿಗೆ ಅತಿಪ್ರಿಯರೂ ಆಗಿರುವ ತಾವು ಶರಣಾಗತರನ್ನು ರಕ್ಷಣೆ ಮಾಡುವುದರಲ್ಲಿ ಮತ್ತು ಅವರಿಗೆ ಹಯಾಸ್ಯನ ಭಕ್ತಿಯನ್ನು ಕರುಣಿಸುವುದರಲ್ಲಿ ದಕ್ಷದೀಕ್ಷೆಯುಳ್ಳವರು. ತಾವು ನನಗೆ ಜನ್ಮಜನ್ಮದಲ್ಲಿಯೂ ತಂದೆ, ತಾಯಿ, ಬಂಧು, ಬಳಗ ಮತ್ತು ಸದ್ಗುರುಗಳಾಗಿ ಸದಾ ಸಂರಕ್ಷಿಸಿರಿ" ಎಂದು ಪರಿಪರಿಯಾಗಿ ಪ್ರಾರ್ಥಿಸುತ್ತಾ ಸರ್ವಸಮರ್ಪಣೆ ಮಾಡುತ್ತಿದ್ದರು[1]. ರಾಜರ ಪ್ರೀತಿಗಾಗಿ ಕಾಷ್ಠಮೌನವ್ರತಧಾರಣೆ ಮಾಡಿ ಸರ್ವಮೂಲ, ಆಖ್ಯಾನಾದಿ ಸದ್ಗ್ರಂಥಗಳನ್ನು ಪಠಿಸುತ್ತಾ ಅಂತರಂಗ ಸುಖವನ್ನು ಅನುಭವಿಸುತ್ತಿದ್ದರು. ಪ್ರತಿ ವರ್ಷ ನಡೆಯುತ್ತಿದ್ದ ರಥೋತ್ಸವದ ಸಂದರ್ಭಗಳಲ್ಲಿ ದಾಸದೀಕ್ಷಾಪರರಾಗಿ ಕಾಲಿಗೆ ಗೆಜ್ಜೆ ಕಟ್ಟಿ, ತಾಳ ತಂಬೂರಿಗಳನ್ನು ಹಿಡಿದು ಗುರುಗುಣಗಾನ ಮಾಡುತ್ತಾ ಭಾಗವಹಿಸುತ್ತಿದ್ದ ಆಚಾರ್ಯರು ಬ್ರಾಹ್ಮಣ ಭೋಜನವಾಗುತ್ತಿದ್ದಾಗ ತಾವು ಊಟಕ್ಕೆ ಕೂಡದೆ ವಾದಿರಾಜರ ಬೃಂದಾವನದ ಎದುರಿನಲ್ಲಿ ನರ್ತನ ಮಾಡುತ್ತಾ ಏಕಾಂತ ಸೇವೆ ಸಲ್ಲಿಸುತ್ತಿದ್ದರು.

'ತೀರ್ಥಾನಾಮುತ್ತಮಂ ತೀರ್ಥಂ ವನಾನಾಮುತ್ತಮಂ ವನಮ್ ।
ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಮಮ ವೃಂದಾವನಂ ದ್ವಿಜ ॥'

ಎಂಬ ಆಖ್ಯಾನೋಕ್ತಿಯಂತೆ ಪರಮಪವಿತ್ರ ತೀರ್ಥಕ್ಷೇತ್ರವಾದ ಸೋದಾ ಕ್ಷೇತ್ರದಲ್ಲಿ ಆಚಾರ್ಯರು ನಡೆಸುತ್ತಿದ್ದ ವ್ರತಾನುಷ್ಠಾನಗಳು

---

1. ಪಂಚವೃಂದಾವನಪತಿಂ ಪಂಚಾಸ್ಯಕರಪೂಜಿತಮ್ ।
ಪಂಚತ್ವಹರಣೇ ದಕ್ಷಂ ಪಾಂಚಜನ್ಯಧರಪ್ರಿಯಮ್ ॥
ಪಂಚಪ್ರಾಣಾಧಿಪಂ ಪಂಚಪಂಚೇಂದ್ರಿಯನಿಯಾಮಕಮ್ ।
ಪ್ರಪಂಚಯುತಂ ಭಕ್ತಾನಾಂ ಭಕ್ತಿಂ ಘೋಟಾನನೇ ಹರೌ ॥
ವಾದಿವಾರಣಪಂಚಾಸ್ಯಂ ವಾದಿರಾಜಂ ಭಜನ್ ಮುದಾ ।
ಅಯಮೇವ ಗತಿರ್ಮೇಸ್ಯಾದಯಮೇವ ಗುರುರ್ಮಮ ॥
ಆಯಮೇವ ಪಿತಾ ಮಾತಾ ಪುತ್ರೋ ಬಂಧುರಯಂ ಮಮ ।
ಇತ್ಯೇವಂ ಶ್ರೀವಾದಿರಾಜೇ ಸರ್ವಭಾರಂ ನ್ಯಧಾಯ ಸಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ 14–17)

ವಿಸ್ಮಯಕರವಾಗಿದ್ದವು. ರಾಜರ ಋಜುತ್ವೋತ್ಕರ್ಷಕ್ಕಾಗಿಯೇ ಅವತರಿಸಿದ್ದ ಅವರ ಪ್ರತಿಯೊಂದು ಆಚರಣೆಯೂ ಸಹ ಸಮೀರಪದಾರ್ಹರ ಸಂಪ್ರೀತಿಗೆ ಕಾರಣವಾಗಿದ್ದವು.

ಶ್ರೀಶುಕ್ಲಾಮಲಫಾಲ್ಗುಣೇ ಶುಭದಿನೇ ಶ್ರೀವಾದಿರಾಜಾತ್ಮಜಃ
ಪಂಚಮ್ಯಾಂ ಪ್ರಹರೇ ಜಿತೇಽಭಿಕೃಪಯಾ ತೇಷಾಮಗಾದ್‌ದೃಕ್ಪಥಮ್ ।
ಭುಕ್ತ್ವಾ ಮಾರ್ಗಸುಯಾತನಾಂ ಗುರುವರೇ ದತ್ತೇ ಕ್ಷಣಃ ಶ್ರೀಮತಾಂ
ರಾಜೇಂದ್ರಂ ಋಜುಪುಂಗವಂ ಹಯಮುಖಂ ದೃಷ್ಟ್ವಾ
ಪ್ರಪೂರ್ಣೋಽಭವಮ್ (ಪ್ರಹರ್ಷೋಽಭವಮ್) ॥

ಪೂಜಾಂತೇ ಕರಸಂಪುಟಂ ಪರಿವಿಧಾಯಾಹಂ ಸ್ಥಿತಃ ಶ್ರೀಪುರೋ
ಲಕ್ಷ್ಮೀಶಸ್ತವನಂ ಯತೀಶ್ವರಕೃತಂ ಗಾಯಂಸ್ತಥಾ ಚಿಂತಯನ್ ।
ಪೂರ್ವಾಬ್ದೀಯ ಸುಪುಷ್ಯಮಾಸವರಕೇ ಕೃತ್ವಾ ಗುರೋಃ ಸಂಸ್ತವಂ
ಶ್ರೀರಾಜೇಂದ್ರಗಲಸ್ಥದಿವ್ಯಸುಮನೋಹಾರಂ ಸಮಾಯಾಚಿಷಮ್ ॥

ಎಂದು ಮುಂತಾಗಿ ಜಂಬುಖಂಡಿ ಆಚಾರ್ಯರೇ ತಮ್ಮ ಆತ್ಮಕಥನದಲ್ಲಿ ಹೇಳಿಕೊಂಡಿರುವುದನ್ನು ನೋಡಿದರೆ, ಅವರು ವಾದಿರಾಜರನ್ನು ಹಾಗೂ ಅವರ ಆರಾಧ್ಯ ಮೂರ್ತಿಯಾದ ಹಯವದನ ಸ್ವಾಮಿಯನ್ನು ಬೃಂದಾವನದಲ್ಲಿ ಅನೇಕಬಾರಿ ಪ್ರತ್ಯಕ್ಷ ದರ್ಶನ ಮಾಡಿರುವುದಾಗಿ ತಿಳಿದುಬರುತ್ತದೆ. ಒಮ್ಮೆ ರಾಜರ ಬೃಂದಾವನದ ಎದುರಿನಲ್ಲಿ ನಿಂತು ಶ್ರೀಶಗುಣದರ್ಪಣ ಮತ್ತು ಗುರುಸ್ತವನವನ್ನು ಪಠಿಸುತ್ತಿದ್ದಾಗ ಅವರಿಗೆ ಪ್ರಸಾದರೂಪವಾಗಿ ರಾಜರ ಮತ್ತು ಹಯಗ್ರೀವದೇವರಿಗೆ ಅಲಂಕರಿಸಿದ್ದ ದಿವ್ಯ ಪರಿಮಳಭರಿತವಾದ ಪುಷ್ಪಮಾಲೆಗಳು ತಾನಾಗಿ ಕರಗತವಾಗಿದ್ದನ್ನು ಆಚಾರ್ಯರೇ ಭಾವಪೂರಿತವಾಗಿ ಹೇಳಿಕೊಂಡಿದ್ದಾರೆ.

ಗೋಪೀಚಂದನಲೇಪಿತಾಖಿಲತನುಶ್ಚಕ್ರಾದಿಸಂಲಾಂಛಿತೋ
ಭವ್ಯಾರಂಜಿತವಾದಿರಾಜಗುರುಸನ್ಮೃದ್ಧಾಸಿಫಲಾಂತರಃ ।
ಕಂಠಾಲಂಬಿಸರೋಜಬೀಜತುಲಸೀಮಾಲಾಗಣಾಲಂಕೃತಃ
ಚಕ್ಷುಃಪ್ರೀತಿಕರೋಽಭವತ್ ಸುಮನಸಾಂ ದರ್ಮೇಽಥಸಾಮಾನ್ಯಥಾ ॥

ಎಂಬಂತೆ ಗೋಪೀಚಂದನದ ದ್ವಾದಶನಾಮಗಳನ್ನೂ, ಚಕ್ರಾದಿಮುದ್ರೆಗಳನ್ನೂ ಧರಿಸಿ, ವಾದಿರಾಜರ ಮೂಲಬೃಂದಾವನದ ಪವಿತ್ರ ಮೃತ್ತಿಕೆಯನ್ನು ಹಣೆಯಲ್ಲಿ ಭವ್ಯವಾಗಿ ಲೇಪಿಸಿ[1]; ಕಮಲಾಕ್ಷಿ, ತುಳಸೀ ಮಾಲೆಗಳಿಂದ ಭೂಷಿತರಾಗಿ ಕಂಗೊಳಿಸುತ್ತಿದ್ದ ಜಂಬುಖಂಡಿ ಆಚಾರ್ಯರು ಸುಮನಸ್ಕರಿಗೆ ಸುಖಪ್ರದವಾಗಿಯೂ ದುರ್ಬುದ್ಧಿಯುಳ್ಳವರಿಗೆ ದುಃಖ ಪ್ರದವಾಗಿಯೂ ತೋರುತ್ತಿದ್ದರು. ಎಂತಹವರ ಎದೆಯೂ ಝಲ್ಲೆನ್ನುವ ತಪೋವನವೇ ಮೊದಲಾದ ದುರ್ಗಮ ಅರಣ್ಯ ಪ್ರದೇಶಗಳಲ್ಲಿ ಗುರ್ವಂತರ್ಗತನ ಚರಣಾರವಿಂದಗಳನ್ನು ಹೃನ್ಮಂದಿರದಲ್ಲಿ ತುಂಬಿಕೊಂಡು, ರಾತ್ರಿ ಹಗಲೆನ್ನದೆ ನಿರ್ಭಯವಾಗಿ ಓಡಾಡುತ್ತಾ ಮನಬಂದ ಸ್ಥಳಗಳಲ್ಲಿ ವಾರಗಟ್ಟಲೆ ತಪೋನಿರತರಾಗಿರುತ್ತಿದ್ದ ಅವರ ವಿಚಿತ್ರ ಚರ್ಯೆ ಸಾಮಾನ್ಯರಿಂದ ಊಹಿಸಲೂ ಅಸಾಧ್ಯವಾಗಿತ್ತು.

ವಾದಿರಾಜರ ಮತ್ತು ಕ್ಷೇತ್ರಪಾಲಕರಾದ ಭೂತರಾಜರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದ ಆಚಾರ್ಯರು ಉತ್ತಮ ಚಿತ್ರಕಾರರೂ ಸಹ ಆಗಿದ್ದರು. ರಂಗವಲ್ಲಿಯಲ್ಲಿ ಅವರು ನಯನ ಮನೋಹರವಾದ ಯಂತ್ರವನ್ನು ಬರೆದು ಅದರಲ್ಲಿ ರಾಜರ ಪ್ರಿಯದೂತರಾದ ಭೂತರಾಜರನ್ನು ಆಹ್ವಾನಿಸುತ್ತಿದ್ದ ಕೂಡಲೇ ಸುತ್ತಮುತ್ತಲಲ್ಲಿದ್ದ ಭೂತಪ್ರೇತಗಳು ಇದ್ದಲ್ಲಿಯೇ ಕುಣಿಯಲಾರಂಭಿಸುತ್ತಿದ್ದವಂತೆ[2]. ಯಾವುದಕ್ಕೂ ಬಗ್ಗದ ಅವುಗಳು ಆಚಾರ್ಯರ ಮಂತ್ರಶಕ್ತಿಗೆ ಮಣಿದು ಒಂದಿಷ್ಟೂ ಪ್ರತಿಭಟನೆಯನ್ನು ತೋರದೇ ಪಲಾಯನ ಮಾಡುತ್ತಿದ್ದವಂತೆ.

---

1. 'ರಾಜರ ಮೃತ್ತಿಕೆ ರಾಜಿತ ಫಣೆ ಬಹು
ಸೋಜಿಗ ಎನಿಸುವ ಗುರೂಪ ಕಾಣಮ್ಮಯ್ಯಾ ॥
– ಶ್ರೀಶಪ್ರಸನ್ನಕೇಶವ ವಿಠಲಾಂಕಿತರು

2. ಕದಾಚಿದ್ ಭೂತರಾಡ್‌ಯಂತ್ರಂ ರಂಗವಲ್ಯಾ ವಿಲಿಖ್ಯ ಚ।
ತತ್ಪೂಜನೇ ಕೃತೇ ತತ್ರ ನೃತ್ಯಂತಿ ಹಿ ಪಿಶಾಚಕಾಃ ॥
ಅನಿವೃತ್ತಾಶ್ಚ ಸೋದಾಯಾಂ ನಿವೃತ್ತಾ ಹ್ಯಸ್ಯ ಸನ್ನಿಧೌ।
ಏತೇನ ಜ್ಞಾಯತೇ ಚಾಸ್ಮಿನ್ ವಾದಿರಾಜಾಖ್ಯಸದ್ಗುರೋಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ 19–20)

ಆಚಾರ್ಯರ ತ್ರಿಕಾಲಜ್ಞಾನವೂ ಸಹ ವಿಸ್ಮಯಕರವಾದದ್ದು. 'ಅಂದ ಮಾತನು ನಿಜಕೆ ತಂದುಕೊಡುವವನು' ಎಂಬಂತೆ ಗುರುಬಿಂಬನ ಅನುಗ್ರಹ ವಿಶೇಷದಿಂದ ಅವರು ನುಡಿದ ನುಡಿಗಳೆಲ್ಲವೂ ಸತ್ಯವಾಗಿ ಘಟಿಸುತ್ತಿದ್ದವು. ಅವರ ಭವ್ಯಾಕೃತಿ, ವಿಚಿತ್ರ ನಡಾವಳಿ, ನಿಜವಾಗುತ್ತಿದ್ದ ನುಡಿ, ಗಾಯನ ಚಾತುರ್ಯ, ಕಲಾಸಿದ್ಧಿ ಮುಂತಾದವುಗಳನ್ನು ಕಂಡ ಜನರು ಆಚಾರ್ಯರನ್ನು ಮನುಷ್ಯ ರೂಪದಲ್ಲಿರುವ ದೇವತೆಯೋ, ಗಂಧರ್ವರೋ ಅಥವಾ ಮಹಾಋಷಿಯೋ ಆಗಿರಬೇಕೆಂದು ತರ್ಕಿಸುತ್ತಿದ್ದರು.

ಗಂಗಾದಿ ಪುಣ್ಯತೀರ್ಥಗಳು ಸನ್ನಿಹಿತವಾಗಿರುವ ಪರಮಪವಿತ್ರ ತೀರ್ಥವಾದ ಧವಳಗಂಗೆಯಲ್ಲಿಯೂ ಸಹ ಆಚಾರ್ಯರ ಸ್ನಾನಕ್ರಮ ಅನೇಕರ ಹುಬ್ಬೇರಿಸುವಂತೆ ಮಾಡುತ್ತಿತ್ತು. ಧವಳಗಂಗಾ ತೀರ್ಥದ ಆಗ್ನೇಯ ಮೂಲೆಯ ಸ್ನಾನಘಟ್ಟ ವಾದಿರಾಜರ ಪ್ರಿಯ ದೂತರಾದ ಭೂತರಾಜರಿಗಾಗಿ ಮೀಸಲಿದ್ದು ಆ ಸ್ಥಳದಲ್ಲಿ ಯಾರೂ ಸ್ನಾನಾದಿಗಳನ್ನು ಮಾಡಬಾರದೆಂಬ ಕ್ಷೇತ್ರ ನಿಯಮವಿದೆ. ಇದನ್ನು ಪರೀಕ್ಷಿಸಲು ಹೋಗಿ ಅನೇಕರು ತೊಂದರೆಗೊಳಗಾಗಿರುವುದೂ ಉಂಟು. ಆದರೆ ಜಂಬುಖಂಡಿ ಆಚಾರ್ಯರು ಮಾತ್ರ ಕ್ಷೇತ್ರಕ್ಕೆ ಬಂದಾಗಲೆಲ್ಲಾ ಭೂತರಾಜರಿಗೆ ಮೀಸಲಿರುವ ಆಗ್ನೇಯ ಮೂಲೆಯಲ್ಲಿಯೇ ನಿರ್ಭಯವಾಗಿ ಸ್ನಾನ ಮಾಡುತ್ತಿದ್ದರಲ್ಲದೇ ತಮ್ಮ ಜೊತೆಯಲ್ಲಿರುತ್ತಿದ್ದ ಶಿಷ್ಯರಿಗೂ ಸಹ ಹಾಗೆಯೇ ಮಾಡಲು ಹೇಳುತ್ತಿದ್ದರಂತೆ[1]. ಇದರಿಂದ ಆಚಾರ್ಯರಲ್ಲಿದ್ದ ಭೂತರಾಜರ ಅನುಗ್ರಹ ವಿಶೇಷ ಎಷ್ಟಿತ್ತೆಂಬುದನ್ನು ಊಹಿಸಬಹುದು.

---

1. ಧಾರವಾಡದ ಸಿಗ್ಗಾವಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕಳಸ ಎಂಬ ಗ್ರಾಮದವರಾದ ಶ್ರೀತಂದೆ ವರದಗೋಪಾಲವಿಠಲದಾಸರು (1900–1933) ಸಹ ಸೋದಾ ಕ್ಷೇತ್ರಕ್ಕೆ ಬಂದಾಗ ಧವಳಗಂಗಾತೀರ್ಥದ ಆಗ್ನೇಯ ಮೂಲೆಯಲ್ಲಿ ಸ್ನಾನ ಮಾಡುತ್ತಿದ್ದರಂತೆ. ಜಂಬುಖಂಡಿ ಆಚಾರ್ಯರೇ

→

# ಗುರುರಾಜರ ಭಕ್ತಾಗ್ರಣಿ

ಕಲಿಯುಗದ ಕಾಮಧೇನು, ಕಲ್ಪವೃಕ್ಷ ಚಿಂತಾಮಣಿಗಳೆಂದು ಪ್ರಸಿದ್ಧರಾದ ಪರಮಕಾರುಣ್ಯಮೂರ್ತಿ ಶ್ರೀರಾಘವೇಂದ್ರ ಗುರುಸಾರ್ವಭೌಮ

---

→ ಮುಂದಿನ ಜನ್ಮದಲ್ಲಿ ತಂದೆ ವರದಗೋಪಾಲದಾಸರಾಗಿ ಅವತರಿಸಿದರೆಂದು ತಿಳಿಸುವ ಈ ವಿಷಯವನ್ನು ಶ್ರೀಗುರುಗೋವಿಂದ ದಾಸರು ತಾವು ರಚಿಸಿರುವ ಹರಿಭಕ್ತವಿಜಯ ಭಾಗ-1ರಲ್ಲಿ ಹೀಗೆ ವಿವರಿಸುತ್ತಾರೆ :-

"ಧವಳ ಗಂಗೆಯಲ್ಲಿ ಭೂತರಾಜರ ಗುಡಿಗೆ ನೇರವಾಗಿರುವ ಮೂಲೆಯನ್ನು ಭೂತರಾಜರು ಸ್ನಾನಮಾಡುವ ಜಾಗವೆಂತಲೂ, ಅಲ್ಲಿ ಯಾರೂ ಅವಗಾಹನವನ್ನು ಮಾಡಕೂಡದೆಂತಲೂ ಇಂದಿಗೂ ವಾಡಿಕೆಯುಂಟು. ಈ ನೇಮವನ್ನು ಉಲ್ಲಂಘಿಸಿದವರಿಗೆ ಶಿಕ್ಷೆಗಳಾಗಿರುವುದೂ ಕೂಡ ಅನೇಕರಿಗೆ ಅನುಭವವಿರುತ್ತದೆ. ಈ ವಿಷಯವು ದಾಸರಿಗೂ ಮತ್ತು ಅವರ ಮಿತ್ರರಿಗೂ ಚೆನ್ನಾಗಿ ಗೊತ್ತು. ಹೀಗಿದ್ದಾಗ್ಯೂ ದಾಸರು ಮಾತ್ರ ಭೂತರಾಜರ ಮೂಲೆಯಲ್ಲಿಯೇ ನಿತ್ಯವೂ ಅವಗಾಹನ ಸ್ನಾನ ಮಾಡುತ್ತಿದ್ದರು. ಒಂದು ದಿವಸ ತಮ್ಮ ಮಿತ್ರನನ್ನು ಕರೆದು ಅಲ್ಲಿಯೇ ಸ್ನಾನ ಮಾಡೆಂದರು. ಇವರಿಗೆ ಧೈರ್ಯ ಬರಲಿಲ್ಲ. ಆದರೆ ದಾಸರು 'ಅಯ್ಯಾ ! ನಾನು ನೋಡಿಕೊಳ್ಳುತ್ತೇನೆ. ನಿನಗೆ ಯಾವ ಅಪಾಯವೂ ಬರುವುದಿಲ್ಲ' ಎಂದು ಹೇಳಿ ತಾವೇ ಕೈಹಿಡಿದು ನಿರೋಧವಾಗಿದ್ದ ಜಾಗದಲ್ಲಿಯೇ ಸ್ನಾನ ಮಾಡಿಸಿದರು. ಇದು ಎಲ್ಲರನ್ನೂ ಆಶ್ಚರ್ಯಚಕಿತರನ್ನಾಗಿ ಮಾಡಿತು. ಇದರ ವಿಚಾರವಾಗಿ ಅವರ ಮಿತ್ರರು ಪ್ರಶ್ನೆ ಮಾಡಲು 'ಇದು ಬಹು ಗೋಪ್ಯವಾದ ವಿಚಾರ. ಪ್ರಕಟವಾಗಬಾರದು. ಆದರೂ ಸೂಕ್ಷ್ಮವಾಗಿ ನಿನಗೊಬ್ಬನಿಗೆ ತಿಳಿಸುತ್ತೇನೆ. ನಾನು ವಾದಿರಾಜರ ಕಾಲದಲ್ಲಿಯೂ ಮತ್ತು ಶ್ರೀ ಸತ್ಯವೀರರ ಕಾಲದಲ್ಲಿಯೂ ಜನ್ಮ ತಾಳಿದ್ದೆ, ಇಷ್ಟು ಮಾತ್ರದಿಂದ ತಿಳಿದುಕೋ' ಎಂದು ಹೇಳಿ ಸುಮ್ಮನಾದರು. ಮತ್ತೆ ತಮಗೆ ಮಾತ್ರ ಸಂಬಂಧಪಟ್ಟಿದ್ದೆಂದೂ, ಮತ್ತು ತಮ್ಮಿಂದಲೇ ರಚಿತವಾಗಿ ಕೆಲವು ಕೀರ್ತನೆಗಳನ್ನು ಉಪದೇಶಿಸಿ ಅವುಗಳನ್ನು ರಹಸ್ಯವಾಗಿಟ್ಟಿರಲು ಕಟ್ಟಪ್ಪಣೆ ಮಾಡಿದರು."

'ತಂದೆ ವರದಗೋಪಾಲಂ ಭೂತರಾಜಾಂಶಸಂಭವಮ್' ಎಂಬುದಾಗಿ ದಾಸರು ಭೂತರಾಜರ ಅಂಶಸಂಭೂತರೆಂದು ಅನೇಕ ಭಾವುಕರು ನಂಬುತ್ತಾರೆ. ಇವರೂ ಸಹ ಕೇವಲ ಮೂವತ್ತೂರು ವರ್ಷಗಳ ಅಲ್ಪಕಾಲ ಜೀವಿಸಿದ್ದರೆಂಬುದು ಗಮನಾರ್ಹವಾದ ಸಂಗತಿ.

ರಲ್ಲಿಯೂ ಶ್ರೀಜಂಬುಖಂಡಿ ವಾದಿರಾಜಾಚಾರ್ಯರಿಗೆ ಅಪರಿಮಿತವಾದ ಶ್ರದ್ಧಾಭಕ್ತಿಗಳಿದ್ದವು. ಫಾಲಲೋಚನವಿನುತ ಮೂಲರಾಮನ ಪಾದ ಕಮಲಭೃಂಗರೂ, ವಾಯುದೇವರ ಪೂರ್ಣಾವೇಶವುಳ್ಳವರೂ, ಪರಮ ಭಾಗವತೋತ್ತಮರೂ ಆದ ಶ್ರೀರಾಘವೇಂದ್ರ ಸ್ವಾಮಿಗಳನ್ನು ಸಂದರ್ಶಿಸಲು ಆಚಾರ್ಯರು ಮಂತ್ರಾಲಯ ಕ್ಷೇತ್ರಕ್ಕೆ ಪದೇ ಪದೇ ಹೋಗುತ್ತಿದ್ದರು. ಶ್ರೀರಾಘವೇಂದ್ರ ಗುರುಸಾರ್ವಭೌಮರ ಅಂತರಂಗಭಕ್ತ ರೆಂದು ಪ್ರಸಿದ್ಧರಾದ ಕೌತಾಳದ ಶ್ರೀಗುರು ಜಗನ್ನಾಥದಾಸರು ಆಚಾರ್ಯರ ಪರಮಮಿತ್ರರಾಗಿದ್ದರು. ದಾಸರು ಆಚಾರ್ಯರಿಗಿಂತ ವಯಸ್ಸಿನಲ್ಲಿ ಚಿಕ್ಕವರಾದರೂ ಈರ್ವರ ನಡುವೆ ಮಧುರ ಮೈತ್ರಿಯಿತ್ತು. ಹಾಗಾಗಿ ಆಚಾರ್ಯರು ಮಂತ್ರಾಲಯಕ್ಕೆ ಬಂದಾಗಲೆಲ್ಲಾ ಸನಿಹ ದಲ್ಲಿಯೇ ಇದ್ದ ಕೌತಾಳಕ್ಕೆ ತೆರಳಿ ಅಲ್ಲಿ ತಮ್ಮ ಮಿತ್ರರನ್ನು ಭೇಟಿ ಯಾಗುತ್ತಿದ್ದರು.

ಕೌತಾಳದ ಶ್ರೀಗುರು ಜಗನ್ನಾಥದಾಸರು ಕೋಸಗಿ ಸ್ವಾಮಿರಾಯಾ ಚಾರ್ಯರೆಂದು ಪ್ರಸಿದ್ಧರಾದ ವಿದ್ವನ್ಮಣಿಗಳು. ಅವರ ಬಾಳುವೆ ಅನೇಕ ನಿಟ್ಟಿನಿಂದ ವೈಶಿಷ್ಟ್ಯಪೂರ್ಣವಾದದ್ದು. ಅವರ ಸಾಧನೆ ವ್ಯಾಸ-ದಾಸಪಂಥದಲ್ಲಿ ಅಪೂರ್ವವಾದದ್ದು. ಮಂತ್ರಾಲಯ ಕ್ಷೇತ್ರಕ್ಕೆ ಸಮೀಪ ವಿರುವ ಹರಿದಾಸರಿಗೆ ಮಂದಿರವಾದ ಇಭರಾಮಪುರದಲ್ಲಿ ಮೆರೆವ ಕೃಷ್ಣಾಚಾರ್ಯರ ಕೃಪೆಯಿಂದ ಜನ್ಮತಳೆದು, ಬಾಲ್ಯದಲ್ಲಿ ಉಢಾಳರಾಗಿ ಬೆಳೆದು, ಯೌವನದಲ್ಲಿ ಗುರುಸಾರ್ವಭೌಮರ ಪರಮಾನುಗ್ರಹಕ್ಕೆ ಪಾತ್ರರಾಗಿ ಅವರಿಂದಲೇ ಸಮಸ್ತ ಶಾಸ್ತ್ರಜ್ಞಾನವನ್ನು ಪಡೆದ ಪೂತಾತ್ಮರು ಗುರು ಜಗನ್ನಾಥದಾಸರು. ರಾಘವೇಂದ್ರ ಗುರುಗಳ ಏಕಾಂತಭಕ್ತರಾಗಿದ್ದ ದಾಸರು ಗುರುರಾಜರ ಮಹಿಮಾತಿಶಯವನ್ನು ಪ್ರತ್ಯಕ್ಷವಾಗಿ ಕಂಡು ಅವರ ಮೇಲೆ ಸಂಸ್ಕೃತದಲ್ಲಿ ಅನೇಕ ಸ್ತೋತ್ರಗಳನ್ನೂ, 'ಗುರು ಜಗನ್ನಾಥ ವಿಠಲ' ಎಂಬ ಅಂಕಿತದಲ್ಲಿ ಹಲವಾರು ಕನ್ನಡ ಕೀರ್ತನೆಗಳನ್ನೂ ರಚಿಸಿದ್ದರು. ಗುರುವರ್ಯರ ಅಸೀಮ ಕಾರುಣ್ಯಗುಣಕ್ಕೆ ಮನಸೋತು "ಕೃಪಿಗಳೊಳು ನಿನಗುಪಮೆ ಕಾಣೆನೋ ಕೃಪಣವತ್ಸಲ ರಾಘವೇಂದ್ರ"

ಎಂದು ಸ್ತುತಿಸುತ್ತಾ 'ಗುರುರಾಯ ನೀನೇ ಧ್ವರೀ! ಧ್ವರೀ!' ಎಂದು ಆನಂದಬಾಷ್ಪ ಸುರಿಸುತ್ತಿದ್ದ ದಾಸರ ರಾಘವೇಂದ್ರ ದೀಕ್ಷೆಯೂ ಸಹ ಅನುಪಮವಾದದ್ದು.

ಶ್ರೀವಾದಿರಾಜರ ಋಜುತ್ವದಲ್ಲಿ ಅಪಾರ ವಿಶ್ವಾಸವಿಟ್ಟಿದ್ದ ದಾಸರು ರಾಜರನ್ನು ಕುರಿತು ರಚಿಸಿರುವ ಕೀರ್ತನೆಗಳೂ ಸಹ ಪ್ರಶಸ್ತವಾಗಿವೆ. 'ಸೋದಾಪುರದಿ ನಿಂತು ರಾಜಿಪನ್ಯಾರೇ ಪೇಳಮ್ಮಯ್ಯಾ' ಎನ್ನುವ ಪ್ರಶ್ನೋತ್ತರ ಮಾಲೆಯ ಕೀರ್ತನೆಯಲ್ಲಿ ರಾಜರ ಋಜುತ್ವದ ಪ್ರತಿಪಾದನೆ ಹೆಜ್ಜೆ ಹೆಜ್ಜೆಗೂ ಬರುತ್ತದೆ.

**ಅಂಚೆವಾಹನ ಪ್ರಪಂಚದಿ ಪೊಳೆವ ವಿ–**
**ರಿಂಚಿಗೆ ಸಮನೇನೆ ಪೇಳಮ್ಮಯ್ಯಾ।**
**ಸಂಚಿತಕರ್ಮವ ಕುಂಚಿಸಿ ಭಕ್ತರ**
**ಚಂಚಲ ಬಿಡಿಸುವನ್ಯಾರೇ ಪೇಳಮ್ಮಯ್ಯಾ।**
**ಮಿಂಚುರಾಶಿಗೆ ಸಮ ಪಂಚವೃಂದಾವನ**
**ಲಾಂಛಿತನಾಗಿಹನ್ಯಾರೇ ಪೇಳಮ್ಮಯ್ಯಾ।**
**ಚಂಚಲಾಕ್ಷಿ ತಿಳಿ ಪಂಚರೂಪಾತ್ಮಕ**
**ಮುಂಚಿಗೆ ಪ್ರಾಣ ವಿರಿಂಚಿ ಕಾಣಮ್ಮಾ॥**

ಹೀಗೆ ಕಣ್ಣಿಗೊತ್ತಿಕೊಳ್ಳುವಂತಹ ಸಾಲುಗಳನ್ನು ರಚಿಸಿರುವ ದಾಸರು 'ಸತ್ಯಲೋಕಕ್ಕೆ ಮುಖ್ಯಪಾತ್ರ, ಋಜುಗಣಗೊಡೆಯ ತ್ರಿಜಗದಾಧೀಶ, ಭಾವಿವಿಧಾತಾ' ಎಂದೆಲ್ಲಾ ಕೊಂಡಾಡುತ್ತಾ ತಮ್ಮ ಅನೇಕ ಕೀರ್ತನೆಗಳಲ್ಲಿ ವಾದಿರಾಜರ ಭಾವಿಸಮೀರತ್ವವನ್ನು ಎತ್ತಿ ಹಿಡಿದಿದ್ದಾರೆ. ಗುರುಜಗನ್ನಾಥದಾಸರು ಸಂಸ್ಕೃತದಲ್ಲಿ ಸುಮಾರು ಮೂವತ್ತು ಶಾಸ್ತ್ರ ಗ್ರಂಥಗಳನ್ನೂ, ಇಪ್ಪತ್ತು ವಿವಿಧ ಸ್ತೋತ್ರಗಳನ್ನೂ ರಚಿಸಿರುವರಲ್ಲದೇ ಪ್ರಾಕೃತ ಕನ್ನಡ ಭಾಷೆಯಲ್ಲಿ ಇನ್ನೂರಕ್ಕೂ ಮೇಲ್ಪಟ್ಟು ಪದ, ಪದ್ಯ, ಸುಳಾದಿ, ಉಗಾಭೋಗಗಳನ್ನು ನಿರ್ಮಿಸಿ ಕರ್ನಾಟಕ ಹರಿದಾಸ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದ್ದಾರೆ. ಕೌತಾಳದ ಸುತ್ತಮುತ್ತಲ ಪ್ರಾಂತದಲ್ಲಿ ಸಾಕಷ್ಟು ಜನಮನ್ನಣೆಗಳಿಸಿದ್ದ ಸಮಾಜಸುಧಾರಕರಾದ

ದಾಸರು ತಮ್ಮ ನೀತಿಬೋಧೆಗಳ ಮೂಲಕ ಎಲ್ಲಾ ಜನಾಂಗದ, ಅದರಲ್ಲಿಯೂ ಮುಖ್ಯವಾಗಿ ಕೆಳಸ್ತರದ ಜನರ ಬದುಕನ್ನು ತಿದ್ದಿ ಅವರನ್ನು ಸತ್ಪಥಕ್ಕೆ ತಂದಿದ್ದರು. ತಮಗೆ ಒಲಿದು ಬಂದಿದ್ದ ಗುರುರಾಜರ ಶಾಲಿಗ್ರಾಮ ಶಿಲೆಯ ಬೃಂದಾವನವನ್ನು ಕೌತಾಳದಲ್ಲಿ ಸ್ಥಾಪಿಸಿ ಅದನ್ನು ಮತ್ತೊಂದು ಮಂತ್ರಾಲಯವನ್ನಾಗಿಸಿದ್ದರು.

ಇಂತಹ ಮಹಾನುಭಾವರಾದ ಕೌತಾಳದ ಶ್ರೀಗುರುಜಗನ್ನಾಥದಾಸರನ್ನು ಭೇಟಿಯಾದಾಗಲೆಲ್ಲಾ ಸ್ವತಃ ಜ್ಞಾನಿಗಳಾಗಿದ್ದ ಜಂಬುಖಂಡಿ ಆಚಾರ್ಯರು ಗಹನವಾದ ಅಧ್ಯಾತ್ಮಿಕ ತತ್ತ್ವಗಳನ್ನು ಅವರೊಂದಿಗೆ ನಿರಂತರವಾಗಿ ಚಿಂತಿಸುತ್ತಿದ್ದರು. ಕೌತಾಳದಲ್ಲಿ ದಾಸರು ಪ್ರತಿನಿತ್ಯ ನಡೆಸುತ್ತಿದ್ದ ಹರಿಗುರು ಭಜನೆಯಲ್ಲಿ ತಾವೂ ಪಾಲ್ಗೊಂಡು ತನ್ಮಯರಾಗಿ,

ಇತ್ಥಂ ಮಹೋತ್ಸವೇ ಮಂತ್ರಾಲಯೇ ಭೇಜೇ ಯತೀಶ್ವರಾನ್ ।
ಪ್ರತ್ಯಬ್ದಂ ಶ್ರಾವಣೇ ಮಾಸೇ ಸ ಸದ್ಭಿಃ ಪರಮಾದೃತಃ ॥

ಎಂದು ಶ್ರೀಸುಧಾಕರಗುರುಗುಣರತ್ನಮಾಲಾಕಾರರು ಹೇಳಿರುವಂತೆ ಆಚಾರ್ಯರು ಪ್ರತಿವರ್ಷ ಶ್ರಾವಣ ಬಹುಳ ದ್ವಿತೀಯಾದಂದು ಮಂತ್ರಾಲಯದಲ್ಲಿ ನಡೆಯುವ ಗುರುರಾಜರ ಆರಾಧನೋತ್ಸವದ ಸಂದರ್ಭದಲ್ಲಿ ನಿಶ್ಚಿತವಾಗಿ ಉಪಸ್ಥಿತರಿರುತ್ತಿದ್ದರು. ಶ್ರೀಮಠದ ವತಿಯಿಂದ ಏರ್ಪಡುತ್ತಿದ್ದ ವಿದ್ವದ್ಗೋಷ್ಠಿಗಳಲ್ಲಿ ಭಾಗವಹಿಸಿ ಪರವಾದಿಗಳನ್ನು ಸಮರ್ಥವಾಗಿ ನಿಗ್ರಹಿಸುತ್ತಿದ್ದರು. ಆಚಾರ್ಯರ ವಿದ್ಯಾಪ್ರೌಢಿಮೆ, ವಾಗ್ವೈಖರಿ, ವಿನಯದಿಂದ ಕೂಡಿದ ಅಪೂರ್ವ ಗಾಂಭೀರ್ಯ ಮುಂತಾದವುಗಳು ಇತರ ಪಂಡಿತರಿಗೆ ಮಾದರಿಯಾಗಿದ್ದವಲ್ಲದೆ ಶ್ರೀಪಾದಂಗಳವರ ಶ್ಲಾಘನೆಗೂ ಪಾತ್ರವಾಗಿದ್ದವು. ಸಣ್ಣ ಮಗುವಿಗೂ ದಕ್ಕುವಂತಿದ್ದ ಆಚಾರ್ಯರ ಸರಳತೆ ಅವರನ್ನು ಎತ್ತರದ ಸ್ಥಾನದಲ್ಲಿ ನಿಲ್ಲಿಸಿತ್ತಲ್ಲದೆ ಅವರ ಅಪಾರ ಜನಪ್ರಿಯತೆಗೂ ಕಾರಣವಾಗಿತ್ತು.

ಪ್ರಹ್ಲಾದಾವತಾರಿಗಳಾದ ಮಂತ್ರಾಲಯ ಪ್ರಭುಗಳ ಗುಣಗಾನ ಮಾಡುವುದು ಜಂಬುಖಂಡಿ ವಾದಿರಾಜಾಚಾರ್ಯರಿಗೆ ಅತ್ಯಂತ

ಪ್ರಿಯವಾದ ಕಾರ್ಯವಾಗಿತ್ತು. 'ರಾಘವೇಂದ್ರನೆಂಬ ರೂಪ ತಾನೇ ಆಗಿ, ರಾಘವೇಂದ್ರನೆಂಬ ಹೆಸರಿಡಿಸಿಕೊಂಡು, ಭಾಗವತರಲ್ಲಿ ಬಹುಪೂಜೆ ಗೊಂಬ' ಗೋಪಾಲವಿಠಲನ ವಿವಿಧ ರೂಪಗಳನ್ನು ಬೃಂದಾವನದಲ್ಲಿ ನೋಡುತ್ತಾ ಮೈಮರೆಯುತ್ತಿದ್ದ ಸ್ವತಃ ಭಾಗವತೋತ್ತಮರಾದ ಆಚಾರ್ಯರು ದಾಸದೀಕ್ಷೆಗನುಗುಣವಾಗಿ ಹರಿಗುರುಗಳ ಸಂಕೀರ್ತನೆ ಗೈಯ್ಯುತ್ತಾ ಅಲ್ಲಿ ನರ್ತನ ಸೇವೆ ಸಲ್ಲಿಸುತ್ತಿದ್ದರು. ಅವರೆಂದಿಗೂ ಗುರುಗಳ ನಿಂದನೆಯನ್ನು ಸಹಿಸುತ್ತಿರಲಿಲ್ಲ. ಗುರುಗಳಲ್ಲಿ ದೋಷ ಹುಡುಕುವವರು ಎಂತಹ ಪಂಡಿತರೇ ಆಗಿರಲಿ ಅವರನ್ನು ಕ್ಷಣ ಮಾತ್ರದಲ್ಲಿ ನಿಗ್ರಹಿಸಿ ಗುರುಕೀರ್ತಿ ಪತಾಕೆಯನ್ನು ಎತ್ತಿ ಹಿಡಿಯುತ್ತಿದ್ದರು. ಇದಕ್ಕೆ ನಿದರ್ಶನವಾಗಿ ಮಂತ್ರಾಲಯದಲ್ಲಿ ನಡೆದ ಪುಟ್ಟ ಪ್ರಸಂಗವೊಂದನ್ನು ಉದಾಹರಿಸಬಹುದು :

ಒಮ್ಮೆ ಮಂತ್ರಾಲಯದ ಗುರುರಾಜರ ಸನ್ನಿಧಿಯಲ್ಲಿ ನಡೆದ ವಿದ್ವತ್ಸಭೆಯಲ್ಲಿ ಭಾಗವಹಿಸಲು ಶ್ರೀಮಠದ ಆಹ್ವಾನದಂತೆ ಆಚಾರ್ಯರು ಹೋಗಿದ್ದರು. ಆಗ ಅಲ್ಲಿಗೆ ಬಂದಿದ್ದ ಪಂಡಿತರೊಬ್ಬರು ಶ್ರೀಮದಪ್ಪಣ್ಣಾ ಚಾರ್ಯರು ರಚಿಸಿರುವ ಶ್ರೀರಾಘವೇಂದ್ರ ಸ್ತೋತ್ರದಲ್ಲಿ ಅನೇಕ ದೋಷಗಳಿವೆಯೆಂದು ಸಲ್ಲದ ಅಪಲಾಪ ಮಾಡತೊಡಗಿದರು. ಗುರುಭಕ್ತರಾದ ಆಚಾರ್ಯರಿಗೆ ಪಂಡಿತರ ದುರ್ವಾದ ಒಂದಿಷ್ಟೂ ಸಹನವಾಗಲಿಲ್ಲ. 'ಸಾಕ್ಷೀ ಹಯಾಸ್ಯೋऽತ್ರ ಹಿ' ಎಂದು ಗುರುರಾಜರೇ ಅಂಗೀಕಾರ ಹಾಕಿ ಪರಮಾದರದಿಂದ ಸ್ವೀಕರಿಸಿರುವ ಅಪ್ಪಣ್ಣಾಚಾರ್ಯ ಕೃತ ಗುರುಸ್ತೋತ್ರದ ಪ್ರಾಮಾಣ್ಯವನ್ನೂ, ಅದರ ಹಿರಿಮೆ ಗರಿಮೆಗಳನ್ನೂ ಆಚಾರ್ಯರು ತಮ್ಮ ವಿದ್ವತ್ಪೂರ್ಣವಾಣಿಯಿಂದ ಪ್ರತಿಪಾದಿಸಿದರಲ್ಲದೆ ನಿಮಿಷಾರ್ಧದಲ್ಲಿ ಆ ಪಂಡಿತರ ಖಂಡನೆಗೆ ಉತ್ತರವಾಗಿ ಮಂಡನ ಗ್ರಂಥವನ್ನು ರಚಿಸಿ ಗುರುಗಳಿಗೆ ಸಮರ್ಪಿಸಿದರು. ಇದರಲ್ಲವೇ ಆಚಾರ್ಯರ ಗುರುಭಕ್ತಿ! ಈ ವೃತ್ತಾಂತವನ್ನೇ –

ಶ್ರೀರಾಘವೇಂದ್ರಗುರುಸಂಸ್ತುತಿಖಂಡನಸ್ಯ
ಯೋ ಮಂಡನಂ ಚ ಕೃತವಾನ್ನಿಮಿಷಾರ್ಧಮಾತ್ರೇ ॥

ಎಂಬುದಾಗಿ ಶ್ರೀ ಕೋನೇರಿ ಆಚಾರ್ಯರು ತಾವು ರಚಿಸಿರುವ 'ಶ್ರೀಗುರುಸುಗುಣಚಂದ್ರಿಕಾ' ಎಂಬ ಕೃತಿಯಲ್ಲಿ ದಾಖಲಿಸಿರುತ್ತಾರೆ.

ಡಾ. ಗುರುರಾಜ ನಿಪ್ಪಾಣಿ ಅವರು ತಾವು ಸಂಪಾದಿಸಿರುವ 'ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ'ಯಲ್ಲಿ ಈ ಮಹಾತ್ಮರೀರ್ವರ ವಿಷಯವಾಗಿ ಮತ್ತೊಂದು ಸ್ವಾರಸ್ಯಕರವಾದ ಪ್ರಸಂಗವನ್ನು ತಿಳಿಸುತ್ತಾ ಹೀಗೆ ನಿರೂಪಿಸುತ್ತಾರೆ : "ಶ್ರೀಗುರುಜಗನ್ನಾಥವಿಠಲಾಂಕಿತ ಕೋಸಗಿ ಶ್ರೀಸ್ವಾಮಿರಾಯಾಚಾರ್ಯರು, ಆಚಾರ್ಯರಿಗಿಂತ ವಯಸ್ಸಿನಲ್ಲಿ ಚಿಕ್ಕವರಾದರೂ, ಶ್ರೀಜಂಬುಖಂಡಿ ಆಚಾರ್ಯರಿಗೂ ಅವರಿಗೂ ಮಹಾಸ್ನೇಹ. ತಾತ್ತ್ವಿಕ ಪ್ರಮೇಯ ರಹಸ್ಯಗಳನ್ನು, ಪ್ರಾಚೀನ ಜ್ಞಾನಿಗಳ ಅಂಶಾಂಶಿ ವಿಚಾರವನ್ನೂ ಅನೇಕ ಪ್ರಮಾಣಸಹಿತವಾಗಿ ತಿಳಿಸಿದ ಶ್ರೇಯಸ್ಸು ಶ್ರೀಸ್ವಾಮಿರಾಯಾಚಾರ್ಯರಿಗೆ ಸಲ್ಲುತ್ತದೆ. ಪೂಜ್ಯರಿಬ್ಬರು ಒಂದೆಡೆ ಸೇರಿದರೆಂದರೆ ಮುಗಿಯಿತು. ಹಸಿವೆ, ತೃಷೆ, ನಿದ್ರೆ ಮೊದಲಾದುದೆಲ್ಲ ಇಲ್ಲದೆ ಎಷ್ಟೋ ಸಮಯ ತತ್ತ್ವವಿಚಾರದಲ್ಲಿ ಮಗ್ನರಾಗುತ್ತಿದ್ದರಂತೆ. ಜ್ಞಾನಿಗಳಿಬ್ಬರೂ ಕೂಡಿಕೊಂಡು ಹೊರಟರೆ, ದಾರಿಯಲ್ಲಿಯ ಪಿಶಾಚಗ್ರಸ್ತರಾದವರು ಕುಣಿಯಲಾರಂಭ. ಎಷ್ಟೋ ಜನರ ಭೂತಪ್ರೇತಗಳನ್ನು ಮಹಾತ್ಮರಿಬ್ಬರೂ ಬಿಡಿಸಿ ಅನುಗ್ರಹಿಸಿದ್ದಾರೆ.

ಒಮ್ಮೆ ಮಹಾಭೋಕ್ತರಾದ ಜ್ಞಾನಿಗಳಿಬ್ಬರು ಬಳ್ಳಾರಿಯಲ್ಲಿದ್ದಾರೆ. ಯಾರಲ್ಲಿಯೂ ಭೋಜನಕ್ಕೆ ಹೋಗದೇ, ತಾವೇ ಶ್ರೀಗುರುರಾಜರಿಗೆ ನೈವೇದ್ಯ ಸಮರ್ಪಣೆ ಮಾಡಿ ಯಥೇಚ್ಛ ಭೋಜನ ಉಂಡು ವಿಶ್ರಾಂತಿಗೈದರು. ಮಧ್ಯಾಹ್ನ ಎಚ್ಚೆತ್ತು ಹಸಿವೆ ಎಂಬುದಾಗಿ ಅನೇಕರ ಮನೆಗಳಿಗೆ ಪಕ್ಷಮಾಸವಾದ್ದರಿಂದ ಹೋಗಿ ಪ್ರತಿಯೊಂದು ಮನೆಯಲ್ಲಿಯೂ 10–12 ಗಾರಿಗೆಗಳನ್ನು ಸೇವಿಸಿ ದಕ್ಕಿಸಿಕೊಂಡರು. ಭೀಮಕಾಯರಾದ, ಭೀಮಸೇನದೇವರ ಭಕ್ತರಾದ ಇವರ ವಿಷಯದಲ್ಲಿ ಇವೆಲ್ಲವೂ ಸುಲಭ ಸಾಧ್ಯವೇ".

ಇದೇ ತರಹ ಗುರುಭಕ್ತೋತ್ತಮರಾಗಿದ್ದ ಮುಂಡೇವಾಡಿ ಶ್ರೀರಾಮದಾಸರಲ್ಲಿಯೂ ಸಹ "ಲಂಗೋಟಿ ದಾಸ"ರೆಂದು ಹೆಸರಾದ ಶ್ರೀವಾದಿರಾಜಾಚಾರ್ಯರಿಗೆ ಗಾಢವಾದ ಸ್ನೇಹವಿತ್ತು. ಈರ್ವರೂ ತಿರುಪತಿ, ಮಂತ್ರಾಲಯ ಮುಂತಾದ ಪುಣ್ಯ ಕ್ಷೇತ್ರಗಳಿಗೆ ಒಟ್ಟಾಗಿ ಯಾತ್ರೆ ಕೈಗೊಂಡು ಅಲ್ಲಿ ಹಲವಾರು ಮಹಿಮೆಗಳನ್ನು ಮೆರೆದಿದ್ದಾರೆ[1].

ಹರಿದಾಸರ ಕಾಶಿ ಎಂದು ಪ್ರಸಿದ್ಧವಾದ ಚಿಪ್ಪಗಿರಿ ಕ್ಷೇತ್ರವೂ ಸಹ ಜಂಬುಖಂಡಿ ವಾದಿರಾಜಾಚಾರ್ಯರನ್ನು ಅಪಾರವಾಗಿ ಆಕರ್ಷಿಸಿತ್ತು. ಪ್ರತಿ ವರ್ಷವೂ ಕಾರ್ತಿಕ ಮಾಸದಲ್ಲಿ ನಡೆಯುವ ಶ್ರೀವಿಜಯದಾಸರ ಆರಾಧನಾ ಮಹೋತ್ಸವದಲ್ಲಿ ಭಾಗವಹಿಸಲು ಚಿಪ್ಪಗಿರಿಗೆ ತೆರಳುತ್ತಿದ್ದ ಆಚಾರ್ಯರು ಅತೀವ ಶ್ರದ್ಧಾಭಕ್ತಿಗಳಿಂದ ಸಕ್ರಿಯವಾಗಿ ಅಲ್ಲಿನ ಸಮಾರಂಭದಲ್ಲಿ ಪಾಲ್ಗೊಳ್ಳುತ್ತಿದ್ದರು. ಅನೇಕ ಪಂಡಿತೋತ್ತಮರನ್ನು ಹರಿದಾಸರನ್ನಾಗಿ ಮಾರ್ಪಡಿಸಿ ದಾಸಪರಂಪರೆಯನ್ನು ವಿಸ್ತರಿಸಿದ ಅಪರೋಕ್ಷೀಕೃತ ಶ್ರೀಶರೂ, ಭೃಗು ಋಷಿಗಳ ಅಂಶಸಂಭೂತರೂ,

---

1. ಮಂತ್ರಾಲಯದಲ್ಲಿ ಒಂದು ದಿವಸ ಒಬ್ಬ ಶ್ರೀಮಂತ ಭಕ್ತನ ಔತಣಕ್ಕೆ, ಶ್ರೀದಾಸರಾಯರು ಒಪ್ಪಿರಲಾಗಿ ಅದೇ ದಿವಸವೇ ಶ್ರೀಲಂಗೋಟಿದಾಸರು ಶ್ರೀದಾಸರಾಯರಿಗೆ ಪ್ರಸಾದಕ್ಕೆ ಆಮಂತ್ರಣ ಕೊಟ್ಟು ಮಧುಕರಿ ಬೇಡಿ ತಂದ ಜೋಳಿಗೆಯನ್ನು ತುಂಗಾ ನದಿಯಲ್ಲಿ ಅದ್ದಿ ತೆಗೆದು ದೇವರಿಗೆ ಸಮರ್ಪಿಸಿ ನದಿಯಲ್ಲಿನ ಬಂಡೆಗಲ್ಲುಗಳೇ ಊಟಕ್ಕೆ ಕೂಡ್ರಲು ಮಣೆಯೆಂದೂ, ಹಾಗೂ ಚಿನ್ನದ ಹರಿವಾಣವೆಂದೂ, ಕಡಬಿನ ಹೊಟ್ಟೆಗೆ ತೆಗ್ಗು ಮಾಡುವುದೇ ತುಪ್ಪ ನೀಡಲು ದೊನ್ನೆಯೆಂದೂ ಅನುಸಂದಾನ ಮಾಡಲು ಶ್ರೀದಾಸರಾಯರಿಗೆ ಪಾಠಕಲಿಸಿ ವಿಘ್ನಗಳನ್ನು ದೂರಮಾಡುವ ಶ್ರೀಗಜಾನನಿಗೆ ಪ್ರೀತಿಯ ಪದಾರ್ಥಗಳಾದ ಕರಿಗಡಬು ಹೆರತುಪ್ಪವನ್ನು ಯಥೇಚ್ಛವಾಗಿ ಬಡಿಸಿ 'ನೀವು ನಮ್ಮ ಆಮಂತ್ರಣಕ್ಕೆ ಮಾನ್ಯಮಾಡಿ ಬಂದದ್ದಕ್ಕಾಗಿ ತಿರುಪತಿಯ ಶ್ರೀವೇಂಕಟರಮಣನು ನಿಮ್ಮಿಂದ ನಿರ್ವಿಘ್ನದಿಂದಲೂ ದಂಡನಮಸ್ಕಾರದ ಸೇವೆಯನ್ನು ಚೆನ್ನಾಗಿ ತಕ್ಕೊಳ್ಳುವನು' ಎಂದು ಶ್ರೀದಾಸರಿಗೆ ಹಾರೈಸಿ ಕಳುಹಿಸಿದರು. ಇದೇ ಸತ್ಸಂಗದ ಸುಫಲವು!"

– ಮುಂಡೇವಾಡಿ ಶ್ರೀರಾಮದಾಸ ಮಹಾರಾಜರ ಚರಿತಾಮೃತ ಕಾವ್ಯದ ಕಠಿಣ ಶಬ್ದಾರ್ಥವು.

ಚಿಪ್ಪಗಿರ್ಯಧಿಪರೂ ಆದ ಶ್ರೀವಿಜಯದಾಸರ ಮಹಿಮಾ ವರ್ಣನೆ ಮಾಡುವುದರಲ್ಲಿ ಆಚಾರ್ಯರದು ಎತ್ತಿದ ಕೈ. ದಾಸರ ಸುಳಾದಿ, ಉಗಾಭೋಗ, ಕೀರ್ತನೆಗಳನ್ನು ಉದಾಹರಿಸುತ್ತಾ ಅವರು ಮಾಡುತ್ತಿದ್ದ ಪ್ರವಚನ ಶೈಲಿಯೇ ಒಂದು ಸೊಗಸು. ಆಚಾರ್ಯರು ದಾಸ ಸಾಹಿತ್ಯದ ಹಿರಿಮೆಯನ್ನು ಕನ್ನಡ ಭಾಷೆಯಲ್ಲಷ್ಟೇ ಅಲ್ಲದೆ ಗೀರ್ವಾಣ ಭಾಷೆಯಲ್ಲಿಯೂ ಸಹ ಮನ ಮುಟ್ಟುವಂತೆ ಪ್ರತಿಪಾದಿಸುತ್ತಿದ್ದರು. ದಾಸರಾಯರ ಸಾಧನೆಗಳನ್ನು, ಅವರು ಜೀವನದುದ್ದಕ್ಕೂ ಸಾರಿದ ಸಂದೇಶವನ್ನು ಆಗಮೋಕ್ತಿಗಳ ಬೆಳಕಿನಲ್ಲಿ ತುಲನೆ ಮಾಡಿ ದಾಸ–ವ್ಯಾಸ ಸಾಹಿತ್ಯಗಳ ಸಮನ್ವಯ ಸಾಧಿಸುತ್ತಿದ್ದರು. ಶ್ರೀವಿಜಯದಾಸರ ಸುಳಾದಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದ ಆಚಾರ್ಯರು ಬಹುಶಃ ಚಿಪ್ಪಗಿರಿಯಲ್ಲಿದ್ದಾಗಲೇ 'ಶ್ರೀವಿಜಯದಾಸಮಹೋದಯಾನಾಂ ಸುಳಾದೇಃ ಅರ್ಥಕಥನಮ್' ಎಂಬ ಪ್ರಬಂಧವನ್ನು ರಚಿಸಿರಬೇಕೆಂದು ತೋರುತ್ತದೆ. ಕನ್ನಡ ಭಾಷೆಯ ವಿಶಿಷ್ಟ ಪ್ರಕಾರವಾದ ಸುಳಾದಿಯ ಅರ್ಥವಿವರಣೆಯನ್ನು ಸಂಸ್ಕೃತದಲ್ಲಿ ನೀಡಿರುವುದು ಈ ಪುಟ್ಟ ಪ್ರಬಂಧದ ಹಿರಿಮೆಯೆನ್ನಬಹುದು.

ಇದೇ ಮಾದರಿಯಲ್ಲಿ 'ಕನ್ನಡದ ಶ್ರೀಮನ್ನ್ಯಾಯಸುಧಾ' ಎಂದು ಪ್ರಖ್ಯಾತವಾದ "ಹರಿಕಥಾಮೃತಸಾರ" ಗ್ರಂಥವನ್ನು ವ್ಯಾಸಸಾಹಿತ್ಯದ ಹಿನ್ನೆಲೆಯಲ್ಲಿ ಅನುವಾದ ಮಾಡುವುದರಲ್ಲಿಯೂ ಸಹ ಆಚಾರ್ಯರು ಸಿದ್ಧಹಸ್ತರಾಗಿದ್ದರು. ಎಂತಹ ಸುಧಾಪಾಠೀಕರೂ ಸಹ ತಡಬಡಿಸುವ ಗಹನವಾದ ಅರ್ಥ ವಿಚಾರಗಳನ್ನು ಅವರು ಹರಿದಾಸರ ಕೃತಿಗಳಿಂದ ಸುಲಭವಾಗಿ ಎತ್ತಿಕೊಡುತ್ತಿದ್ದರು. ಹಾಗಾಗಿ ಆರಾಧನಾಂಗವಾಗಿ ಅಲ್ಲಿ ನಡೆಯುತ್ತಿದ್ದ ವಿದ್ವದ್ಗೋಷ್ಠಿಗಳಲ್ಲಿಯೂ ಅವರಿಗೆ ಅಗ್ರಮರ್ಯಾದೆ ಸಲ್ಲುತ್ತಿತ್ತು. ಚಿಪ್ಪಗಿರಿಯ ಪೂಜಾಪರ್ಯಾಯವನ್ನು ವಹಿಸಿಕೊಂಡಿದ್ದ ಮೋಹನದಾಸರ ವಂಶಸ್ಥರಾದಿಯಾಗಿ ಅಲ್ಲಿ ಭಾಗವಹಿಸುತ್ತಿದ್ದ ಪ್ರತಿಯೊಬ್ಬ ಪಂಡಿತರೂ ಆಚಾರ್ಯರ ವಚನಗಳನ್ನು ಬಹು ಗೌರವಭಾವದಿಂದ ಆಲಿಸುತ್ತಿದ್ದರು.

ಆಚಾರ್ಯರು ಕೇವಲ ಪ್ರವಚನ, ಪೂಜಾದಿಗಳಷ್ಟೇ ದಾಸರಾಯರ ಸೇವೆ ಎಂದು ಭಾವಿಸಿರಲಿಲ್ಲ. ಕ್ಷೇತ್ರದ ಶುಚಿತ್ವಕ್ಕೆ ಕಾರಣವಾಗುವ ಪ್ರತಿಯೊಂದು ಸಣ್ಣ ಕೆಲಸವೂ ದಾಸರಾಯರ ಕೈಂಕರ್ಯವೆಂದೇ ಅವರು ನಂಬಿದ್ದರು. ಪುಸ್ತಕವನ್ನು ಹಿಡಿದು ಪ್ರವಚನದ ಮೂಲಕ ಸಭಿಕರ ಮಸ್ತಕವನ್ನು ಶುಚಿಗೊಳಿಸುವ ಕಾರ್ಯವನ್ನು ಎಷ್ಟು ಶ್ರದ್ಧೆಯಿಂದ ಮಾಡುತ್ತಿದ್ದರೋ ಅಷ್ಟೇ ಶ್ರದ್ಧೆ ಹಾಗೂ ನಿರ್ಮಲಾಂತಃಕರಣಗಳಿಂದ ಪೊರಕೆಯನ್ನು ಹಿಡಿದು ವಿಜಯರಾಯರ ಕಟ್ಟೆಯ ಸುತ್ತಮುತ್ತಲೂ ಕಸ ಗುಡಿಸುತ್ತಿದ್ದರು[1]. ಬ್ರಾಹ್ಮಣರ ಭೋಜನದ ನಂತರ ಎಂಜಲೆಲೆಗಳನ್ನು ತೆಗೆದು ಗೋಮಯ ಮಾಡುವುದರಲ್ಲಿಯೂ ಅವರು ಆಲಸ್ಯ ತೋರುತ್ತಿರಲಿಲ್ಲ.

ಜಂಬುಖಂಡಿ ವಾದಿರಾಜಾಚಾರ್ಯರ ತೇಜಃಪುಂಜವಾದ ವ್ಯಕ್ತಿತ್ವ, ಪ್ರಖರಪಾಂಡಿತ್ಯ, ಅಸ್ಖಲಿತ ವಾಗ್ವೈಖರಿ, ನಿರ್ಭೀತ ನಿಲುವು ಮುಂತಾದವುಗಳನ್ನು ಮೆಚ್ಚಿಕೊಂಡು ಗೌರವಿಸುತ್ತಿದ್ದವರಿದ್ದ ಹಾಗೆ ಅವರ

---

1. "ಶ್ರೀವಿಜಯದಾಸರ ಆರಾಧನೋತ್ಸವಗಳಲ್ಲಿ ಜಂಬುಖಂಡಿ ಆಚಾರ್ಯರು ಕಸಪೊರಕೆಯನ್ನು ಹಿಡಿದು ಇಡೀ ಪ್ರಾಂಗಣವನ್ನು ಗುಡಿಸುತ್ತಿದ್ದರಂತೆ. ಆಚಾರ್ಯರೇ ಸ್ವತಃ ಗುಡಿಸುತ್ತಿದ್ದುದ್ದನ್ನು ನೋಡಿ ಅಲ್ಲಿಗೆ ಬಂದಿದ್ದ ಭಕ್ತವೃಂದದವರೂ ಸಹ ತಾವಾಗಿಯೇ ಮುಂದೆ ಬಂದು ಅವರೊಂದಿಗೆ ಕಸ ಗುಡಿಸುತ್ತಿದ್ದರಂತೆ."
ಈ ಪ್ರಸಂಗವನ್ನು ಹರಿದಾಸರತ್ನಂ ಶ್ರೀಗೋಪಾಲದಾಸರು ತಾವು ರಚಿಸಿರುವ 'ವಿಜಯದಾಸರ ಚರಿತ್ರೆ' ಎಂಬ ಪುಸ್ತಕದಲ್ಲಿ ವಿಸ್ತಾರವಾಗಿ ಉಲ್ಲೇಖಿಸಿರುತ್ತಾರೆ. ಇದೇ ಮಾದರಿಯಲ್ಲಿ ಒಮ್ಮೆ ನೆರೆದಿದ್ದ ಮನೆತನಸ್ಥ ಆಚಾರ್ಯರುಗಳಲ್ಲಿ ನೈವೇದ್ಯ ಸಮರ್ಪಣೆಯ ವಿಷಯವಾಗಿ ವಿವಾದವುಂಟಾದಾಗ ಜಂಬುಖಂಡಿ ವಾದಿರಾಜಾಚಾರ್ಯರೇ ಮುಂದೆ ನಿಂತು ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಿದರಂತೆ. ಇಂತಹ ಹಲವಾರು ಪ್ರಸಂಗಗಳನ್ನು ಚಿಪ್ಪಗಿರಿಯಲ್ಲಿರುವ ಹಿರಿಯ ತಲೆಮಾರಿನವರು ಮತ್ತು ಅಲ್ಲಿಗೆ ನಿಯಮಿತವಾಗಿ ಭೇಟಿ ನೀಡುವ ಭಕ್ತವೃಂದದವರು ಇಂದಿಗೂ ನೆನೆಯುತ್ತಾರೆ.

ವಿಚಾರಧಾರೆಗಳನ್ನು ಅದರಲ್ಲಿಯೂ ಮುಖ್ಯವಾಗಿ ಶ್ರೀವಾದಿರಾಜರ ಋಜುತ್ವೋತ್ಕರ್ಷವನ್ನು ಒಪ್ಪದೆ ವಿತಂಡವಾದ ಮಾಡುವ ಕೆಲವು ದುರಾಗ್ರಹಿಗಳೂ ಇದ್ದರು. ಆದರೆ ಸತ್ಯವನ್ನು ನಿರ್ಭೀತರಾಗಿ ಸಾಧಿಸುತ್ತಿದ್ದ ವೀರಸೇನಾನಿಯಾದ ಆಚಾರ್ಯರು ಹೋದ ಕಡೆಗಳಲ್ಲೆಲ್ಲಾ ಜಾಂಗಟೆ ಯನ್ನು ಬಾರಿಸುತ್ತಾ ಶ್ರೀಹರಿಯ ಸರ್ವೋತ್ತಮತ್ವವನ್ನೂ, ವಾಯುದೇವರ ಜೀವೋತ್ತಮತ್ವವನ್ನೂ ಹಾಗೂ ವಾದಿರಾಜ ಗುರುಸಾರ್ವಭೌಮರ ವಾಯುಸಮತ್ವೋಚಿತವಾದ ಋಜುಗಣಸ್ಥತ್ವವನ್ನೂ ಸಮರ್ಥವಾಗಿ ಪ್ರತಿಪಾದಿಸುತ್ತಿದ್ದರು.

ಗುರುರಾಜರ್ಜುತ್ವರೋಧಿಮರ್ದನಾಭಿಧಮುತ್ತಮಮ್ ।
ಶ್ರುತಿಸ್ಮೃತ್ಯಾದಿಮಾನಾಢ್ಯಂ ಗ್ರಂಥಂ ಚಕ್ರೇ ವಿದಾಂವರಃ ॥

ಎಂದು ಶ್ರೀಷಟ್ಪುರಾಚಾರ್ಯರು ಹೇಳಿರುವಂತೆ ರಾಜರ ಋಜುತ್ವ ಬಹುಪ್ರಮಾಣಪ್ರಮಿತವೆಂದು ಸ್ಥಾಪಿಸಲು ಶ್ರುತಿ, ಸ್ಮೃತಿ, ಪುರಾಣೋಕ್ತಿ ಗಳನ್ನು ಉದಾಹರಿಸುತ್ತಾ ಹಲವಾರು ಗ್ರಂಥಗಳನ್ನು ಸಹ ರಚಿಸಿದರು. 'ಋಜುತ್ವ–ವಿರೋಧಿಮರ್ದನ ಅಥವಾ ಪರಿಮರ್ದನ' ಎಂಬ ಕೃತಿ ಯನ್ನು ಬರೆದು ರಾಜರ ಋಜುತ್ವ ವಿರೋಧಿಗಳ ಅಪಲಾಪಗಳು ಆಧಾರರಹಿತವೆಂದು ಸ್ಪಷ್ಟೋಕ್ತಿಗಳಿಂದ ನಿರೂಪಿಸಿದರು.

ಸಾಧನೆಯ ಅತ್ಯುಚ್ಚಮಟ್ಟ ತಲುಪಿದ್ದ ಆಚಾರ್ಯರ ವೈರಾಗ್ಯವಂತೂ ವಿಸ್ಮಯಕರವಾದದ್ದು. ಸಂಸಾರದಲ್ಲಿದ್ದರೂ ಸಂಸಾರಪಾಶಕ್ಕೆ ಸಿಲುಕದೇ ಮಮಕಾರರಹಿತರಾಗಿ ಕಂಸಾರಿಯನ್ನು ಒಲಿಸಿಕೊಂಡಿದ್ದ ಅವರ ತ್ಯಾಗಬುದ್ಧಿ ಊಹಾತೀತವಾದದ್ದು. ಬೇಡಿ ಬಂದವರಿಗೆ ಅವರೆಂದೂ ಬರಿಗೈಲಿ ಕಳುಹಿಸುತ್ತಿರಲಿಲ್ಲ. ಅವರ ಮನೆ ಬಾಗಿಲಿಗೆ ಬಂದವರಾರೂ ಅತೃಪ್ತರಾಗಿ ಹಿಂದಿರುಗುತ್ತಿರಲಿಲ್ಲ. ಅಶನಾರ್ಥಿಗಳಿಗೆ ಅನ್ನ, ವಸ್ತ್ರಗಳನ್ನೂ; ವಿದ್ಯಾರ್ಥಿಗಳಿಗೆ ವಿದ್ಯಾಸರೆಗಳನ್ನೂ, ವಿತ್ತಾರ್ಥಿಗಳಿಗೆ ಹೇರಳವಾದ ಸಿರಿ–ಸಂಪತ್ತುಗಳನ್ನೂ ಅವರು ಯಾವ ಲೌಕಿಕ ಫಲಾಪೇಕ್ಷೆಗಳಿಲ್ಲದೇ ಕೇವಲ ಹರಿಪ್ರೀತಿಗಾಗಿ ನೀಡುತ್ತಿದ್ದರು. ತಮ್ಮ ಜೀವಿತದಲ್ಲಿ ಆಚಾರ್ಯರು ತಮ್ಮ ಸರ್ವಸ್ವವನ್ನೂ ದಾನ ಮಾಡಿದ ಪ್ರಸಂಗಗಳೂ ಇಲ್ಲದಿಲ್ಲ. ಒಮ್ಮೆ

ಸದ್ಬ್ರಾಹ್ಮಣನೊಬ್ಬನಿಗೆ ಹಾನಗಲ್ಲಿನಲ್ಲಿದ್ದ ತಮ್ಮ ಗೃಹಾದಿ ಸರ್ವಸ್ವವನ್ನೂ ದಾನ ಮಾಡಿದ್ದಾಗಿ ಅವರೇ ತಮ್ಮ ಆತ್ಮಕಥನದಲ್ಲಿ ಹೇಳಿಕೊಂಡಿದ್ದಾರೆ :

ಶ್ರಾವಣೇ ಶ್ರೀಮತೋ ದೃಷ್ಟ್ವಾ ಗುರುರಾಜಾನ್ ಕ್ಷಯಾಬ್ದಕೇ ।
ಮಾಸಿ ಭಾದ್ರಪದೇ ಶುಕ್ಲೇ ದ್ವಾದಶ್ಯಾಂ ಪರಮಾದರಾತ್ ॥
ಗೃಹಾದಿಕಂ ಬ್ರಾಹ್ಮಣಾಯ ದತ್ವಾಽಹಂ ನಿರಪೇಕ್ಷಕಃ ।
ಶ್ರೀಸುಧಾಪ್ರಾಶನಾಪೇಕ್ಷಾ ಮಾತ್ರೇಣ ಪ್ರಿಯಯಾಯುತಃ ॥

ಕ್ಷಯನಾಮ ಸಂವತ್ಸರದಲ್ಲಿ ಶ್ರಾವಣ ಮಾಸದಲ್ಲಿ ನಡೆದ ಮಂತ್ರಾಲಯ ಪ್ರಭುಗಳ ಆರಾಧನೋತ್ಸವದಲ್ಲಿ ಭಾಗವಹಿಸಿ ಸ್ವಗ್ರಾಮಕ್ಕೆ ಹಿಂದಿರುಗಿದ ನಂತರ ಭಾದ್ರಪದ ಶುದ್ಧ ದ್ವಾದಶಿಯ ದಿವಸ ಪರಮಾದರದಿಂದ ಅಪೇಕ್ಷಾರಹಿತರಾಗಿ ತಮ್ಮ ಗೃಹಾದಿ ಸಮಸ್ತ ಸಂಪತ್ತನ್ನೂ ವಿಪ್ರೋತ್ತಮನಿಗೆ ದಾನ ಮಾಡಿ ತಾವು ಕೇವಲ ಶ್ರೀಮನ್ನ್ಯಾಯ ಸುಧಾಮೃತವನ್ನು ಸಂತೋಷದಿಂದ ಸವಿಯುತ್ತಾ ಕುಟುಂಬಸಮೇತ ತೀರ್ಥಯಾತ್ರೆಗೆ ತೆರಳಿದ್ದಾಗಿ ಹೇಳಿಕೊಂಡಿದ್ದಾರೆ.

ಎಷ್ಟು ಸಿಕ್ಕಿದರೂ ತೃಪ್ತರಾಗದೇ ಮತ್ತಷ್ಟನ್ನು ಹೇಗಾದರೂ ದಕ್ಕಿಸಿ ಕೊಂಡು ಕೂಡಿಡಬೇಕೆಂಬ ಅತ್ಯಾಸೆಯ ಕೂಪದಲ್ಲಿ ಬಿದ್ದಿರುವ ಇಂದಿನ ಪೀಳಿಗೆಗೆ ಆಚಾರ್ಯರ ಮೇರುಸದೃಶ ವೈರಾಗ್ಯ, ತ್ಯಾಗಬುದ್ಧಿ, ಯದೃಚ್ಛಾಲಾಭ ಸಂತೃಪ್ತಿ ಮುಂತಾದವು ನಿಲುಕುವ ಸಂಗತಿಗಳಲ್ಲ.

ಊರ್ಜಾಸಿತದಶಮ್ಯಾಂ ತು ಶೂರ್ಪಾಕಾರಂ ಪ್ರವಿಶ್ಯ ಚ ।
ಅತ್ರ ಮಾಸತ್ರಯಂ ಕೃಷ್ಣಾತಟಿನೀಗತಂ ಹರಿಮ್ ॥
ಶ್ರೀನೃಸಿಂಹಂ ಹ(ಹಿ) ರಮಾಲೋಲಂ ಚಕ್ರಶಂಖಧರಂ ಹರಿಮ್ ।
ಪ್ರಿಯಾಯುತಂ ತಿಗ್ಮಕರಕೋಟ್ಯಪೇಕ್ಷಾಧಿಭಾಯುತಮ್ ॥
ವಿಕಲ್ಪಸೂತ್ರವೇದ್ಯಂ ಚ ವಿಕಲ್ಪಭಯನಾಶನಮ್ ।
ಕಲ್ಪಂ ಕಲ್ಪಂ ಸೃಜಂತಂ ತಂ ಜಗತ್ಕಲ್ಪಂ ಸ್ತುವೇಽನಿಶಮ್ ॥

ಎಂಬ ಆತ್ಮಕಥನದ ಉಲ್ಲೇಖವನ್ನು ನೋಡಿದರೆ ಆಚಾರ್ಯರು ಕಾರ್ತೀಕ ಬಹುಳ ದಶಮಿಯಂದು ಕೃಷ್ಣಾ ನದಿ ತೀರದ ಶೂರ್ಪಾಲಿ

ಕ್ಷೇತ್ರಕ್ಕೆ ಬಂದು ರಮಾಲೋಲನೂ, ಶಂಖಚಕ್ರಧಾರಿಯೂ ಆದ ಶ್ರೀಲಕ್ಷ್ಮೀನರಸಿಂಹನನ್ನು ಸೇವಿಸುತ್ತಾ ಮೂರು ತಿಂಗಳುಗಳ ಕಾಲ ನೆಲೆಸಿದರೆಂದೂ ತಿಳಿದುಬರುತ್ತದೆ. ತಮಗೆ ಇನ್ನೂರು ನಾಣ್ಯಗಳ ಋಣವಿತ್ತೆಂದೂ ಶೂರ್ಪಾಲಿಯ ಕ್ಷೇತ್ರ ಪ್ರಭುವನ್ನು ಪ್ರಾರ್ಥಿಸಿ ಅವನ ಕೈಂಕರ್ಯವನ್ನು ತ್ರಿಮಾಸ ಮಾಡಿದ್ದರಿಂದ ಋಣವಿಮೋಚನೆಯಾಗಿ ಮತ್ತೆ ಧನಲಾಭವಾಯಿತೆಂದು ಅವರೇ ಹೇಳಿಕೊಂಡಿದ್ದಾರೆ[1].

ಶ್ರೀವ್ಯಾಸತತ್ತ್ವಜ್ಞರ ಶಿಷ್ಯರೂ, ರುದ್ರಾಂಶ ಸಂಭೂತರೂ ಆದ ಶ್ರೀವಿಷ್ಣುತೀರ್ಥರ ಸನ್ನಿಧಾನಯುಕ್ತ ಮಾದನೂರಿಗೂ ಸಹ ಆಚಾರ್ಯರು ಆಗಾಗ ಭೇಟಿ ನೀಡುತ್ತಿದ್ದರಲ್ಲದೆ ಅಲ್ಲಿ ಕೆಲವು ಕಾಲವಿದ್ದು ಕಠಿಣ ಸೇವಾವ್ರತಗಳನ್ನು ಕೈಗೊಂಡಿದ್ದರೆಂದು ತಿಳಿದು ಬರುತ್ತದೆ. ಒಮ್ಮೆ ಆಚಾರ್ಯರು ಮಾದನೂರಿನಲ್ಲಿದ್ದಾಗ ಶ್ರೀವಿಷ್ಣುತೀರ್ಥರ ಪ್ರೇರಣೆಯಂತೆ ಅವರಿಂದ ರಚಿತವಾದ "ಅಧ್ಯಾತ್ಮರಸರಂಜಿನಿ" ಕೃತಿಗೆ ಪ್ರಾಕೃತ ವ್ಯಾಖ್ಯಾನವನ್ನು ರಚಿಸಿ ಗುರುಬಿಂಬನಿಗೆ ಸಮರ್ಪಿಸಿರುತ್ತಾರೆ.

## ಆಚಾರ್ಯರ ಬದರೀಯಾತ್ರೆ

ತಮ್ಮ ಹಿರಿಯರ ಸ್ಥಳವಾದ ಜಮಖಂಡಿಗೆ ಬಂದು ಅಲ್ಲಿನ ಯೋಗ್ಯ ಅಧಿಕಾರಿಗಳಿಗೆ ಸುಧಾದಿ ಪ್ರೌಢ ಗ್ರಂಥಗಳನ್ನು ಪಾಠ ಹೇಳುತ್ತಾ ಸ್ವಲ್ಪ ಕಾಲ ನೆಲೆಸಿದ ಆಚಾರ್ಯರು[2] ನಂತರ ಅವಧೂತರಂತೆ ಕೊಲ್ಹಾಪುರ, ಪುಣೆ,

---

1. ನೃಸಿಂಹಪಾದಸಂಪ್ರಾಪ್ತೇ ದ್ವಿಶತಂ ಮುದ್ರಿಕಾಋಣಮ್ ।
ಪರಿತ್ಯಜೇನ್ಮಾಂ ಭಗವನ್ ನೃಸಿಂಹಾನ್ಯನ್ನ ಯಾಚಯೇ ॥ 18 ॥
ಮಾಸತ್ರಯಾಣಾದೃಣಾನ್ಮುಕ್ತೇ ಪಾಥೇಯಧನಕಾಂಕ್ಷಿಣೇ ।
ಪುನರ್ದ್ವಿಶತಸಂಪ್ರಾಪ್ತೌ ರಾಜೇಂದ್ರಪದಮಾಗತೇ ॥
— ಆಚಾರ್ಯರ ಆತ್ಮಕಥನ

2. ಪೂರ್ವಭೂಮಿಂ ಜಂಬ್ವಿತ್ಯಾಖ್ಯಾಯುತಾಂ ಮುದಾ ॥
ತತ್ರ ಯೋಗ್ಯಾಧಿಕಾರಿಭ್ಯೋ ಮುದಾ ಶ್ರೀಮತ್ಸುಧಾಂ ಸದಾ ।
ವ್ಯಾಕುರ್ವನ್ ಕಾಲಹರಣಮಾವಸಂ ತಂ ಕೃತಂ ಮಯಾ ॥
— ಆಚಾರ್ಯರ ಆತ್ಮಕಥನ

ದ್ವಾರಕಾದಿ ಪುಣ್ಯ ಸ್ಥಳಗಳನ್ನು ಸಂದರ್ಶಿಸಿದರು. ಹೋದ ಕಡೆಗಳಲ್ಲೆಲ್ಲಾ ಕಠಿಣ ಅನುಷ್ಠಾನಪರರಾಗಿ ಆಯಾ ಕ್ಷೇತ್ರ ದೇವತೆಗಳನ್ನು ಉಪಾಸಿಸಿ ಒಲಿಸಿಕೊಂಡರು. ಗಂಗೆಯನ್ನು ಸೇವಿಸುವ ಹಂಬಲದಿಂದ ಉತ್ತರ ಭಾರತದ ಕಾಶಿ, ಪ್ರಯಾಗ, ಹರಿದ್ವಾರ, ಹೃಷಿಕೇಶ, ಬದರಿ ಮುಂತಾದ ಪವಿತ್ರ ಧಾಮಗಳಿಗೆ ಭೇಟಿಕೊಟ್ಟರು.

ತೀರ್ಥಪ್ರಬಂಧೋಕ್ತ್ಯನುಸಂಧಿಪೂರ್ವಕಂ
ಕಾಶ್ಯಾದಿಸುಕ್ಷೇತ್ರಗತಂ ಹರಿಂ ತಥಾ।
ತದ್‌ಭಕ್ತವರ್ಯಾನ್ ದಶಚಿನ್ಮತಾನುಗಾನ್
ಸಂಪ್ರೇಕ್ಷಮಾಣಃ ಕ್ಷಿತಿಮಂಡಲೇಽಚರತ್ ॥

ಎಂದು ಶ್ರೀಸುಧಾಕರ ಗುರುಗುಣರತ್ನಮಾಲೆಯಲ್ಲಿ ಹೇಳಿರುವಂತೆ, ಜಂಬುಖಂಡಿ ಆಚಾರ್ಯರು ಶ್ರೀವಾದಿರಾಜ ಪೂಜ್ಯ ಚರಣವಿರಚಿತ ತೀರ್ಥಪ್ರಬಂಧದಲ್ಲಿ ಉಲ್ಲೇಖಿತವಾಗಿರುವ ಕ್ರಮವನ್ನು ಅನುಸರಿಸಿ ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಮಾಡುತ್ತಿದ್ದುದು ಒಂದು ವಿಶೇಷವಾಗಿತ್ತು. ವಾಹನ ಸೌಕರ್ಯಗಳು ಸಮರ್ಪಕವಾಗಿರದಿದ್ದ ಆ ಕಾಲದಲ್ಲಿ ತೀರ್ಥ ಕ್ಷೇತ್ರಯಾತ್ರೆ, ಅದರಲ್ಲಿಯೂ ಹೆಜ್ಜೆ ಹೆಜ್ಜೆಗೂ ಅಡೆತಡೆಯುಂಟಾಗುವ ಬದರಿಯಂತಹ ದುರ್ಗಮ ಗಿರಿ ಪ್ರದೇಶಗಳಿಗೆ ತೆರಳುವುದಂತೂ ತುಂಬಾ ಪ್ರಯಾಸಕರವಾದ ಸಂಗತಿಯೇ ಆಗಿತ್ತು. ಆದರೆ ವಾಯುದೇವರ ಮತ್ತು ಭಾವಿಸಮೀರರ ಪರಮಾನುಗ್ರಹಕ್ಕೆ ಪಾತ್ರರಾದ ಆಚಾರ್ಯರಿಗೆ ತೊಂದರೆಯೆಲ್ಲಿಯದು? ಸುತ್ತಲೂ ಹಿಮಾಚ್ಛಾದಿತ ಗಿರಿಶಿಖರಗಳ ನಡುವೆ ಆಚಾರ್ಯರು ನಿರ್ಭೀತರಾಗಿ ನಾರಸಿಂಹನನ್ನು ನೆನೆಯುತ್ತಾ ಸಂಚರಿಸಿದರು. ಅಂದು ಭೂತರಾಜರು ವಾದಿರಾಜರ ಅನುಜ್ಞೆಯಂತೆ ತ್ರಿವಿಕ್ರಮ ದೇವರನ್ನು ತರಲು ವಾಯುವೇಗದಲ್ಲಿ ಬದರಿಕಾಶ್ರಮಕ್ಕೆ ಪ್ರಯಾಣ ಬೆಳೆಸಿದರೆ, ಇಂದು ರಾಜರ ಋಜುತ್ವ ಮಂಡನೆಯಲ್ಲಿ ಭೂತರಾಜರ ಪ್ರತಿರೂಪದಂತೆ ವಿಜೃಂಭಿಸುತ್ತಿದ್ದ ಜಂಬುಖಂಡಿ ಆಚಾರ್ಯರು ಕಾಲ್ನಡಿಗೆಯಲ್ಲಿಯೇ ದ್ವೈತ ಸಿದ್ಧಾಂತವನ್ನು ಮತ್ತು ರಾಜರ ಮಹಿಮೋತ್ಕರ್ಷವನ್ನು ಪ್ರತಿ ಹೆಜ್ಜೆಗೂ ಪ್ರಚುರಪಡಿಸುತ್ತಾ

ತ್ರಿವಿಕ್ರಮನಂತೆ ಮುನ್ನಡೆದರು. ಬದರಿಯ ಮಾರ್ಗದಲ್ಲಿ ಸಿಕ್ಕುವ ದೇವಪ್ರಯಾಗ, ರುದ್ರಪ್ರಯಾಗ, ಸ್ಕಂದಪ್ರಯಾಗ (ಕರ್ಣಪ್ರಯಾಗ), ನಂದಪ್ರಯಾಗ, ವಿಷ್ಣುಪ್ರಯಾಗ, ಕೇಶವಪ್ರಯಾಗ ಎಂಬ ಷಟ್ಸಂಗಮ ಸ್ಥಳಗಳಲ್ಲಿ ಸ್ನಾನಾದಿ ಸತ್ಕರ್ಮಗಳನ್ನು ವಿಧಿವತ್ತಾಗಿ ಆಚರಿಸಿದ ಆಚಾರ್ಯರು ಸರ್ವಜ್ಞಕೃತ ಸರ್ವಮೂಲಗಳನ್ನು ಅಲ್ಲಿ ಭಕ್ತಿಪುರಃಸ್ಸರ ವಾಗಿ ಪಠಿಸಿದರು.

**ಷಟ್‌ಪ್ರಯಾಗಾಃ ಸ್ವವೇಗೇನ ಕಾಮಾದ್ಯರಿಮಹೀರುಹಃ।**
**ಉನ್ಮೂಲಯಂತು ಪಾಪಾಖ್ಯಂ ಪಂಕಂ ಪ್ರಕ್ಷಾಲಯಂತು ನಃ॥**

"ಪಾಪವೆಂಬ ಕೆಸರನ್ನು ತೊಳೆಯಲು ಸಮರ್ಥವಾದ, ಅತ್ಯಂತ ವೇಗದಿಂದ ಹರಿಯುತ್ತಿರುವ ಷಟ್‌ಪ್ರಯಾಗಗಳು ನಮ್ಮ ಕಾಮಾದಿ ಅರಿಷಡ್ವರ್ಗ ವೃಕ್ಷವನ್ನು ಸಮೂಲವಾಗಿ ಕಿತ್ತುಹಾಕಲಿ" ಎಂಬ ತೀರ್ಥ ಪ್ರಬಂಧೋಕ್ತಿಯನ್ನು ಸ್ಮರಿಸಿ ವಿಧವಿಧವಾಗಿ ಪ್ರಾರ್ಥಿಸಿದ ಆಚಾರ್ಯರು ಅಲ್ಲಿಂದ ಮುಂದೆ ಬದರೀ ಕ್ಷೇತ್ರವನ್ನು ಪ್ರವೇಶಿಸಿದರು. ಜಗದ್ಗುರುಗಳಾದ ಶ್ರೀಮನ್ಮಧ್ವಮುನಿಗಳಿಗೆ, ಭಾವಿಸಮೀರರಾದ ಶ್ರೀವಾದಿರಾಜ ಗುರುವರ್ಯ ರಿಗೆ ಅತ್ಯಂತ ಪ್ರಿಯತಮವಾದ ಬದರಿಯ ನೆಲದಲ್ಲಿ ಕಾಲಿಡುತ್ತಿದ್ದಂತೆ ಆಚಾರ್ಯರು ಭಾವಾವಿಷ್ಟರಾದರು.

**ನೇದೃಶಂ ಸ್ಥಲಮಲಂ ಶಮಲಘ್ನಂ ನಾಸ್ಯ ತೀರ್ಥಸಲಿಲಸ್ಯ ಸಮಂ ವಾ।**
**ನಾಸ್ತಿ ವಿಷ್ಣುಸದೃಶಂ ನನು ದೈವಂ ನಾಸ್ಮದುಕ್ತಿಸದೃಶಂ ಹಿತರೂಪಮ್॥**

"ಪಾಪಸಮೂಹವನ್ನು ನಿರ್ಮೂಲ ಮಾಡುವುದರಲ್ಲಿ ಬದರಿ ಯಂತಹ ಕ್ಷೇತ್ರ ಬೇರೊಂದಿಲ್ಲ, ಹರಿಪಾದೋದ್ಭವೆಯಾದ ಗಂಗೆ ಗಿಂತಲೂ ಪವಿತ್ರತೀರ್ಥ ಮತ್ತೊಂದಿಲ್ಲ. ಶ್ರೀಹರಿಗಿಂತಲೂ ಮಿಗಿಲಾದ ಮತ್ತೊಂದು ದೈವವಿಲ್ಲ. ನಮ್ಮ ಮಾತಿಗೆ ಸಮಾನವಾದ ಪ್ರಶಸ್ತ ಹಿತವಚನವು ಇಲ್ಲ" ಎಂದು ತಮ್ಮ ಪ್ರಿಯಶಿಷ್ಯರಾದ ಶ್ರೀಸತ್ಯತೀರ್ಥರಿಗೆ, ಅಂದು ಕಾಷ್ಠಮೌನ ವ್ರತಧಾರಿಗಳಾಗಿದ್ದ ಶ್ರೀಮಧ್ವರು ಬರೆದಿಟ್ಟ ಮಾತುಗಳು ಅಲ್ಲಿನ ಗಿರಿಶಿಖರಗಳಿಂದ ಮತ್ತೆ ಮತ್ತೆ ಮಾರ್ದನಿಸಿ ದಂತಾಯಿತು. ಆಚಾರ್ಯರು ಕಣ್ಣುಗಳಿಂದ ಆನಂದಬಾಷ್ಪವನ್ನು

ಸುರಿಸುತ್ತಾ, ಅಡಿಗಡಿಗೆ ಆನಂದತೀರ್ಥವರದನನ್ನು ಸ್ಮರಿಸುತ್ತಾ, ಅವರ ವಚನವನ್ನೇ ಮನನ ಮಾಡುತ್ತಾ ಮುನ್ನಡೆದರು. ಬದರೀಶನ ಅಡಿದಾವರೆಗಳನ್ನು ತೊಳೆಯಲೆಂದೇ ಭೋರ್ಗರೆಯುತ್ತಿರುವ ಹಿಮಝರಿಯಾದ ಅಲಕನಂದೆಯಲ್ಲಿ ಯಾವ ಅಳುಕಿಲ್ಲದೆ ಮಿಂದು ಅದರ ತಟದಲ್ಲಿಯೇ ಪೂಜಾದಿ ಸತ್ಕರ್ಮಗಳನ್ನು ಆಚಾರ್ಯರು ಆಚರಿಸಿದರು. ನಂತರ ಪದ್ಮಾಸನಸ್ಥಿತನಾಗಿ ಶೋಭಿಸುತ್ತಿರುವ ಧರ್ಮಪ್ರಜೇಶ್ವರನಿಂದ ಪ್ರಾದುರ್ಭವಿಸಿದ, ಧರ್ಮಬುದ್ಧಿ ಪ್ರಚೋದಕನೂ, ಮನ್ಮಥನಯ್ಯನೂ, ಊರ್ವಶಿಯ ಜನಕನೂ, ಅನಂತಗುಣಪೂರ್ಣನೂ, ಸರ್ವೋತ್ತಮನೂ ಆದ ಬದರೀನಾಥನನ್ನು ಸಂದರ್ಶಿಸಿದರು. ಅಪರಿಮಿತ ಸೌಂದರ್ಯವತಿಯಾದ ರಮೆಯನ್ನೂ ಮೋಹಗೊಳಿಸುವ ಚೆಲುವಿನ ಗಣಿಯಾದ ಸ್ವಾಮಿಯ ದರ್ಶನ ಮಾತ್ರದಿಂದ ಪುಳಕಿತರಾದ ಆಚಾರ್ಯರಲ್ಲಿ ಭಾವನೆಗಳ ಮಹಾಪೂರವೇ ಉಕ್ಕಿಹರಿಯಿತು[1]. ಬಾಗಿನಮಿಸುವವರ ಭವವನ್ನು ನೀಗುವ ಬದರೀನಾಥನನ್ನು ಪುನಃ ಪುನಃ ನೋಡುತ್ತಾ ಪುಳಕಿತರಾಗಿ ಪರಮಪುರುಷಾರ್ಥವನ್ನು ಪ್ರಸಾದಿಸುವ ಪುರುಷೋತ್ತಮನ ಗುಣಗಾನ ಮಾಡತೊಡಗಿದರು. "ಬದರೀನಾಥ! ನೀನು ಬ್ರಹ್ಮರುದ್ರಾದಿಗಳಿಂದ ವಂದಿತನು. ಹುಲ್ಲಿನಿಂದ ಮೊದಲು ಮಾಡಿ ನಾಲ್ಮೊಗನ

---

1. ನನಾಮ ನಾದಿರಾಯಣಂ ಜಗದ್‌ಭವಾದಿಕಾರಣಮ್ ।
ರಮಾಮನೋಹರಾಕೃತಿಂ ನತಾತ್ಮನಾಂ ಪರಾಂ ಗತಿಮ್ ॥
ಹರೇ ವಿರಿಂಚಶಂಕರಾದಿದೇವವೃಂದವಂದಿತ ।
ಪ್ರಸೀದ ಪಾಲಯಾಶು ಮಾಂ ಯಥಾ ಸ್ವಮಾತ್ಮಜಂ ಪಿತಾ ॥
ಯದೀಶ ಮಾಮುಪೇಕ್ಷಸೇ ಪಿತಾ ಮಹಾದಿನಿರ್ಜರಾನ್ ।
ವಿಲೋಕ್ಯ ತರ್ಹಿ ಮಾಮಕಂ ಶ್ರುಣಷ್ವ ಭಾಷಿತಂ ಪ್ರಭೋ ॥
ವಿಧಿರ್ಜಗಜ್ಜನೇವಿಧೌ ಹಿ ತತ್ಪರಃ ಸಮಾಗತಾನ್ ।
ನ ನಾವಲೋಕಯತ್ಯಸೌ ಕಥಂ ಕರೋಮಿ ಕೇಶವ ॥
ಪಿನಾಕಪಾಣಿಪರ್ವತಾರಿಭಾಸ್ಕರೇಂದುಪೂರ್ವಕಾಃ ।
ಸ್ವಕೀಯಕರ್ಮದೀಕ್ಷಿತಾಃ ಸ್ಮರಂತಿ ಮಾಂ ಕದಾಪಿ ನ ॥

→

ಪರ್ಯಂತ ಸಮಸ್ತ ಜೀವರಾಶಿಗಳೂ ನಿನ್ನ ವಶದಲ್ಲಿವೆ. ನೀನೇ ಸೃಷ್ಟಿಸಿದ ಸಮಸ್ತಲೋಕಗಳೂ ನಿನ್ನ ಅಧೀನದಲ್ಲಿದೆ. ನಿನ್ನಿಂದ ನಿರ್ಮಿತಗೊಂಡ ಸರ್ವಜೀವಿಗಳನ್ನೂ ವಾತ್ಸಲ್ಯದಿಂದ ರಕ್ಷಿಸುವ ಸರ್ವೇಶನಾದ ನೀನು ಪಾಮರನಾದ ನನ್ನನ್ನು ರಕ್ಷಿಸು. ಪರಮ ಪಾಪಿಯೆಂದು ನನ್ನನ್ನು ಕಡೆಗಣಿಸಬೇಡ. ನಿನ್ನನ್ನು ಹೊರತು ನನಗೆ ಮತ್ತೊಬ್ಬ ರಕ್ಷಕರಿಲ್ಲ. ನಿನ್ನ ಆಜ್ಞೆಯಿಂದ ಕರ್ತವ್ಯನಿರತರಾಗಿರುವ ಬ್ರಹ್ಮಾದಿಪರ್ಯಂತ ಸಮಸ್ತ ಸುರರೂ ಸಹ ಪರತಂತ್ರರೇ. ನೀನೊಬ್ಬನೇ ಸರ್ವತಂತ್ರ ಸ್ವತಂತ್ರನೂ, ಸರ್ವೋತ್ತಮನೂ ಆದ ಮಹಾಪ್ರಭು! ಕಂಡಕಂಡ ಕಡೆ ಅಲೆದು ಕಂಗೆಟ್ಟು ಕಡೆಗೆ ನಾನು ನಿನ್ನನ್ನೇ ಶರಣುಹೊಕ್ಕಿದ್ದೇನೆ. ಭಕ್ತರಿಗಾಗಿ ಯೋಗಾಸನಾರೂಢನಾಗಿ ಸುಖಾಸನದಲ್ಲಿ ಕುಳಿತಿರುವ ಕೃಪಾಳುವಾದ ನೀನೇ ಈಗ ಈ ದೀನನನ್ನು ಕಾಪಾಡಬೇಕು. ಎಂತಹ ಪಾತಕವನ್ನೆಸಗಿದ್ದರೂ ಶರಣು ಬಂದವರ ಪೊರೆಯುವ ದಯಾಘನನೆಂಬ ಬಿರುದುಳ್ಳ ದೈವ ನೀನು!! ಸ್ವಾಮಿ! ನನ್ನ ಈ ಪ್ರಾರ್ಥನೆಯನ್ನು ಮನ್ನಿಸಿ ರಕ್ಷಿಸು" ಎಂದು ಪರಿಪರಿಯಾಗಿ ಬೇಡಿದರು. ಭಕ್ತಾಗ್ರೇಸರರೂ, ಆಶುಕವಿಗಳೂ ಆದ ಆಚಾರ್ಯರು ಅಷ್ಟಕ್ಕೆ ಸುಮ್ಮನಾಗದೇ,

ಶ್ರೀಮದಾನಂದತೀರ್ಥಾರ್ಯಸೇವಿತಂ ಬದರೀಸ್ಥಿತಮ್ ।
ವಾದಿರಾಜಯತಿಶ್ರೇಷ್ಠವಂದಿತಂ ನೌಮಿ ಸಂತತಮ್ ॥
ಬದರೀಕ್ಷೇತ್ರನಿಲಯಂ ಸದಯಂ ಸರ್ವದಾಽವ್ಯಯಮ್ ।
ಸದರಾರಿಶಯಂ ಸೇವೇ ಸದಾ ಸಾಧುಜನಪ್ರಿಯಮ್ ॥

---

→ ಅತಃಕುತೋ ಗತಿರ್ಮಮೇಂದಿರೇಶ ಭಕ್ತವತ್ಸಲ ।
ಭವಂತಮಂತರಾ ದಯಾಪಯೋದ ಶಂಸ ಮತ್ಪುನಃ (ರಃ) ॥
ಜಗದ್ಭವಾದಿಕೇ ವಿಧೌ ನಿಯೋಜ್ಯ ಸರ್ವನಿರ್ಜರಾನ್ ।
ಸುಖಂ ವಸಸ್ಯಮೋಘದೃಕ್ ಕರೋಷಿ ಕರ್ಮ ನಾಪರಮ್ ॥
ಅತೋ ಮಮೇಹ ಯಾಚನಾ ನ ಮೇಘತಾಂ ವ್ರಜೇದ್ವೃಥಾ ।
ತಥಾ ವಿದೇಹಿ(ಧೇಹಿ) ದೇವಕೀಸುತಾಽನತಾಘಹಾರಕ ॥

– ಶ್ರೀಸುಧಾಕರ ಗುರುಗುಣರತ್ನಮಾಲಾ (ಪಂಚಮಾವಲಿ 3–10)

ಎಂದು ಪ್ರಾರಂಭವಾಗುವ 'ಬದರೀನಾರಾಯಣಸ್ತೋತ್ರ'ವನ್ನು ಸಹ ಕ್ಷಣಮಾತ್ರದಲ್ಲಿ ರಚಿಸಿ ಸುಶ್ರಾವ್ಯವಾಗಿ ಹಾಡಿದರು. ನಂತರ ಸರ್ವಮೂಲ ಗ್ರಂಥವನ್ನು ಸಮಗ್ರವಾಗಿ ಪಾರಾಯಣ ಮಾಡಿ ಬದರೀಶನಿಗೆ ಸಮರ್ಪಿಸಿದರು. ಕಾರ್ತಿಕ ಮಾಸದಲ್ಲಿ ಪ್ರಾಪ್ತವಾದ ತಮ್ಮ ಪಿತೃಗಳ ಕಾರ್ಯವನ್ನು ಅಲಕನಂದಾ ತಟದಲ್ಲಿಯೇ ಆಚರಿಸಿದ ಆಚಾರ್ಯರು ಕೆಲವು ದಿವಸಗಳ ಕಾಲ ಬದರಿಯಲ್ಲಿ ವಾಸಿಸಿದರು. ಅಲ್ಲಿನ ಅನೇಕ ನಿಗೂಢ ಸ್ಥಳಗಳಿಗೆ ಭೇಟಿಕೊಟ್ಟು ಹಲವಾರು ಸಾಧುಸಂತರನ್ನು ಭೇಟಿಯಾದರು. ಅಲ್ಲಿನ ಗುಹೆಗಳಲ್ಲಿ ತಪೋನಿರತರಾಗಿದ್ದ ಋಷಿಪುಂಗವ ರನ್ನು ಕಂಡು ಹಲವಾರು ರಹಸ್ಯತಮ ವಿಷಯಗಳನ್ನು ಅವರಿಂದ ಅರಿತುಕೊಂಡರು[1]. ಹತ್ತಿರದ ನರಪರ್ವತದ ಹಿಮಧಾರೆಯನ್ನು

---

1. ಸಾಮಾನ್ಯರ ಕಣ್ಣಿಗೆ ಗೋಚರವಾಗದ ಗುಹೆಯನ್ನು ಆಚಾರ್ಯರು ಗುರುತಿಸಿ ಅದರ ಒಳಹೊಕ್ಕಾಗ ಅಲ್ಲಿದ್ದ ತೇಜಸ್ವಿ ಋಷಿಗಳೊಬ್ಬರು, ಎಲ್ಲಾ ದ್ವಿಜರು ಪ್ರತಿನಿತ್ಯ ಗೈಯ್ಯುವ ಪ್ರಾತರಾಹ್ನಿಕವನ್ನು ಮತ್ತೆ ಮತ್ತೆ ಮಾಡುತ್ತಿದ್ದುದು ಕಣ್ಣಿಗೆ ಬಿದ್ದಿತು. ಋಷಿಗಳ ಈ ವಿಚಿತ್ರ ಚರ್ಯೆಯನ್ನು ಸೂರ್ಯಾಸ್ತಮಾನದವರೆಗೂ ನಿಂತು ವೀಕ್ಷಿಸಿದ ಆಚಾರ್ಯರು ನಂತರ ಅವರನ್ನು ಕುರಿತು ಹೀಗೇಕೆ ಮಾಡುತ್ತಿರುವಿರೆಂದು ವಿಚಾರಿಸಿದಾಗ ಆ ಋಷಿಗಳು 'ಸಾಧನ ಭೂಮಿಯಾದ ಈ ಭುವಿಯಲ್ಲಿ ಜನ್ಮವೆತ್ತಿರುವ ಕೆಲವು ಸುಜೀವಿಗಳು ರೋಗಾದಿ ಉಪದ್ರವಗಳ ನಿಮಿತ್ತ ನಿತ್ಯಾಹ್ನಿಕವನ್ನು ಸಹ ಮಾಡಲು ಅಶಕ್ತರಾಗಿ ಪಶ್ಚಾತ್ತಾಪ ಪಡುತ್ತಿರುವರು. ಅಂತಹ ಉತ್ತಮ ಜೀವಿಗಳ ಉದ್ಧಾರಕ್ಕಾಗಿ ನಾವು ಅವರ ಪರವಾಗಿ ಸೂರ್ಯಾರ್ಘ್ಯಾದಿ ನಿತ್ಯಾಹ್ನಿಕಗಳನ್ನು ಮಾಡುತ್ತಾ ಅದರ ಫಲವನ್ನು ಅವರಿಗೆ ಧಾರೆಯೆರೆಯುತ್ತಿದ್ದೇವೆ." ಎಂದು ಹೇಳಿದರಂತೆ. ಇದನ್ನು ಕೇಳಿ ಆಚಾರ್ಯರ ಕಣ್ಣಾಲಿಗಳು ತುಂಬಿ ಬಂದವು. ಆಚಾರ್ಯರು ಪರಮಕರುಣಾಳುಗಳಾದ ಆ ಋಷಿಗಳಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸಿ, ಕೆಲವು ಸಮಯ ಅಲ್ಲಿಯೇ ವಾಸಿಸಿದರಲ್ಲದೇ ಹಿಂತಿರುಗುವ ಮೊದಲು ಅವರಿಂದ ಹಲವಾರು ಗೂಢತತ್ತ್ವಗಳ ಉಪದೇಶವನ್ನೂ ಸಹ ಪಡೆದುಕೊಂಡರಂತೆ.

ಸಂದರ್ಶಿಸಿ ಅಲ್ಲಿ ಹಿಂದೆ ಆವಿರ್ಭವಿಸಿದ ಹಯಗ್ರೀವರೂಪೀ ಶ್ರೀಹರಿಯ ವಿವಿಧ ಮಹಿಮೆಗಳನ್ನು ಕೊಂಡಾಡಿದರು.

**ನಂಗಲ್ಯಾಚಾರ್ಯವರ್ಯೈಶ್ಚಾಪರೋಕ್ಷಜ್ಞಾನಿಭಿಃ ಸಹ ।**
**ಉಷಿತ್ವಾ ಕತಿಚಿತ್ಕಾಲಂ ವಿದಿತ್ವಾ ತತ್ಸ್ವರೂಪಕಮ್ ॥**
**ತೇಭ್ಯಃ ಸ್ವರೂಪಂ ಸ್ವಸ್ಯಾಪಿ ..... ....... ........**

ಎಂಬ 'ಸುಧಾಕರಗುರುಗುಣರತ್ನಮಾಲೆ'ಯ ದ್ವಿತೀಯಾವಲಿಯ 5ನೆಯ ಶ್ಲೋಕವನ್ನು ನೋಡಿದರೆ ಆಚಾರ್ಯರು ಅದೇ ಪ್ರದೇಶದಲ್ಲಿ ವಾಸವಾಗಿದ್ದ ಶ್ರೀನಂಗಲ್ಯಾಚಾರ್ಯರೆಂಬ ಗುರುಬಂಧುಗಳೊಬ್ಬರನ್ನು ಭೇಟಿಯಾದರೆಂದು ತಿಳಿದುಬರುತ್ತದೆ. ವೃಂದಾವನಾಚಾರ್ಯರ ಶಿಷ್ಯಶ್ರೇಷ್ಠರಾಗಿದ್ದ ಆ ಮಹಾನುಭಾವರು ಆಚಾರ್ಯರೊಂದಿಗೆ ಪ್ರೇಮಪೂರ್ವಕವಾಗಿ ಸಂಭಾಷಿಸಿದರಲ್ಲದೇ ಸ್ವರೂಪ ಜ್ಞಾನವನ್ನು ಅವರಿಗೆ ವಿಶದಪಡಿಸಿ ಅನೇಕ ರಹಸ್ಯಮಯವಾದ ತತ್ತ್ವ ಪ್ರಮೇಯ ಗಳನ್ನೂ ಸಹ ಬೋಧಿಸಿದರಂತೆ. ಹೀಗೆ ಸ್ವಲ್ಪ ಸಮಯ ಅಲ್ಲಿ ಸಾರ್ಥಕ ವಾಗಿ ಕಳೆದ ಆಚಾರ್ಯರು ಹಿಂದಿರುಗುವ ಮಾರ್ಗದಲ್ಲಿ ಇಂದ್ರಪ್ರಸ್ಥ, ಕುರುಕ್ಷೇತ್ರ, ಪಾಂಚಾಲ ದೇಶಗಳನ್ನು ದಾಟಿ, ಬ್ರಹ್ಮಗಿರಿಯ ಶಿಖರದ ಬುಡದಲ್ಲಿ ಪ್ರಕಟಳಾದ 'ಗಂಗಾದ್ವಾರ' ಎನ್ನುವ ಹೆಸರುಳ್ಳ ಗೋದಾವರೀ ಸನ್ನಿಧಿಗೆ ಬಂದು ತರ್ಪಣಾದಿಗಳಿಂದ ಪಿತೃದೇವತೆಗಳನ್ನು ಆರಾಧಿಸಿದರು. ಅಲ್ಲಿಂದ ಕಾಶಿಗೆ ಬಂದು ಗಂಗೆಯನ್ನೂ, ಗಂಗಾಧರ ನನ್ನೂ, ಗಂಗಾಜನಕನಾದ ಬಿಂದುಮಾಧವನನ್ನೂ ಪರಮಾದರದಿಂದ ಸೇವಿಸಿದರು.

---

– ಮತ್ತೊಮ್ಮೆ ಬದರೀಯಾತ್ರೆ ಕೈಗೊಂಡಾಗ ಗುಹೆಯೊಂದರಲ್ಲಿ ತಪೋನಿರತರಾಗಿದ್ದ ಋಷಿಗಳೊಬ್ಬರು ಕಾಣಿಸಿಕೊಂಡು "ಪರಾಶ್ರಯ, ಪರಾನ್ನ ಮತ್ತು ಪರದ್ರವ್ಯ" ಈ ಮೂರನ್ನು ತ್ಯಜಿಸುವುದರಿಂದ ಮಾತ್ರ ಉದ್ಧಾರಮಾರ್ಗ ಸಾಧ್ಯ ಎಂದು ಹೇಳಿದರಲ್ಲದೆ ಅನೇಕ ರಹಸ್ಯಾಂಶಗಳನ್ನು ಸಹ ಬೋಧಿಸಿ ಆಚಾರ್ಯರನ್ನು ಆಶೀರ್ವದಿಸಿದರಂತೆ.

ಯಥಾಮತಿ ಶ್ರೀಶಶಾಸ್ತ್ರಂ ತತ್ರಾವಸಮಹಂ ಮುದಾ ।
ತತ್ರಸ್ಥೋಽಪ್ಯಗತಃ ಸ್ವೀಯಾನ್ ಕಾಶ್ಯಾಂ ಕಪಿವರಂ ಮುದಾ ॥
ಗೃಹೀತ್ವಾ ಶ್ರೀಭಾಗವತಂ ಪಠಿತ್ವಾಽಗಾಂ ಪ್ರಯಾಗಕಮ್ ।

ಎಂಬ ಆತ್ಮವೃತ್ತಾಂತದ ಉಲ್ಲೇಖವನ್ನು ನೋಡಿದರೆ ಕಾಶಿಯಲ್ಲಿದ್ದಾಗ ಆಚಾರ್ಯರಿಗೆ ಪರಿಚಿತರೊಬ್ಬರಿಂದ ಪ್ರಾಣನಾಥನ ಪ್ರತಿಮೆಯೊಂದು ಲಬ್ಧವಾಯಿತೆಂದು ತಿಳಿದು ಬರುತ್ತದೆ[1]. ಪ್ರಾಣಪ್ರತೀಕವನ್ನು ಸಂತೋಷ ದಿಂದ ಸ್ವೀಕರಿಸಿದ ನಂತರ ಆಚಾರ್ಯರು ತ್ರಿವೇಣಿ ಸಂಗಮವಾದ ಪ್ರಯಾಗಕ್ಕೆ ಬಂದು ಅಲ್ಲಿ ಶ್ರೀಮದ್ಭಾಗವತವನ್ನು ಪಠಿಸುತ್ತಾ ನಾಲ್ಕು ತಿಂಗಳು ನೆಲೆಸಿದರು.

...... ....... .... ಬಲ್ಲಾರ್ಯಾ[2]ಮಾಗತೋ ಗುರುಃ ।
ತತ್ರಾಪ್ಯಮಾನುಷಂ ಕರ್ಮ ಕೃತವಾನ್ ಚಿತ್ರದಾಯಕಮ್ ॥

ಎಂಬಂತೆ ಆ ನಂತರ ಬಳ್ಳಾರಿಗೆ ಮರಳುವ ಮುನ್ನ ತಮಗೆ ಅತ್ಯಂತ ಪ್ರೀತಿಕರರಾದ ರಾಜರ ಸನ್ನಿಧಾನಯುಕ್ತ ಸೋದಾ ಕ್ಷೇತ್ರಕ್ಕೆ ತೆರಳಿ ತೀರ್ಥಯಾತ್ರೆಯ ಸಮಸ್ತ ಫಲಗಳನ್ನೂ ವಾದಿರಾಜರ ಅಂತರ್ಗತನಾದ ವಾಜಿವದನನಿಗೆ ಸಮರ್ಪಿಸಿದರು.

ಹೀಗೆ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ತಮ್ಮ ಜೀವಿತದಲ್ಲಿ ಮೂರು ಬಾರಿ ಬದರೀಯಾತ್ರೆಯನ್ನು ಮಾಡಿದ್ದರೆಂಬುದಾಗಿ ತಿಳಿದು ಬರುತ್ತದೆ[1]. ಎರಡನೆಯ ಸಲ ಆಚಾರ್ಯರು ಬದರೀಕ್ಷೇತ್ರ ಯಾತ್ರೆ ಕೈಗೊಂಡಾಗ ಕಾಶ್ಮೀರಕ್ಕೂ ಸಹ ಭೇಟಿಕೊಟ್ಟು ಅಲ್ಲಿನ ರಾಜಾಸ್ಥಾನದಲ್ಲಿದ್ದ ಸಮಸ್ತ ಪ್ರತಿವಾದೀ ಪಂಡಿತರನ್ನು ಜಯಿಸಿದರಲ್ಲದೆ ಕಾಶ್ಮೀರದರಸನಿಂದ ಸನ್ಮಾನಿತರಾಗಿ ಅವನಿಂದ ಗಜದಂತಹ ಆಂದೋಲನವನ್ನು ಪಡೆದು

1. ಇದೇ ಅವರು "ನನ್ನ ಕೂಸು" ಎಂದು ಸದಾ ಕೊರಳಿಗೆ ಮಾಲೆಯಂತೆ ಹಾಕಿಕೊಳ್ಳುತ್ತಿದ್ದ ಶ್ವೇತಶಿಲೆಯ ವೀಣಾಪಾಣಿ ಪ್ರಾಣಪತಿಯ ವಿಗ್ರಹವಿರಬಹುದೇ? ವಿಚಾರ ಮಾಡಬೇಕಾಗಿದೆ.
2. ಬಲ್ಲಾರೀ – ಪಾ ।

ಕೊಂಡರು. ಮುಂದೆ ಅದನ್ನು ತಮ್ಮ ಗುರುಗಳಾದ ಶ್ರೀವಿದ್ಯಾಧೀಶ ತೀರ್ಥರಿಗೆ ಅರ್ಪಿಸಿದ್ದರಿಂದ ಈ ಘಟನೆ ಶ್ರೀಗಳವರು ವೃಂದಾವನಸ್ಥರಾಗುವ ಮುನ್ನ ಅಂದರೆ ಕ್ರಿ.ಶ. 1881ಕ್ಕೂ ಮೊದಲು ನಡೆದಿರಬಹುದೆಂದು ಊಹಿಸಬಹುದು.

ಆಚಾರ್ಯರು ಕೊನೆಯ ಬಾರಿ ತಮ್ಮ ಮಿತ್ರರು ಪರಿವಾರದೊಂದಿಗೆ ಬದರೀಯಾತ್ರೆ ಕೈಗೊಂಡಾಗ ದೊಡ್ಡ ಪ್ರಮಾದವೇ ನಡೆದು ಹೋಯಿತು. ಯಾತ್ರೆಯನ್ನು ಮುಗಿಸಿ ಹಿಂದಿರುಗುವಾಗ ಅವರ ಹಿರಿಯ ಪುತ್ರರಾದ ಶ್ರೀಕೃಷ್ಣಾಚಾರ್ಯರಿಗೆ ದೇಹಾಲಸ್ಯವಾಗಿ ಅದು ಮಾರಣಾಂತಿಕವಾದ ತೀವ್ರ ಸ್ವರೂಪವನ್ನು ಪಡೆದುಕೊಂಡಿತು. ಸರಿಯಾದ ಔಷಧೋಪಚಾರಕ್ಕೆ ಅಸ್ಪದವಿಲ್ಲದೆ ಕೃಷ್ಣಾಚಾರ್ಯರು ಕಾಲವಶರಾದರು. ಆ ಸಂದರ್ಭದಲ್ಲಿ ಇಡೀ ಕುಟುಂಬ ರೋದಿಸುತ್ತಿದ್ದರೂ ಸ್ಥಿತಪ್ರಜ್ಞರಾದ ಆಚಾರ್ಯರು ಏನೋ ಸಂಕಲ್ಪಗೈದವರಂತೆ ಮೃತಪುತ್ರನನ್ನು ತೊಡೆಯ ಮೇಲೆ ಹಾಕಿಕೊಂಡು ಕುಳಿತು ಬಿಟ್ಟರು. ಅದು ಕಾಲಮೃತ್ಯುವಾದ ಕಾರಣ ವಿಷ್ಣುದೂತರೇ ಬಂದು ಆಚಾರ್ಯರನ್ನು ಎಚ್ಚರಿಸಬೇಕಾಯಿತು. ಕಡೆಗೆ ಭಗವತ್ಸಂಕಲ್ಪವನ್ನು ಅರಿತ ಆಚಾರ್ಯರು ತಮ್ಮ ಪುತ್ರನ ಶರೀರವನ್ನು ಕೆಳಗಿಟ್ಟು 'ಕೃಷ್ಣಾರ್ಪಣ' ಎಂದು ದೊಡ್ಡದಾಗಿ ದನಿಗೈದು ಅರ್ಪಿಸಿದರಂತೆ.

---

1. ಇತಿ ದ್ವಿವಾರಬದರೀಯಾತ್ರಾನುಭವನಿರ್ಭರಃ।
ತದ್ಯಾತ್ರಾಕಾಂಕ್ಷಿಣೋ ಬಾಲಾನ್ ವೃದ್ಧಾನ್ ಕಾಂಚನವರ್ಜಿತಾನ್॥
ಅಶಕ್ತಾನಭಯಂ ದತ್ವಾ ಕೃಪಾಪೂರಿತಲೋಚನಃ।
ಸಹಿತಸ್ತೈರ್ಜನೈರ್ಧೀರೋ ಜಗಾಮ ಬದರೀಂ ಪುನಃ॥
– ಶ್ರೀಸುಧಾಕರಗುರುಗುಣರತ್ನಮಾಲಾ (ಪಂಚಮಾವಲಿ 16–17)
ಆದರೆ, ದ್ವಿತೀಯಾವಲಿಯ ವರ್ಣನೆಯನ್ನು ನೋಡಿದರೆ ಆಚಾರ್ಯರು ಒಟ್ಟು ನಾಲ್ಕು ಸಲ ಬದರೀ ಯಾತ್ರೆ ಕೈಗೊಂಡಿದ್ದಿರಬೇಕೆಂದು ತೋರುತ್ತದೆ. ಬಾಲರು, ವೃದ್ಧರು, ಬಡವರು ಮತ್ತು ಕೈಲಾಗದ ಅಶಕ್ತರನ್ನೂ ಸಹ ಒಮ್ಮೆ ತಮ್ಮೊಂದಿಗೆ ಕರೆದುಕೊಂಡು ಹೋಗಿ ಬದರೀನಾಥನ ದರ್ಶನವನ್ನು ಮಾಡಿಸಿದರೆಂಬ ಉಲ್ಲೇಖದಿಂದ ಆಚಾರ್ಯರಿಗಿದ್ದ ದೇವಸದೃಶ ಕರುಣೆಯನ್ನು ನಾವು ಕಲ್ಪಿಸಿಕೊಳ್ಳಬಹುದು.

ಮತ್ತೊಂದು ಆಶ್ಚರ್ಯವೇನೆಂದರೆ ಅಂತಹ ದಟ್ಟ ಅರಣ್ಯದ ನಡುವೆಯೂ ಅಪರಿಚಿತರಾದ ಭೂಸುರರು ಅನಿರೀಕ್ಷಿತವಾಗಿ ಪ್ರಾಪ್ತರಾಗಿ ಕೃಷ್ಣಾಚಾರ್ಯರ ದೇಹ ಸಂಸ್ಕಾರಕ್ಕೆ ನೆರವಾದರಂತೆ[1].



1. "ಆಚಾರ್ಯರು ಬದರೀಯಾತ್ರೆಯನ್ನು ಪೂರೈಸಿ ಸ್ವಗ್ರಾಮಾಭಿಮುಖವಾಗಿ ಹೊರಟರಷ್ಟೇ. ಮಾರ್ಗದಲ್ಲಿ ಒಂದು ವಿಚಿತ್ರವಾದ ಘಟನೆಯೇ ಜರುಗಿತು. ಆಚಾರ್ಯರು ತಮ್ಮ ಸಹಾಯಕ್ಕಾಗಿ ತಮ್ಮ ಹಿರಿಯ ಮಗನಾದ ಕೃಷ್ಣಾಚಾರ್ಯರನ್ನು ಕರೆದುಕೊಂಡು ಹೋಗಿದ್ದರು. ಅವರು ಮರಳಿ ಬರುತ್ತಿದ್ದಾಗ ಮಾರ್ಗ ಒಂದು ಘೋರಾರಣ್ಯ. ಜನಸಂಚಾರ ವಿರಳ. ಹೀಗಿರುವಲ್ಲಿ ಮೃತನಾದ ಮಗನನ್ನು ತಮ್ಮ ತೊಡೆಯ ಮೇಲೆ ಹಾಕಿಕೊಂಡು ಕುಳಿತರು. ಮಗನಿಗೆ ಸುಮಾರು 21 ವರ್ಷ ವಯಸ್ಸು. ಆ ವಯಸ್ಸಿನಲ್ಲಿಯೇ ಅಸಾಧಾರಣ ಪಾಂಡಿತ್ಯ. ಇಂತಹ ಪುತ್ರರತ್ನ ವಿಯೋಗವು ಸಾಮಾನ್ಯವೇ!! ಸತ್ತ ಮಗನನ್ನು ತೊಡೆಯ ಮೇಲೆ ಹಾಕಿಕೊಂಡು ಭಗವದ್ಧ್ಯಾನಪರರಾದರು. ಕಾಲ ಸಮೀಪಿಸಿದ್ದನ್ನು ತಿಳಿದರೂ ಮಗನನ್ನು ಬಿಡಲೊಲ್ಲರು. ಶ್ರೀವಿಷ್ಣುದೂತರು ಪ್ರತ್ಯಕ್ಷವಾಗಿ ಆಚಾರ್ಯರಿಗೆ ನಮಿಸಿ 'ಮಹಾ ಭಾಗವತ ಶಿಖಾಮಣಿಗಳೇ! ನಿಮ್ಮನ್ನು ಸ್ಪರ್ಶ ಮಾಡಲು ನಾವು ಶಕ್ತರಲ್ಲ. ಕಾಲನಾಮಕನ ಇಚ್ಛೆ ಬಲ್ಲವರು. ಕಾಲ ಸಮೀಪಿಸಿತು' ಎಂದು ಸೂಚಿಸಲು ಆಗ ಮಗನನ್ನು ತೊಡೆಯಿಂದ ಕೆಳಗಿಟ್ಟು 'ಕೃಷ್ಣಾ ನಿನಗೆ ಅರ್ಪಿತವಾಗಲಿ' ಎಂದು ದೊಡ್ಡ ದನಿಯಿಂದ ಅರ್ಪಿಸಿದಂತೆ. ಅಡವಿಯಲ್ಲಿ ದಹನ ಕ್ರಿಯೆಗಳು ಹೇಗೆ ನಡೆಯಬೇಕು? ಅಟವ್ಯಾಂ ನಾರಸಿಂಹಶ್ಚ ಎಂಬಂತೆ ನಾರಸಿಂಹನೇ ಗತಿ. ಅಂತೆಯೇ ಶ್ರೀಹರಿಯ ಭಕ್ತರೇ ಬ್ರಾಹ್ಮಣರ ರೂಪದಲ್ಲಿ ಬಂದು ಮುಂದಿನ ಕೃತ್ಯಗಳನ್ನು ಸಾಗಿಸಿದರಂತೆ. ಇಂತಹ ಮಹಾಭಕ್ತರೂ, ವಿರಕ್ತರೂ ಎಂದು ಸಿದ್ಧವಾಗಿರುತ್ತದೆ"

– ಶ್ರೀಗುರುಗೋವಿಂದದಾಸರು (ಹರಿಭಕ್ತವಿಜಯ ಭಾಗ – 1)

# ಮೊಳಗಿದ ಋಜುತ್ವ ಕಹಳೆ

ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ತುಂಬಾ ಗೌರವ ಭಾವದಿಂದ ಕಾಣುತ್ತಿದ್ದ ಮಹನೀಯರಲ್ಲಿ ಜ್ಞಾನಿಶ್ರೇಷ್ಠರೆಂದು ಪ್ರಸಿದ್ಧರಾದ ಭೀಮನಕಟ್ಟೆ ಮಠಾಧೀಶರಾದ ಶ್ರೀ ರಘುಪ್ರವೀರತೀರ್ಥರೂ (1815–1895) ಒಬ್ಬರು. ಭೀಮನಕಟ್ಟೆ ಅಥವಾ ಭೀಮಸೇತು ಮುನಿವೃಂದ ಮಠವೆಂಬುದು ಶ್ರೀಮದಾನಂದತೀರ್ಥರ ದೀಕ್ಷಾ ಗುರುಗಳಾದ ಶ್ರೀಅಚ್ಯುತಪ್ರೇಕ್ಷರ ಮೂಲಪರಂಪರೆಗೆ ಸೇರಿದ್ದು ಪ್ರಸ್ತುತ ತೀರ್ಥಹಳ್ಳಿ ಸಮೀಪದ ತುಂಗಾತಟದಲ್ಲಿದೆ. ಶ್ರೀಮದಾಚಾರ್ಯರ ಒಲುಮೆಗೆ ಪಾತ್ರರಾಗಿದ್ದ ಅವರ ನೇರ ಶಿಷ್ಯರಾದ ಶ್ರೀಸತ್ಯತೀರ್ಥರು ಈ ಪರಂಪರೆಯ ಯತಿವರೇಣ್ಯರು. ವೃಂದಾವನಾಚಾರ್ಯರೆಂದು ಪ್ರಸಿದ್ಧರಾದ ಸೋದಾ ಮಠದ ಶ್ರೀವಿಶ್ವಪ್ರಿಯತೀರ್ಥರಿಗೆ ಅತ್ಯಂತ ಪ್ರಿಯರಾಗಿದ್ದ ರಘುಪ್ರವೀರರು ತಮ್ಮ ಆರನೆಯ ವಯಸ್ಸಿನಲ್ಲಿಯೇ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀ ವೃಂದಾವನಾಚಾರ್ಯರಿಂದಲೇ ಚತುಃಶಾಸ್ತ್ರಗಳನ್ನು ಅಭ್ಯಾಸ ಮಾಡಿ ಮಹಾಪಂಡಿತರಾಗಿ ರೂಪುಗೊಂಡವರು. ಶ್ರೀಗಳವರು ಮಹಾತಪಸ್ವಿಗಳು. ಚಾಂದ್ರಾಯಣಾದಿ ಹಲವಾರು ಕಠಿಣ ವ್ರತನಿಷ್ಠರಾಗಿದ್ದ ಅವರ ಮನೋದಾರ್ಢ್ಯ ಅಸ್ಖಲಿತವಾದದ್ದು. ಇದಕ್ಕೆ ಉದಾಹರಣೆಯಾಗಿ ಅವರಿಗೆ ಆಶ್ರಮವಾದ ಹೊಸತರಲ್ಲಿ ನಡೆದ ಒಂದು ಪುಟ್ಟ ಪ್ರಸಂಗವನ್ನು ಉಲ್ಲೇಖಿಸಬಹುದು.

ಶ್ರೀರಘುಪ್ರವೀರರು ಯತ್ಯಾಶ್ರಮದ ಹೊಸ್ತಿಲಿಗೆ ಕಾಲಿಟ್ಟ ಸ್ವಲ್ಪ ಸಮಯದಲ್ಲಿಯೇ ಶ್ರವಣೈಕಾದಶೀ ನಿಮಿತ್ತ ಎರಡು ಉಪವಾಸಗಳನ್ನು ಮಾಡಬೇಕಾಯಿತು. ಇನ್ನೂ ಚಿಕ್ಕವಯಸ್ಸಿನ ಶ್ರೀಗಳವರು ಇದಕ್ಕೆ ಒಂದಿಷ್ಟೂ ಅಂಜದೆ ಗುರ್ವಾಜ್ಞೆಯಂತೆ ಶ್ರದ್ಧೆಯಿಂದ ಉಪೋಷ್ಯವಿರಲು

ಸಂಕಲ್ಪಿಸಿದರು. ಆಗ ಅಲ್ಲಿಯೇ ಇದ್ದ ಅವರ ಪೂರ್ವಾಶ್ರಮದ ತಂದೆಯವರಿಗೆ ಮಗನೆಂಬ ಮಮಕಾರದಿಂದ ಕರುಣೆ ಉಕ್ಕಿ ಬಂದಿತು. 'ಬಾಲಯತಿಗಳು ದೇಹವನ್ನು ಇಷ್ಟು ದಂಡಿಸಬಾರದು' ಎಂದು ಅವರು ವಿಜ್ಞಾಪಿಸಿಕೊಂಡರು. ಆದರೆ ರಘುಪ್ರವೀರರು ಮಾತ್ರ ಇದನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದರಲ್ಲದೆ 'ಸನ್ಯಾಸಾಶ್ರಮವನ್ನು ಸ್ವೀಕರಿಸದ ಮೇಲೆ ಪೂರ್ವ ಸಂಬಂಧಗಳ ಮಮಕಾರ ಇರಕೂಡದು. ಈಗ ನಮಗೆ ಸಮಸ್ತವೂ ಗುರುಗಳೇ ಆಗಿದ್ದಾರೆ. ಹರಿ ದಿವಸದಂತಹ ಶ್ರೇಷ್ಠ ವ್ರತಗಳ ಆಚರಣೆಯಲ್ಲಿ ವಯೋಮಾನ, ದೇಹಾರೋಗ್ಯ ಮುಂತಾದ ವಿಷಯಗಳನ್ನು ನಿಮಿತ್ತಮಾಡಿ ವ್ರತಭಂಗ ಮಾಡುವುದು ಸ್ವಲ್ಪವೂ ಸರಿಯಲ್ಲ' ಎಂದು ಖಡಾಖಂಡಿತವಾಗಿ ಹೇಳಿ ಏಕಾದಶೀ ವ್ರತವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿದರು[1].

ಮುಂದೆ ಕೇವಲ ತುಳಸಿ ಮತ್ತು ಅರಳನ್ನು ಮಾತ್ರ ಸೇವಿಸುತ್ತಾ ಮೂರು ವರ್ಷಗಳ ಕಾಲ ಕಠಿಣ ತಪಶ್ಚರ್ಯವನ್ನು ಆಚರಿಸಿದ್ದಷ್ಟೇ ಅಲ್ಲದೆ ವೃಂದಾವನಾಚಾರ್ಯರ ಆಜ್ಞಾನುಸಾರ ಕೆಲವು ಸಮಯ ಸೋದಾ ಸಂಸ್ಥಾನದ ಅರ್ಚಾಮೂರ್ತಿಗಳನ್ನು ಪೂಜಿಸಿದ ಹೆಗ್ಗಳಿಕೆ ಶ್ರೀಗಳದು. ಗುರುಗಳೊಂದಿಗೆ ಕೊಚ್ಚಿ ಮುಂತಾದ ಕಡೆಗಳಲ್ಲೆಲ್ಲಾ ಪ್ರವಾಸ ಕೈಗೊಂಡು ದ್ವೈತದುಂದುಭಿಯನ್ನು ಸಮರ್ಥವಾಗಿ ಮೊಳಗಿಸಲು ವೃಂದಾವನಾಚಾರ್ಯರಿಗೆ ನೆರವಾದರು. ಶ್ರೀವಾದಿರಾಜ ಗುರುವರ್ಯರ ಅಂತರಂಗ ಭಕ್ತರಾಗಿದ್ದ ರಘುಪ್ರವೀರರು ಶಾಸ್ತ್ರೋಕ್ತ ವಚನಗಳನ್ನು ಆಧರಿಸಿ 'ರಾಜರ ಋಜುತ್ವೋತ್ಕರ್ಷ ಮಹಿಮೆ' ಯನ್ನು ತಾವು ಹೋದ ಕಡೆಯಲ್ಲೆಲ್ಲಾ ಸದೃಢವಾಗಿ ಪ್ರತಿಪಾದಿಸಿದರು.

---

1. ಶ್ರುತ್ವಾಸ ಬಾಲಯತಿರಾಹ ನ ಮೇ ಪಿತಾ ತ್ವಂ
   ನಾಹಂ ಸುತಸ್ತ್ವದಿದಮುಚ್ಯತ ಇತ್ಯಯುಕ್ತಮ್ ।
   ಯದ್ಧಸ್ತಪಂಕಜಭವೋಽಸ್ಮಿ ತ ಏವ ತಾತಃ
   ಪ್ರಾಣಾತ್ಯಯೇಽಪಿ ನ ಜಹಾಮಿ ತದೀಯ ಧರ್ಮಮ್ ॥
   – ಶ್ರೀಷಟ್ಪುರಾಚಾರ್ಯವಿರಚಿತ 'ಶ್ರೀರಘುಪ್ರವೀರಗುಣರತ್ನಮಾಲಾ'

ಶ್ರೀಮದ್ವೃಂದಾವನಾಖ್ಯಾನಪ್ರಾಮಾಣ್ಯಸ್ಯ ಪ್ರಬೋಧನಮ್ ।
ಕೃತವಾನ್ ಶ್ರೀವಾದಿರಾಜಋಜುತಾಸಾಧಕಂ ಗುರುಃ ।
ಅಜ್ಞಾನಾಖ್ಯಧ್ವಾಂತಜಾಲಂ ನಿರಸ್ಯನ್
ವಿಜ್ಞಾನಾರ್ಕೋದ್ಯೋತಯನ್ ಸಜ್ಜನಾನಾಮ್ ।
ಕೀರ್ತಿಂ ದಿಕ್ಷು ಖ್ಯಾಪಯನ್ ವಾದಿರಾಜ–
ಶ್ರೀಪಾದಾನಾಂ ಶ್ರೀಗುರುಃ ಸಂಚಚಾರ ॥

ಎಂಬ ಶ್ರೀರಘುಪ್ರವೀರ ಗುಣರತ್ನಮಾಲೋಕ್ತಿಯಂತೆ ಶ್ರೀಗಳವರು ಗುರುಗಳ ಸಂದೇಶಾನುಸಾರ 'ವೃಂದಾವನಾಖ್ಯಾನಪ್ರಾಮಾಣ್ಯಬೋಧಿನೀ' ಎಂಬ ಕೃತಿಯನ್ನು ರಚಿಸಿ ಸ್ವಾಪ್ನವೃಂದಾವನಾಖ್ಯಾನದ ಹಿರಿಮೆ–ಗರಿಮೆಗಳನ್ನು ಎತ್ತಿ ಹಿಡಿದರು. ನುರಿತ ಗ್ರಂಥಕರ್ತರಾಗಿದ್ದ ಶ್ರೀಗಳವರು ಪ್ರಮೇಯಭರಿತವಾದ ಹಲವಾರು ಕೃತಿರತ್ನಗಳನ್ನು ನಿರ್ಮಿಸಿ ಸಾರಸ್ವತ ಲೋಕವನ್ನು ಸಂಪನ್ನಗೊಳಿಸಿದರು. ದುರಾಗ್ರಹಿಗಳಿಗೆ ತಕ್ಕ ಉತ್ತರ ನೀಡಲು ಮತ್ತು ತಮ್ಮ ಶಿಷ್ಯರಿಗೆ ಉಪದೇಶಿಸಲು ಶ್ರೀಗಳವರು 'ಅಮಾರ್ತಿಕಗ್ರಂಥಚಪೇಟಿಕಾ' ಎಂಬ ಕೃತಿಯನ್ನು ರಚಿಸಿದರೆಂಬ ಐತಿಹ್ಯವಿದೆ. ರಘುಪ್ರವೀರರ ಪ್ರತಿಭಾ ಸಾಮರ್ಥ್ಯಗಳನ್ನು ಮೆಚ್ಚಿಕೊಂಡು 'ನಮ್ಮ ನಂತರ ರಾಜರ ಭಕ್ತರ ಸಂಶಯಗಳನ್ನು ನಿವಾರಿಸುವಲ್ಲಿ ಶ್ರೀರಘುಪ್ರವೀರರೇ ಸಮರ್ಥರು' ಎಂದು ವೃಂದಾವನಾಚಾರ್ಯರು ಆಗಾಗ ಅಭಿಮಾನದಿಂದ ಹೇಳುತ್ತಿದ್ದ ಪ್ರಶಂಸೆಯ ನುಡಿಗಳು ಗುರುಗಳು ಶಿಷ್ಯರಿಗೆ ನೀಡಿದ ಅತ್ಯುನ್ನತ ಪ್ರಶಸ್ತಿಯೆನ್ನಬಹುದು.

ಹೀಗೆ 'ಶ್ರೀವೃಂದಾವನಾಚಾರ್ಯ ಸಂಪ್ರದಾಯ ಪ್ರವರ್ತಕ'ರೆಂದು[1] ಖ್ಯಾತಿವೆತ್ತ ಭೀಮಸೇತು ಮುನಿವೃಂದ ಮಠದ ಶ್ರೀರಘುಪ್ರವೀರ ತೀರ್ಥರು ತಮ್ಮ ಗುರುಗಳ ನಿರ್ಯಾಣಾನಂತರ ಕ್ರಿ.ಶ. 1876ರ ಸುಮಾರಿಗೆ ಸಂಚಾರತ್ವೇನ ಕುಂಭಕೋಣಕ್ಕೆ ದಯಮಾಡಿಸಿದರು.

---

1. ತ್ಯಕ್ತದುರ್ಜನಸಂಗ(ಘ)ಶ್ಚ ಸಜ್ಜನಪ್ರಿಯಕಾರಕಃ ।
ಶ್ರೀಮದ್ವೃಂದಾವನಾಚಾರ್ಯಸಂಪ್ರದಾಯ ಪ್ರವರ್ತಕಃ ॥
– ಶ್ರೀರಾಜಾಚಾರ್ಯಕೃತ ಶ್ರೀರಘುಪ್ರವೀರ ಸ್ತೋತ್ರಮ್

ವಿದ್ವನ್ಮಣಿಗಳ ನೆಲೆಬೀಡಾಗಿ ದಕ್ಷಿಣ ಕಾಶಿ ಎಂದು ಪ್ರಸಿದ್ಧಿ ಪಡೆದಿದ್ದ ಕುಂಭಕೋಣ ಪೌರಾಣಿಕ ಮಹತ್ವವುಳ್ಳ ಸ್ಥಳವೂ ಆಗಿದ್ದಿತು. ವೈಷ್ಣವತ್ರಯ ಕ್ಷೇತ್ರಗಳಲ್ಲಿ ಒಂದೆಂದು ಪ್ರಖ್ಯಾತವಾದ ಕುಂಭಕೋಣವನ್ನು ಪುರಾಣದಲ್ಲಿ 'ಕಾಮಕೋಷ್ಟೀ ಪುರೀ' ಎಂದು ಕರೆಯಲಾಗಿದೆ. ಇಲ್ಲಿರುವ ಕುಂಭೇಶ್ವರ, ಸಾರಂಗಪಾಣಿ ಮೊದಲಾದ ಅನೇಕ ದೇವಸ್ಥಾನಗಳು ಕುಂಭಕೋಣಕ್ಕೆ ದೇವಾಲಯಗಳ ನಗರ ಎಂಬ ಅನ್ವರ್ಥ ಹೆಸರನ್ನು ತಂದಿತ್ತಿವೆ.

ಹಿಂದೆ ಚತುರ್ಮುಖ ಬ್ರಹ್ಮದೇವರು ಇಲ್ಲಿ ಯಜ್ಞಮಾಡಿ ವೇದ ನಾರಾಯಣನನ್ನು ಒಲಿಸಿಕೊಂಡರೆಂದೂ, ಅವರು ಹಿಡಿದ ಕುಂಭಕಂಠದಿಂದ ಹೊರಸುರಿದ ಅಮೃತಬಿಂದುಗಳು ಈ ಕ್ಷೇತ್ರದ ಪಾವಿತ್ರ್ಯತೆಗೆ ಕಾರಣವಾಯಿತೆಂಬ ಕಥೆ ಪ್ರಚಲಿತದಲ್ಲಿದೆ. ಈಗಲೂ ಇದರ ಸ್ಮರಣೆಯನ್ನು ತರುವ ವೇದನಾರಾಯಣನ ಮಂದಿರ ಇಲ್ಲಿಗೆ ಸಮೀಪವಿರುವುದನ್ನು ನೋಡಬಹುದು. ಇಲ್ಲಿನ ಪ್ರಸಿದ್ಧ ಸಾರಂಗಪಾಣಿ ದೇವಸ್ಥಾನದಲ್ಲಿ ಭಕ್ತವರದನಾಗಿ ನಿಂತಿರುವ ಶಾರ್ಙ್ಗಪಾಣಿಯಾದ ಶ್ರೀಹರಿಯ ಅನುಪಮ ಲಾವಣ್ಯವನ್ನು ಮತ್ತು ಭಕ್ತಾನುಕಂಪವನ್ನು ವಾದಿರಾಜ ಶ್ರೀಮಚ್ಚರಣರು ತಾವು ರಚಿಸಿರುವ ತೀರ್ಥ ಪ್ರಬಂಧದಲ್ಲಿ ಮುಕ್ತಕಂಠದಿಂದ ಪ್ರಶಂಸಿಸಿರುತ್ತಾರೆ[1].

ನ ಕೇವಲ ಯದ್ವಲಭೀವಿಹಂಗಾಃ  
ಪ್ರಾಶುಸ್ಥಿತಾ(ತೌ) ನಂದನನೀಡಭಾಜಃ ।  
ಗೀರ್ವಾಣವಾಣ್ಯಾ ವಿಹಗಾನ್ ವಿವಾದೈಃ  
ವಿಜಿಗ್ಯಿರೇ ಹಂತ ವಿಚಿತ್ರವಾಗ್ಭಿಃ ॥

– ಶ್ರೀರಾಘವೇಂದ್ರ ವಿಜಯ 2 / 31

---

1. ಕುಂಭಕೋಣೇ ವಸ ಶ್ರೀಶ ಶಾರ್ಙ್ಗಮಾಚ್ಛಾದಯ ಪ್ರಭೋ ।  
ತಥಾಽಪ್ಯತುಲಲಾವಣ್ಯೈರ್ಜನಾಸ್ತ್ವಾಂ ಜಾನತೇಽಚ್ಯುತಮ್ ॥  
ಹೃತಭೂಭಾರದೈತೇಯ ಕೃತವಿಶ್ವಜನಾವನ ।  
ಶಾರ್ಙ್ಗಪಾಣೇ ಶರಾಣಾಂ ತೇ ಲಕ್ಷ್ಯಂ ಪಾಪಾನಿ ಮೇಽಧುನಾ ॥

– ಪೂರ್ವಪ್ರಬಂಧ 42–43

'ಕುಂಭಕೋಣದ ಪ್ರತಿಯೊಬ್ಬ ಪಂಡಿತರ ಮನೆಯಲ್ಲಿಯೂ ನಿತ್ಯ ಪಾಠ–ಪ್ರವಚನಗಳು ನಡೆಯುತ್ತಿದ್ದವು. ಎತ್ತರವಾಗಿದ್ದ ಅವರ ಮನೆಯ ಜಂತಿಯ ಪಟ್ಟಿಗಳಲ್ಲಿ ವಾಸವಾಗಿದ್ದ ಪಕ್ಷಿಗಳೂ ಸಹ ಸಂಸ್ಕೃತ ಭಾಷೆಯಲ್ಲಿ ಉಲಿಯುತ್ತಿದ್ದವು' ಎಂಬ ಶ್ರೀನಾರಾಯಣಾಚಾರ್ಯರ ಮಾತುಗಳನ್ನು ನೋಡಿದರೆ ಕುಂಭಕೋಣ ಶಾಸ್ತ್ರವೇತ್ತರ ತವರು ಮನೆಯಾಗಿತ್ತೆಂದು ಊಹಿಸಬಹುದು. ವಾದಿರಾಜರ ಸಹಪಾಠಿಗಳಾಗಿದ್ದ ಮಹಾಮಹಿಮ ಶ್ರೀವಿಜಯೀಂದ್ರತೀರ್ಥ ಗುರುವರ್ಯರ ಮೂಲವೃಂದಾವನವೂ ಸಹ ಕುಂಭಕೋಣದಲ್ಲಿರುವುದರಿಂದ ವೈಷ್ಣವರ ಸಂಖ್ಯೆಯೂ ಸಹ ಇಲ್ಲಿ ವಿಪುಲವಾಗಿದ್ದಿತು.

## ಅಬ್ಬಾರಣ್ಯದ ಅಪಲಾಪ

ಇಂತಹ ಪವಿತ್ರ ಕ್ಷೇತ್ರಕ್ಕೆ ಆಗಮಿಸಿದ ಶ್ರೀರಘುಪ್ರವೀರ ತೀರ್ಥರು ಕುಂಭೇಶ್ವರ ಮತ್ತು ಸಾರಂಗಪಾಣಿಯ ಮಂಗಳಮೂರ್ತಿಗಳನ್ನು ಸಂದರ್ಶಿಸಿ ಅಲ್ಲಿಯೇ ಕೆಲವು ದಿವಸಗಳ ಕಾಲ ಸಚ್ಛಾಸ್ತ್ರ ಪಾಠಪ್ರವಚನಗಳನ್ನು ಮಾಡುತ್ತಾ ಬಿಡಾರ ಮಾಡಿದರು. ಶ್ರೀಮದ್ವಾದಿರಾಜರ ಭಾವಿಸಮೀರತ್ವವನ್ನು ಸಮರ್ಥಿಸುವ 'ಸ್ವಾಪ್ನವೃಂದಾವನಾಖ್ಯಾನ' ಹಾಗೂ ಅದಕ್ಕೆ ಶ್ರೀಮುಷ್ಣಾಚಾರ್ಯರೇ ಮೊದಲಾದವರು ಬರೆದ ಪ್ರಬುದ್ಧ ವಿವರಣೆಗಳು ಆ ಹೊತ್ತಿಗೆ ವ್ಯಾಪಕ ಪ್ರಚಾರವನ್ನು ಪಡೆದುಕೊಂಡಿದ್ದರಿಂದ ಕುಂಭಕೋಣೆಯಲ್ಲಿ ರಾಜರ ಋಜುಮಹಿಮೆಗಳನ್ನು ಗೌರವಿಸುವ ಶ್ರದ್ಧಾಳುಗಳೂ ಸಾಕಷ್ಟಿದ್ದರು. ವೃಂದಾವನಾಚಾರ್ಯರ ಬೋಧನೆಯ ಬೆಳಕಿನಲ್ಲಿ ಶ್ರೀಗಳವರು ನಡೆಸುತ್ತಿದ್ದ ರಾಜರ ಋಜುತ್ವೋತ್ಕರ್ಷ ಉಪನ್ಯಾಸಗಳು ಸಜ್ಜನರನ್ನು ಸಾಕಷ್ಟು ಆಕರ್ಷಿಸಿದ್ದವು. 'ಊರಿದ್ದಲ್ಲಿ ಹೊಲಸು' ಎನ್ನುವಂತೆ ಸತ್ಯಾನ್ವೇಷಣೆಯ ದೃಷ್ಟಿಯಿಲ್ಲದೇ ಎಲ್ಲವನ್ನೂ ತಮ್ಮ ಅರಿವಿನ ಸೀಮಿತ ಪರಿಧಿಯಲ್ಲಿಯೇ ನೋಡುತ್ತಾ ಆಖ್ಯಾನದ ಕುರಿತಾಗಿ ಸಮಯ ಒದಗಿದಾಗಲೆಲ್ಲಾ ಅಪಸ್ವರವೆತ್ತುತ್ತಾ ಕೇವಲ ಹುಳುಕನ್ನೇ ಹುಡುಕುವ ಕೆಲವು ಕುಹಕಿಗಳೂ ಕುಂಭಕೋಣೆಯಲ್ಲಿದ್ದರು. ನಗರಾದ್ಯಂತ ಶ್ರೀಗಳವರು ಮೂಡಿಸಿದ್ದ ಹೊಸ

ಭಾವಸಂಚಲನವನ್ನು ಕಂಡು ಅಸೂಯಾಪರರಾದ ಆ ಕುಹಕಿಗಳೆಲ್ಲರೂ ಒಗ್ಗೂಡಿ ತಮ್ಮದೇ ಪ್ರತ್ಯೇಕ ಗೋಷ್ಠಿಗಳನ್ನು ನಡೆಸುತ್ತಾ ಆಖ್ಯಾನೋಕ್ತ ವಿಷಯಗಳನ್ನು ಮನಬಂದಂತೆ ನಿಂದಿಸತೊಡಗಿದ್ದರು. ಹಾಗಾಗಿ ಶ್ರೀಗಳವರ ಮನಸ್ಸಿಗೆ ನೋವುಂಟು ಮಾಡುವ ಅನೇಕ ಗೊಂದಲಮಯ ಪ್ರಸಂಗಗಳೂ ನಗರದಲ್ಲಿ ನಡೆದವು.

'ಬೆಂಕಿಗೆ ತುಪ್ಪ ಸುರಿದಂತೆ' ಇದೇ ಸಂದರ್ಭದಲ್ಲಿ ದುಷ್ಟನೂ, ದುರಾಚಾರಿಯೂ ಆಗಿದ್ದ ಸತ್ಯಮಂಗಲದ ವಿಪ್ರನೋರ್ವನು 'ಅಬ್ಜಾರಣ್ಯ ಮಹಾತ್ಮ್ಯ' ಎಂಬ ವಿಕೃತ ಗ್ರಂಥವನ್ನು ರಚಿಸಿ, ಅದರಲ್ಲಿ ವಾದಿರಾಜರ ಋಜುತ್ವವನ್ನೂ ಮತ್ತು ರಾಜರ ಮೃತ್ತಿಕಾಧಾರಣ ವಿಧಿಯನ್ನು ಅಪಹಾಸ್ಯ ಮಾಡಿದ್ದನಲ್ಲದೆ, ವೃಂದಾವನಾಚಾರ್ಯರನ್ನು ದೈತ್ಯರೆಂದು ಕರೆದು ಹೀಯಾಳಿಸಿದ್ದನು. ವಾದಿರಾಜರ ಋಜುಮಹಿಮೆಯ ಆಗರವಾದ ಶ್ರೀಮತ್ಸ್ವಾಪ್ನ ವೃಂದಾವನಾಖ್ಯಾನಕ್ಕೆ ಯಾವ ಪ್ರಾಮಾಣ್ಯವೂ ಇಲ್ಲವೆಂದೂ, ಈ ಗ್ರಂಥವನ್ನು ಮಾನ್ಯಮಾಡುವವರು ಮತ್ತು ರಾಜರನ್ನು ಲಾತವ್ಯನಾಮಕ ಋಜುಗಳೆಂದು ತಿಳಿದು ಅವರನ್ನು ವಾಯು ಪ್ರತೀಕದ ಸಮವಿಟ್ಟು ಪೂಜಿಸುವವರು ಅಂಧಃತಮಸ್ಸಿಗೆ ಬೀಳುವವರೆಂದು ಅಪಲಾಪ ಮಾಡಿದ್ದನು[1].

---

1. ಕುಂಭಕೋಣಾಭಿಧಾಮಾಪುಃ ಕುಂಭೇಶ್ವರವಿಭೂಷಣಾಮ್ ।
ತಸ್ಯಾಂ ಕಶ್ಚಿದ್ ದುರಾಚಾರೀ ದುಷ್ಟಕಾವ್ಯಕೃತಾಂ ವರಃ ॥
ಅಕರೋತ್ಕೃತಕಂ ಗ್ರಂಥಮಬ್ಜಾರಣ್ಯಾಭಿಧಂ ನವಮ್ ।
ಯಸ್ಮಿನ್ ಶ್ರೀವಾದಿರಾಜಾಖ್ಯಸದ್ಗುರೋರ್ನಿಂದನಾದಿಕಮ್ ॥
ವೃಂದಾವನಾಚಾರ್ಯವರ್ಯದೈತ್ಯತ್ವಮುದಿತಂ ತಥಾ ।
ಮೃತ್ತಿಕಾಧಾರಿಣಾಂ ನಿಂದಾ ಕೃತಾ ಪ್ರತಿಪದಂ ಸತಾಮ್ ॥
ಆಖ್ಯಾನಮಪ್ರಮಾಣಂ ಚ ಕೃತಂ ತನ್ಮಾರ್ಗವರ್ತಿನಾಮ್ ।
ಧ್ರುವಮಂಧಂತಮಃ ಪ್ರಾಪ್ತಿರಿತ್ಯಮಂಗಲಜಲ್ಪಿತಮ್ ॥
ತದ್ಗ್ರಂಥಂ ಪ್ರೇತಸಂಕಾಶಂ ಸಾದರಂ ದುರ್ಜನಾಸ್ತದಾ ।
ನಿಕ್ಷಿಪ್ಯ ಶಿಬಿಕಾಯಾಂ ತದ್ವಹಂತಃ ಪ್ರತಿವರ್ತ್ಮನಿ ॥
ತತ್ಪುರಾಣಪ್ರವಕ್ತಾರಂ ಮಾನಯಂತೋ ಬಹುಸ್ತವೈಃ ।
ಜಗರ್ಜುರ್ಜಲ್ಪಿತೈರ್ದುಷ್ಟೈಃ ಸಂತರ್ಜ್ಯರ್ಜುಗತಂ ಗುರುಮ್ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ತೃತೀಯಾವಲಿ 2–7)

ಶ್ರೀಮದಾನಂದತೀರ್ಥರ ಸಾಕ್ಷಾತ್ ಶಿಷ್ಯರೂ, ಪೂರ್ವಾಶ್ರಮದ ತಮ್ಮಂದಿರೂ ಆದ ಶ್ರೀವಿಷ್ಣು ತೀರ್ಥರು ಋಷಿಗಳೊಂದಿಗೆ ನಡೆಸುವ ಸಂವಾದ ರೂಪದಲ್ಲಿ ನಿರೂಪಿತವಾಗುವಂತೆ ರಚಿಸಲಾದ ಈ ಕೃತಿಯಲ್ಲಿ ಒಟ್ಟು ಐದು ಅಧ್ಯಾಯಗಳಿದ್ದು, ಮೂರು ಅಧ್ಯಾಯಗಳನ್ನು ಪುರಾಣ ಮೂಲದಿಂದಲೂ, ಮತ್ತೆರಡು ಅಧ್ಯಾಯಗಳನ್ನು ಕೃತ್ರಿಮರೀತಿ ಯಿಂದಲೂ ರಚಿಸಿದ್ದನು. ಪ್ರತಿ ಅಧ್ಯಾಯದ ಅಂತ್ಯದಲ್ಲಿ 'ಇತಿ ಶ್ರೀಬ್ರಹ್ಮಾಂಡಪುರಾಣೇ ಅಬ್ಜಾರಣ್ಯಮಹಾತ್ಮ್ಯೇ' ಎಂಬ ಹೇಳಿಕೆಯ ಮೂಲಕ 'ಅಬ್ಜಾರಣ್ಯ'ಕ್ಕೆ ಪೌರಾಣಿಕ ಸ್ಪರ್ಶವನ್ನು ನೀಡುವ ಪ್ರಯತ್ನ ವನ್ನೂ ಮಾಡಲಾಗಿತ್ತು. 'ಸ್ವಾಪ್ನವೃಂದಾವನಾಖ್ಯಾನ ಕೃತಿ ಹಾಗೂ ಬ್ರಹ್ಮಾಂಡ ಪುರಾಣದ ಕಾಲ ಸಂದರ್ಭ ಹಾಗೂ ವಿಷಯದ ಅರಿವಿಲ್ಲದೇ ವಾದಿರಾಜರ ಋಜುಮಹಿಮೆಗಳನ್ನು ಖಂಡಿಸಲೆಂದೇ ದುರಾಗ್ರಹ ಪೂರ್ವಕವಾಗಿ ರಚಿಸಿದ ಗ್ರಂಥವಿದೆಂದು ಯಾರು ಬೇಕಾದರೂ ಸುಲಭವಾಗಿ ಹೇಳಬಹುದಿತ್ತು. ಇಂತಹ ಅಸತ್ಯ ಪ್ರತಿಪಾದಕ ಕೃತಿಗೆ ಮಹಾಪುರಾಣ ಪಟ್ಟವನ್ನು ನೀಡಿದ ಕುಹಕಿಗಳು, ತುಂಬಿದ ಸಭೆಯಲ್ಲಿ ಇದರ ಪ್ರವಚನಾನುವಾದದ ಕಾರ್ಯಕ್ರಮವನ್ನೂ ಸಹ ಸತ್ಯಮಂಗಲದ ಆ ಧೂರ್ತವಿಪ್ರನಿಂದ ಮಾಡಿಸಿದರು. ಇಷ್ಟಕ್ಕೆ ಸುಮ್ಮನಾಗದೇ ವಾದಿರಾಜರ ಭಕ್ತರನ್ನು ಕೆರಳಿಸುವ ಏಕೈಕ ಉದ್ದೇಶದಿಂದಲೇ ಗ್ರಂಥವನ್ನು ಆನೆಯ ಮೇಲಿಟ್ಟು ಸಿಂಗರಿಸಿ ಕುಂಭಕೋಣೆಯ ರಾಜಬೀದಿಗಳಲ್ಲಿ ಅದ್ಧೂರಿಯಿಂದ ಮೆರವಣಿಗೆಯನ್ನೂ ನಡೆಸಿಬಿಟ್ಟರು. ಜಂಬುಖಂಡಿ ಆಚಾರ್ಯರಲ್ಲಿ ಮೊದಲಿನಿಂದಲೂ ಅಸೂಯಾಪರರಾಗಿ, ಶ್ರೀವಿಜಯ ದಾಸರೇ ಮೊದಲಾದ ಶ್ರೀಶಾಪರೋಕ್ಷಿಗಳಿಂದ ತಮ್ಮ ಕೀರ್ತನೆಗಳಲ್ಲಿ ಸ್ತುತಿಸಲ್ಪಟ್ಟ ಶ್ರೀ ವಾದಿರಾಜರ ಋಜುತ್ವ ಮಹಿಮೆಗಳನ್ನು ಪ್ರಕ್ಷಿಪ್ತವೆಂದೂ, ಅಸುರಾವೇಶದಲ್ಲಿದ್ದಾಗ[1] ಹೊರಬಂದವುಗಳೆಂದೂ ವಿತಂಡವಾದ

---

1. "ಅಶ್ವತ್ಥಾಮಾದಿ ಯೋಗಿಗಳಿಗೂ ದೈತ್ಯಾವೇಶ ಬಂದಿದೆ ಎಂದು ಪ್ರಮಿತವಾಗಿರುವುದರಿಂದ, ವಿಜಯದಾಸಾದಿಗಳು ವಾದಿರಾಜರನ್ನು ಋಜುಗಳೆಂದು ಹೊಗಳಿದಾಗ ಅವರಿಗೆ ದೈತ್ಯಾವೇಶವಿತ್ತೆಂದು ಏತಕ್ಕೆ →

ಮಾಡುತ್ತಿದ್ದ ಮತಾಂಧರಾದ ಕೆಲವರು ಈ ಕುತಂತ್ರದ ರೂವಾರಿಗಳಾಗಿದ್ದ ರೆಂಬುದನ್ನು ಪ್ರತ್ಯಕ್ಷವಾಗೇನೂ ಹೇಳಬೇಕಾಗಿಲ್ಲ. ಇದೇನೇ ಇರಲಿ ಈ ಕೃತ್ರಿಮಕೃತಿಯ ದೆಸೆಯಿಂದ ದೈತ್ಯಸ್ವಭಾವದ ಆ ವಿಪ್ರನಿಗೆ ಕೀರ್ತಿ ಯೊಂದಿಗೆ ವಿಪುಲ ಧನಸಂಪತ್ತೂ ಪ್ರಾಪ್ತವಾಯಿತು.

ಇದು ಇಷ್ಟಕ್ಕೇ ನಿಲ್ಲಲಿಲ್ಲ. 'ಮರ್ಕಟ ಸಮೂಹಕ್ಕೆ ಮದ್ಯ ಕುಡಿಸಿದಂತೆ' ಆ ಗುಂಪು ವಾದಿರಾಜರನ್ನು ಕುರಿತಾಗಿ ದೂಷಣೆಯ ಮಾತು ಗಳನ್ನಾಡುತ್ತಾ ರಘುಪ್ರವೀರರು ಬಿಡಾರ ಹೂಡಿದ್ದ ಸ್ಥಳಕ್ಕೆ ಬಂದು ಗದ್ದಲವೆಬ್ಬಿಸತೊಡಗಿತು. ಆ ಗೊಂದಲಮಯ ಸನ್ನಿವೇಶದಲ್ಲಿ ಕೆಲವು ದುರಾತ್ಮರು ಮಾಡಿದ 'ರಾಜರ ಋಜುತ್ವ ವಿರೋಧಿ ಘೋಷಣೆಗಳು' ಒಳಗೆ ತಪೋನಿರತರಾಗಿದ್ದ ಶ್ರೀಗಳವರ ಕಿವಿಗೆ ಕಾದಸೀಸ ಹೊಯ್ದಂತೆ ಬಿದ್ದು ಅಸಹನೀಯವೆನಿಸಿದವು. ಯಾವ ಗುರುಗಳನ್ನು ತಮ್ಮ ಸ್ವರೂಪೋದ್ಧಾರಕರೆಂದು ತಿಳಿದು ಅವರ ಪವಿತ್ರನಾಮಜಪವನ್ನು ಶ್ವಾಸೋಚ್ಛ್ವಾಸದಂತೆ ಅನವರತ ಜಪಿಸುತ್ತಿದ್ದರೋ, ಯಾವ ಗುರುಗಳ

---

→ ಹೇಳಬಾರದು? ಎಂದು ಪೂರ್ವಪಕ್ಷದವರ ಭಾವ. ಹಾಗಿದ್ದರೆ ಈ ರೀತಿಯ ವಿಚಾರಪ್ರಣಾಡಿಯನ್ನು ಸಾತ್ತ್ವಿಕವೆಂದು ಅಂಗೀಕರಿಸುವುದಾದರೆ, ಟೀಕಾ ಚಾರ್ಯರು ಆಚಾರ್ಯರ ಹದಿನೇಳು ಗ್ರಂಥಗಳಿಗೆ ಟೀಕೆ ಬರೆಯುವಾಗ, ರಾಘವೇಂದ್ರ ಸ್ವಾಮಿಗಳು ನಲವತ್ತೆಂಟು ವರ್ಷಗಳ ಪಟ್ಟಕಾಲದಲ್ಲಿ ಪಾಠ ಹೇಳುವಾಗ, ರಘೂತ್ತಮತೀರ್ಥರು ಪಾಠಪ್ರವಚನ ಮಾಡಿದಾಗ ಬರೀ ಸುಳ್ಳನ್ನೇ ಹೇಳುತ್ತಿದ್ದರೆಂದು ಏಕೆ ಕಲ್ಪಿಸಬಾರದು? ಸಕಲ ಮಾಧ್ವ ಸಂಸ್ಕೃತಿಯೂ ದೈತ್ಯಾವೇಶಾಜ್ಞಾನಾದಿಮೂಲವೆಂದು ಪ್ರಾಪ್ತವಾಗುತ್ತೆ. ಮನು, ವಶಿಷ್ಠ, ಪರಾಶರಾದಿ ಸರ್ವಸ್ಮೃತಿ ಕರ್ತರೂ, ತರ್ಕತಾಂಡವಾದಿ ಗ್ರಂಥಕರ್ತರೂ ವಿರುದ್ಧ ಜ್ಞಾನದೆಶೆಯಲ್ಲಿ ಆ ಗ್ರಂಥಗಳನ್ನು ಬರೆದರೆಂದು ಏತಕ್ಕೆ ಆಪಾದಿಸಬಾರದು? ಪ್ರಮಾಣ ವಿರೋಧವಿಲ್ಲದಿರುವಾಗ ಹಾಗೆ ಕಲ್ಪಿಸಬಾರದು ಎನ್ನುವುದಾದರೆ, ವಿಜಯದಾಸಾದಿಗಳ ವಿಷಯದಲ್ಲೂ ಹಾಗೆ ಕಲ್ಪಿಸಬಾರದು.

– ಶ್ರೀಮದ್ವಾದಿರಾಜ ಋಜುತ್ವ ಸಿದ್ಧಾಂತ

ಲೇ : ಶ್ರೀ ಹೆಚ್. ಸುಬ್ಬರಾವ್, ಮೈಸೂರು.

ಸೇವೆಗಾಗಿ ತಮ್ಮ ಜೀವಿತದ ಸಾರಸರ್ವಸ್ವವನ್ನೂ ಮೀಸಲಿಟ್ಟಿದ್ದರೋ ಅಂತಹ ಶ್ರೀಮದ್ವಾದಿರಾಜಪೂಜ್ಯಚರಣರ ನಿಂದನೆಯನ್ನು ಕೇಳಿ ಶ್ರೀಗಳಿಂದ ಸಹಿಸಲಾಗಲಿಲ್ಲ. ಇಂತಹ ದುರ್ವಾಕ್ಯಗಳನ್ನು ಕೇಳುವುದಕ್ಕಿಂತ ನಮ್ಮ ಈ ಕಿವಿಗಳು ಕಿವುಡಾಗಬಾರದಿತ್ತೇ! ಎಂದು ಶ್ರೀಗಳವರು ಪರಿತಪಿಸತೊಡಗಿದರು. ಸನ್ಯಾಸಿಗಳಾಗಿದ್ದರಿಂದ ಶಾರೀರಕ ಪ್ರತಿಭಟನೆ ತೋರದೆ ಮನಸ್ಸಿನಲ್ಲಿಯೇ ಕೊರಗುತ್ತಾ ಕಂಬನಿ ಸುರಿಸತೊಡಗಿದರು.

ಸ್ವಲ್ಪ ಸಮಯವಾಯಿತು. ವಾದಿರಾಜರನ್ನು ದೂಷಿಸುತ್ತಾ ಮನಬಂದಂತೆ ಗದ್ದಲವೆಬ್ಬಿಸಿದ ದುರಾತ್ಮರು ಒಬ್ಬೊಬ್ಬರಾಗಿ ಅಲ್ಲಿಂದ ಚದುರಿದರು. ಆದರೆ ಶ್ರೀಗಳವರ ಮನಸ್ಸಿನಲ್ಲಿ ಮಡುಗಟ್ಟಿದ ದುಃಖ, ದುಮ್ಮಾನಗಳು ಮಾತ್ರ ಚದುರಲಿಲ್ಲ. ಗುರುಗಳ ನಿಂದನೆಯನ್ನು ಕೇಳಿದ್ದ ದೇಹಕ್ಕೆ ಪ್ರಾಯಶ್ಚಿತ್ತ ರೂಪವಾಗಿ ಧೀರರಾದ ರಘುಪ್ರವೀರರು ಆ ಕ್ಷಣದಿಂದ ಅನ್ನೋದಕಗಳನ್ನು ತ್ಯಜಿಸಿ ತಮ್ಮ ಆರಾಧ್ಯಮೂರ್ತಿಯಾದ ರಾಮದಾಮೋದರನ ಪಾದಾರವಿಂದಗಳನ್ನು ಮೊರೆಹೊಕ್ಕರು. ಅಬ್ಜಾರಣ್ಯವೆಂಬ ಅಪದ್ಧಗ್ರಂಥಕ್ಕೆ ಖಂಡನೆಯ ತಕ್ಕ ಉತ್ತರ ನೀಡುವವರೆಗೂ ವಿಶ್ರಮಿಸುವುದಿಲ್ಲವೆಂದು ಅಂತರಂಗದಲ್ಲಿಯೇ ಪ್ರತಿಜ್ಞೆಗೈದು ಅದರ ಚಿಂತನೆಯಲ್ಲಿ ತೊಡಗಿದರು[1].

## ಕೆರಳಿದ ಕೇಸರಿ

ಹೀಗೆ ಒಂದು ಮಾಸ ಕಳೆಯಿತು. ಶ್ರೀಗಳವರು ಅನ್ನೋದಕಗಳನ್ನು ತ್ಯಜಿಸಿ ಪರಿತಪಿಸುತ್ತಿರುವ ವಿಷಯ ಜಂಬುಖಂಡಿ ಆಚಾರ್ಯರಿಗೆ ತಿಳಿಯಿತು. ಇದರಿಂದ ಕೆರಳಿದ ಆಚಾರ್ಯರು ಒಂದು ಕ್ಷಣವೂ

1. ಅಸಕೃತ್ಸದ್ಗುರೋಃ ಶ್ರುತ್ವಾ ದುರ್ಲಭಂ ಕರ್ಣಕರ್ಕಶಮ್ ।
ತರ್ಜನಂ ಗುರುರಾಜಸ್ಯ ದುಃಖಜರ್ಜರಿತಾಶಯಃ ॥
ಅನ್ನೋದಕಂ ಚ ತತ್ತ್ಯಾಜ ಮಾಸಮೇಕಂ ಶುಚಾರ್ದಿತಃ ।
ಉಪವಾಸಕೃಶೋ ಭೂತ್ವಾ ಗ್ರಂಥಖಂಡನಚಿಂತಕಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ತೃತೀಯಾವಲಿ 8–9)

ತಡಮಾಡದೆ ಕುಂಭಕೋಣೆಗೆ ಧಾವಿಸಿ ಬಂದರು. ರಾಜರ ದ್ವೇಷಿಗಳೆಂಬ ಊಳಿಡುವ ನರಿಗಳ ಹಿಂಡಿಗೆ ವೀರಾವೇಶದಿಂದ ಗರ್ಜಿಸುವ ಸಿಂಹವೊಂದು ಹಠಾತ್ತನೆ ಹೊಕ್ಕಂತಾಯಿತು.

ವಾದಿರಾಜರ ದೂಷಣೆಯನ್ನು ಕೇಳಿ ಮನನೊಂದು, ಅನ್ನೋದಕಗಳನ್ನು ತ್ಯಜಿಸಿ ಪರಿತಪಿಸುತ್ತಿದ್ದ ಶ್ರೀಗಳವರನ್ನು ಕಂಡು ಜಂಬುಖಂಡಿ ಆಚಾರ್ಯರ ಮನಸ್ಸು ಜರ್ಝರಿತಗೊಂಡಿತು. ಜ್ಞಾನಭಕ್ತಿ ವೈರಾಗ್ಯಾದಿ ಗುಣಗಳಿಂದ ಭೂಷಿತರಾಗಿ, 'ಅಭಿನವ ವೃಂದಾವನಾ ಚಾರ್ಯ'ರಂತೆ ಶೋಭಿಸುತ್ತಿದ್ದ ರಘುಪ್ರವೀರರಿಗೆ ಎಸಗಿದ ದ್ರೋಹವನ್ನು ಕಂಡು 'ಜಂಬುಖಂಡಿ' ಎಂಬ ಸಿಂಹ ಕನಲಿ ಕೆಂಡವಾಯಿತು. ಸುಕೋಮಲ ಸ್ವಭಾವದ ಶ್ರೀಗಳವರಿಗೆ ನೋವುಂಟು ಮಾಡಿದ ರಾಜರ ಋಜುತ್ವ ವಿರೋಧಿಗಳ ಹುಟ್ಟಡಗಿಸಬೇಕೆಂದು ನಿಶ್ಚಯಿಸಿದ ಆಚಾರ್ಯರು ಅಬ್ಜಾರಣ್ಯಕ್ಕೆ ಪ್ರತಿಯಾಗಿ ಖಂಡನ ಗ್ರಂಥವನ್ನು ರಚಿಸುವುದಷ್ಟೇ ಅಲ್ಲ, ಆ ದುರ್ಗ್ರಂಥವನ್ನು ನಗರದ ಕೇಂದ್ರ ಸ್ಥಳದಲ್ಲಿ ದಹಿಸಿ ಅದರ ಭಸ್ಮವನ್ನು ಗುರುಗಳ ಪಾದಕ್ಕೆ ಸಮರ್ಪಿಸುವೆನೆಂಬ ದೃಢಪ್ರತಿಜ್ಞೆಯನ್ನೇ ಶ್ರೀಗಳವರ ಸಮ್ಮುಖದಲ್ಲಿ ಮಾಡಿದರು.

ಹೀಗೆ ದೃಢಪ್ರತಿಜ್ಞೆ ಮಾಡಿದ ಜಂಬುಖಂಡಿ ಆಚಾರ್ಯರು ಅಬ್ಜಾರಣ್ಯವೆಂಬ ಕೃತಕಪುರಾಣ ಗ್ರಂಥಕ್ಕಾಗಿ ಸಾಕಷ್ಟು ಹುಡುಕಾಟ ನಡೆಸಿದರು. ಶ್ರೀರಘುಪ್ರವೀರತೀರ್ಥರೂ ಸಹ ಆ ದುರ್ಗ್ರಂಥದ ವಿಚಾರವಾಗಿ ಕೇಳಿದ್ದರೇ ಹೊರತು ಅದನ್ನು ಪ್ರತ್ಯಕ್ಷ ನೋಡಿರಲಿಲ್ಲ. ಬಹುಪ್ರಯತ್ನದ ನಂತರ ಆ ಗ್ರಂಥ ಆಚಾರ್ಯರಿಗೆ ದೊರಕಿತು. ವಿದ್ವನ್ಮಣಿಗಳಾಗಿದ್ದ ಅವರು ಅದನ್ನು ತಮ್ಮ ದುರ್ಬೀನು ಕಣ್ಣಿನಿಂದ ಪರಿಶೀಲಿಸಿ ಅದಕ್ಕೆ ಪ್ರತ್ಯುತ್ತರವಾಗಿ ಖಂಡನ ಗ್ರಂಥವನ್ನು ಮನಸ್ಸಿನಲ್ಲಿಯೇ ಸಿದ್ಧಪಡಿಸಿಕೊಂಡರು.

ಮರುದಿವಸವೇ ಆಚಾರ್ಯರು ಕುಂಭಕೋಣದಲ್ಲಿಯೇ ಹರಿಯುತ್ತಿದ್ದ ಪವಿತ್ರ ಕಾವೇರಿ ತೀರದ ನಿರ್ಜನ ಪ್ರದೇಶಕ್ಕೆ ತೆರಳಿ ತಮ್ಮ

ಗುರುಗಳಾದ ಶ್ರೀವಾದಿರಾಜರ ಮತ್ತು ಅವರ ಅಂತಃಸ್ಥನಾದ ಶ್ರೀಲಕ್ಷ್ಮೀಹಯಾಸ್ಯನನ್ನು ಸ್ಮರಿಸುತ್ತಾ ಅಬ್ಜಾರಣ್ಯದ ಪ್ರತಿ ಅಕ್ಷರಕ್ಕೂ ಸಮಂಜಸವಾಗಿ ಖಂಡನ ಬರೆಯಲಾರಂಭಿಸಿದರು. ತಮ್ಮ ನಿಲುವನ್ನು ಸಮರ್ಥಿಸಲು ಶ್ರುತಿ, ಸ್ಮೃತಿ, ಪುರಾಣಗಳನ್ನು ಮತ್ತು ಅಪರೋಕ್ಷ ಜ್ಞಾನಿಗಳಾದ ಹರಿದಾಸರ ವಚನಗಳನ್ನು ಪೂರಕವಾಗಿ ನೀಡಿ ಶ್ರೀವಾದಿರಾಜ ಗುರುಸಾರ್ವಭೌಮರು ಮುಂದಿನ ವಾಯುಪಟ್ಟಕ್ಕೆ ಬರುವ ಲಾತವ್ಯನಾಮಕ ಋಜೂತ್ತಮರೆಂದು ಸಮರ್ಥವಾಗಿ ಸಾಧಿಸಿದರು. ನೋಡು ನೋಡುತ್ತಲೇ ಪಾಂಡವಪ್ರಿಯನ ಪರಮಾನುಗ್ರಹ ಬಲದಿಂದ ವಿತಂಡವಾದಿಗಳ ಮದವಡಗಿಸುವ 'ಖಂಡನಕೃತಿ'ಯೊಂದು ಆಚಾರ್ಯರಿಂದ ನಿರ್ಮಾಣಗೊಂಡಿತು[1].

ಶ್ರೀಜಂಬುಖಂಡಿ ಆಚಾರ್ಯರು ಕುಂಭಕೋಣೆಯಲ್ಲಿ 'ಅಬ್ಜಾರಣ್ಯ'ಕ್ಕೆ ಪ್ರತಿಯಾಗಿ ರಚಿಸಿದ 'ಖಂಡನಗ್ರಂಥ'ದ ಹೆಸರನ್ನು ಸುಧಾಕರಗುರುಗುಣ

---

1. ನಿಶಮ್ಯ ತತ್ಸರ್ವಮುದಂತಕಮಂತಿಕಂ ಸಮಾಗತಃ ಸತ್ವರಮಾರ್ತಿನಾಶನಃ।
ನಮಶ್ಚಕಾರಚಲಭಕ್ತಿಪೂರಿತೋ ಜಗಾದ ಚೇತಃ ಸುಖದಂ ವಚಸ್ತ್ವಿದಮ್॥
ಕೃತಂ ಯದೇತೇನ ವಿನಿಂದನಾತ್ಮಕಂ ಸತಾಂ ಮನಸ್ತಾಪಕರಂ ಹ್ಯಮಂಗಲಮ್।
ತದೇವ ದಗ್ಧ್ವಾ ಮಹತಾಂ ಪದಾಂಬುಜೇ ಸಮರ್ಪಯೇಹಂ ಭಸಿತಂ ಸುನಿಶ್ಚಯಮ್॥

ಇತಿ ಪ್ರತಿಜ್ಞಾವಚಸಾ ಮನೋ ಮುದಂ
ತತಾನ ತೇಷಾಂ ಶಿರಸಾ ನಮನ್ ಮುದಾ।
ಸ್ವಕೀಯಕರ್ತವ್ಯವಿಷಕ್ತಮಾನಸೋ
ಗವೇಷಯನ್‌ಕಾವ್ಯಮತಿಪ್ರಯತ್ನತಃ॥
ಅಲಭ್ಯಮಪ್ಯನ್ಯಜನೈರುಪಾಯತಸ್ತ–
ದೇವ ಲಬ್ಧಂ ಗುರುಣಾ ಜಿಗೀಷುಣಾ।
ಯಯೌ ಹಿ ತತ್ಖಂಡಯಿತುಂ ಸ ಕೌತುಕೀ
ಪುರೋ ಬಹಿಸ್ಥೇ ವಿಪಿನೇಽಜನೇ ಪರೇ॥
ಶ್ರುತಿಪ್ರಮಾಣೈಃ ಸ್ಮೃತಿಭಿಸ್ತ್ವನೇಕಶಃ ಪುರಾಣವಾಕ್ಯೈರ್ಬಹುಭಿಃ ಸುಯುಕ್ತಿಭಿಃ।
ಸುದಾಸಪದ್ಯೈರಪಿ ಖಂಡಯನ್‌ಮುದಾ ಸುದಾಮದಾರಿದ್ರ್ಯಹರಸ್ಯ ತುಷ್ಟಯೇ॥
– ಶ್ರೀಸುಧಾಕರಗುರುಗುಣರತ್ನಮಾಲಾ (ತೃತೀಯಾವಲಿ, 10–14)

ರತ್ನಮಾಲಾಕಾರರು ಉಲ್ಲೇಖಿಸಿಲ್ಲ. ಆದರೆ ಆಚಾರ್ಯ ಕೃತ 'ಋಜುತ್ವವಿರೋಧಿಕಪೋಲಚಪೇಟಿಕಾ' ಗ್ರಂಥದಲ್ಲಿ ಬರುವ,

'ಪ್ರವೀರಾಣಾಂ ಪ್ರವೀರಂ ಹಿ ಹಿಂಕುರ್ವಂತಂ ರಘೂತ್ತಮಮ್ ।
ಪ್ರವೀರಾಣಾಮಭಯದಂ ಜಾನಕೀಜಾನಿಮಾಶ್ರಯೇ ॥
ರಘುಪ್ರವೀರಸದ್ಧುರ್ಯಾನಾರ್ಯಾನ್ಮಾರುತಪದ್ಧತೌ ।
ಪ್ರಣಮ್ಯ ವಾದಿರಾಜೀಯ್ಯ ಋಜುತ್ವಸ್ಯಾಪಲಾಪಿನಾಮ್ ॥
ಮರ್ದನಗ್ರಂಥಸಮ್ಮತ್ಯಾ ಕಪೋಲಾತಿಚಪೇಟಿಕಾ ।
ಕ್ರಿಯತೇ ಗುರುರಾಜಾನಾಂ ಸುತೇನ ಸುಮನೋಹರಾ ॥'

ಎಂಬ ಪ್ರಾರಂಭದ ಶ್ಲೋಕಗಳನ್ನು ನೋಡಿದರೆ ಬಹುಶಃ ಆಚಾರ್ಯರು ಈ ಕೃತಿಯನ್ನೇ ಕುಂಭಕೋಣೆಯಲ್ಲಿ ರಚಿಸಿರಬೇಕು[1]. ಇಂತಹುದೇ ಒಂದು ಸಂದರ್ಭದಲ್ಲಿ ಆಚಾರ್ಯರು ಬರೆದಿರುವ 'ಋಜುತ್ವ ವಿರೋಧಿಪರಿಮರ್ದನ' ಎಂಬ ಗ್ರಂಥದಲ್ಲಿ ಬಳಿತ್ಥಾದಿ ಶ್ರುತಿಗಳನ್ನು

---

1. ಇಲ್ಲಿಯ ಮೂಲದಲ್ಲಿ ಗ್ರಂಥವನ್ನು ಹೆಸರಿಸದೇ ಇದ್ದುದು ಆಶ್ಚರ್ಯವಾಗಿದೆ. ಆಚಾರ್ಯರು ಶ್ರೀವಾದಿರಾಜರ ಋಜುತ್ವ ಸಂಬಂಧಿಯಾಗಿ ಬರೆದಿರುವ ಗ್ರಂಥಗಳು ಮುಖ್ಯವಾಗಿ ಎರಡು(?) ಎಂಬುದಾಗಿ, (ಶ್ರೀಗುರುಗೋವಿಂದ ವಿಠಲದಾಸರು 'ಮೃತ್ತಿಕಾಗರ್ವನಿರ್ವಾಪಣೋಭಯಮಧ್ವಕಥೋಜ್ಜೀವನ' ಎಂಬುದೊಂದು ಗ್ರಂಥವನ್ನು ಆಚಾರ್ಯರು ಬರೆದಿರುತ್ತಾರೆಂಬುದಾಗಿ ಉಲ್ಲೇಖಿಸಿದ್ದಾರೆ. ಹರಿಭಕ್ತವಿಜಯ ಭಾಗ-1, ಪುಟ 224; ಮೈಸೂರಿನಲ್ಲಿ ಇತ್ತೀಚೆಗೆ ಅವರ ಮನೆಯಲ್ಲಿ ವಿಚಾರಿಸಿದಾಗ ಈ ಬಗ್ಗೆ ಯಾವ ಮಾಹಿತಿಯೂ ದೊರೆಯಲಿಲ್ಲ.) ಮೊದಲನೆಯದು 'ಋಜುತ್ವ ವಿರೋಧಿಕಪೋಲಚಪೇಟಿಕಾ ಹಾಗೂ ಎರಡನೆಯದು 'ಋಜುತ್ವವಿರೋಧಿ(ಪರಿ) ಮರ್ದನ'. ಕೃತ್ರಿಮ ಪುರಾಣ ದಹನದ ಸಂದರ್ಭದಲ್ಲಿ ಅದಕ್ಕೂ ಮೊದಲೇ ರಚಿತವಾಗಿರುವುದೇ ಋಜುತ್ವವಿರೋಧಿಕಪೋಲಚಪೇಟಿಕಾ. ಋಜುತ್ವವಿರೋಧಿ ಮರ್ದನ ಗ್ರಂಥವು 1884–85ರ ಸುಮಾರಿಗೆ ರಚಿತವಾಗಿದ್ದಿರಬೇಕೆಂದು ತಿಳಿಯಬಹುದಾಗಿದೆ. ಆಚಾರ್ಯರ ವಂಶೀಕರಲ್ಲಿ ಈವರೆಗೆ ಶೋಧಿಸಿದ ಗ್ರಂಥಗಳಲ್ಲಿ ಕೇವಲ ನಾಲ್ಕು ಪುಟಗಳಷ್ಟು ಋಜುತ್ವ

→

ವಾದಿರಾಜ ಗುರುವರ್ಯರ ಋಜುತ್ವ ಮಹಿಮಾ ಪರವಾಗಿ ಸಮರ್ಥವಾಗಿ ಅರ್ಥೈಸಲಾಗಿದೆ. 'ಮೃತ್ತಿಕಾ ಗರ್ವನಿರ್ವಾಪಣೋಭಯ' ಮತ್ತು 'ಮಧ್ವಕಥೋಜ್ಜೀವನ' ಎಂಬ ಗ್ರಂಥಗಳೂ ಸಹ ಆಚಾರ್ಯರ ಹೆಸರಿನಲ್ಲಿವೆಯೆಂದು ಶ್ರೀಗುರುಗೋವಿಂದವಿಠಲದಾಸರು ತಾವು ಬರೆದಿರುವ ಹರಿಭಕ್ತವಿಜಯ ಭಾಗ–1'ರಲ್ಲಿ ತಿಳಿಸುತ್ತಾರೆ. ಆದರೆ ಈ ಕೃತಿಗಳು ಈಗ ಉಪಲಬ್ಧವಿರುವುದಿಲ್ಲ.

ಅಬ್ಜಾರಣ್ಯಕ್ಕೆ ಉತ್ತರರೂಪವಾಗಿ 'ಋಜುತ್ವವಿರೋಧಿ ಕಪೋಲಚ ಪೇಟಿಕಾ' ಪೂರ್ಣಗೊಂಡ ನಂತರ ಜಂಬುಖಂಡಿ ಎಂಬ ಹೆಸರಿನ ಸಿಂಹ ನೇರವಾಗಿ ಸಿಂಹದ ಗುಹೆಗೇ ಹೋಗಿ ಗರ್ಜಿಸಿತು. ವಾದಿರಾಜರ ಋಜುತ್ವ ವಿರೋಧಿಗಳೇ ಹೆಚ್ಚು ವಾಸಿಸುತ್ತಿದ್ದ ಕುಂಭಕೋಣೆಯ ಮುಖ್ಯಬೀದಿಗೆ ಬಂದು ಆಚಾರ್ಯರು ತಾವು ತಂದಿದ್ದ ಜಾಂಗಟೆಯನ್ನು ಬಾರಿಸತೊಡಗಿದರು. ಹೀಗೆ ವೀರಾವೇಶದಿಂದ ಜಾಂಗಟೆಯನ್ನು ಬಾರಿಸುತ್ತಿದ್ದ ಆಚಾರ್ಯರನ್ನು ಕಂಡು ಕುಂಭಕೋಣೆಯ ಜನರೆಲ್ಲರೂ ಅವಾಕ್ಕಾದರೆ, ಆಚಾರ್ಯರ ಶಿಷ್ಯರಿಗೆ ತಮ್ಮ ಗುರುಗಳಲ್ಲಿ 'ರಾಜರ ಪ್ರಿಯದೂತರಾದ ಭೂತರಾಜ'ರ ಪ್ರತಿರೂಪವನ್ನೇ ನೋಡಿದಂತಾಯಿತು. 'ಸದ್ವೃಂದಂ ಮೋದಯಂತೀ ಗುರುವರವಿಹಿತಾ ಭಾತಿ ಸಾ ಜೈತ್ರಘಂಟಾ' ಎಂಬ ಪ್ರಥಮಾವಲಿಯ ಉಕ್ತಿಯಂತೆ ಜಾಂಗಟೆ ಆಚಾರ್ಯರೆಂದು ಪ್ರಸಿದ್ಧರಾದ ಆಚಾರ್ಯರ ಈ ಜಾಂಗಟೆಯ ಧ್ವನಿಯ ಅರ್ಥವನ್ನು ತಿಳಿದಿದ್ದ ಸಜ್ಜನವೃಂದ ಸಮ್ಮೋದಗೊಂಡಿತು. 'ಚಲತ ಚಲತ ತೂರ್ಣಂ ವಾದಿರಾಟ್ ದ್ವಿಟ್‌ಶೃಗಾಲಾಃ' ಎಂಬ ನುಡಿ ಮಾರ್ದನಿಸಿದಂತಾಗಿ ರಾಜರ ದ್ವೇಷಿಗಳೆಂಬ ನರಿಗಳೆಲ್ಲವೂ ಆತಂಕಗೊಂಡು ತಮ್ಮ ತಮ್ಮ ಮನೆಯ

---

→ ವಿರೋಧಿಕಪೋಲಚಪೇಟಿಕಾ ಗ್ರಂಥವು ಉಪಲಬ್ಧವಾಗಿದೆ. ಈಗಾಗಲೇ ಶ್ರೀಗುರುಗೋವಿಂದವಿಠಲದಾಸರು ಶ್ರೀಹರಿಭಕ್ತವಿಜಯ ಭಾಗ–1ರಲ್ಲಿ (ಪುಟ 294–296) ಈ ಗ್ರಂಥದ ಪ್ರಾರಂಭದ ಕೆಲವು ಭಾಗಗಳನ್ನು ಕೊಟ್ಟಿದ್ದಾರೆ.

– ಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ

ಸಂ: ಡಾ. ಗುರುರಾಜಾಚಾರ್ಯ ನಿಪ್ಪಾಣಿ. (ಪುಟ 55ರ ಅಡಿಟಿಪ್ಪಣಿ)

ಕಿಟಕಿ, ಬಾಗಿಲುಗಳ ಸಂದುಗಳ ಬಳಿ ನಿಂತು ಈ ದೃಶ್ಯವನ್ನು ಭಯಮಿಶ್ರಿತ ಕುತೂಹಲದಿಂದ ನೋಡತೊಡಗಿದವು.

ಸ್ವಲ್ಪ ಹೊತ್ತು ಜಾಂಗಟೆಯನ್ನು ಬಾರಿಸಿದ ನಂತರ ಆಚಾರ್ಯರು ಉಚ್ಚಸ್ವರದಲ್ಲಿ ಹೀಗೆ ಹೇಳತೊಡಗಿದರು.

"ಶ್ರೀಮದ್ವಾದಿರಾಜಪೂಜ್ಯಚರಣರ ಭಾವಿಸಮೀರತ್ವವನ್ನು ವಿರೋಧಿಸುವ, ಆಖ್ಯಾನದ ವಿರುದ್ಧ ವಿನಾಕಾರಣ ಅಪಲಾಪಮಾಡುವ ಮೃದ್ವೇಷಿಗಳೇ ಕೇಳಿರಿ! ಅಬ್ಜಾರಣ್ಯ ಎಂಬ ಕೃತಕಗ್ರಂಥಕ್ಕೆ ಉತ್ತರರೂಪವಾಗಿ 'ಋಜುತ್ವ ವಿರೋಧಿಕಪೋಲಚಪೇಟಿಕಾ' ಎಂಬ ಖಂಡನಗ್ರಂಥ ಸಿದ್ಧವಾಗಿದೆ. ಈ ಅಲ್ಪನ ಅಧಿಷ್ಠಾನದಲ್ಲಿ ನಿಂತು ರಾಜರ ಅಂತರ್ಯಾಮಿಯಾದ ಶ್ರೀಲಕ್ಷ್ಮೀಹಯಗ್ರೀವ ದೇವರೇ ಇದನ್ನು ಬರೆಸಿಕೊಂಡಿದ್ದಾರೆ. ಈ ಖಂಡನ ಕೃತಿಯನ್ನು ಪ್ರತಿಖಂಡಿಸುವ ಸಾಮರ್ಥ್ಯವುಳ್ಳವರು ಕುಂಭಕೋಣೆಯ ಸಾರಂಗಪಾಣಿ ದೇಗುಲದ ಬಳಿ ಬಂದು ತಮ್ಮ ವಾದವಿವಾದಗಳನ್ನು ಸುಸಂಸ್ಕೃತ ರೀತಿಯಲ್ಲಿ ಮಂಡಿಸಬಹುದು. ಇದೇ ಸಂದರ್ಭದಲ್ಲಿ ಅನಾವಶ್ಯಕವಾಗಿ ವಿಷಬೀಜವನ್ನು ಬಿತ್ತಿದ್ದ 'ಅಬ್ಜಾರಣ್ಯ'ವೆಂಬ ಕೃತಕ ಗ್ರಂಥವನ್ನು ಸಮಸ್ತ ಪುರಜನರ ಸಮಕ್ಷಮದಲ್ಲಿ ದಹಿಸಲಾಗುವುದು" ಎಂದು ಪಂಥಾಹ್ವಾನವನ್ನಿತ್ತರು[1].

ಮೈನವಿರೇಳಿಸುವ ಇಂತಹ ವೀರಗರ್ಜನೆಯನ್ನು ಅಲ್ಲಿಯವರೆಗೆ ಕುಂಭಕೋಣೆಯ ನಿವಾಸಿಗಳು ಕೇಳಿರಲಿಲ್ಲ. ಅವರೇ ಏಕೆ ಅಲ್ಲಿಯ ತನಕ ಇತಿಹಾಸದಲ್ಲಿಯೇ ಸತ್ಯಪ್ರತಿಪಾದನೆಗಾಗಿ ಜೀವದ ಹಂಗು ತೊರೆದು

---

1. ಅದೀರ್ಘಕಾಲದ್ವಿರಚಯ್ಯ ಖಂಡನಂ ಪುರಂ ಸಮಾಗಾದ್‌ಗರುಡಧ್ವಜಪ್ರಿಯಃ।
ತತಾಡ ದುಷ್ಪಂಡಿತಗರ್ವಪರ್ವತಪ್ರಭೇದವಜ್ರೋ ನಿಜಚೈತ್ರಘಂಟಿಕಾಮ್ ॥
ಪುರೇಽತ್ರ ಕೋವಾಸ್ತಿ ಪರಾಶರಾತ್ಮಭೂಕೃತೌ ಹಿ ನಿಕ್ಷೇಪಯಿತಾ ಸ್ವತಃ ಕೃತಮ್ ।
ತದೀಯಮೇತತ್‌ಕೃತಕಂ ಪ್ರಖಂಡಿತಂ ಸ್ಥಿತೇಷು ಸರ್ವೇಷ್ವಚಿರಾತ್‌ಪ್ರದಹ್ಯತೇ ॥
ಯದಸ್ತಿ ಶಕ್ತಿಃ ಪ್ರತಿಖಂಡನಾತ್ಮಿಕಾ ತದತ್ರಗೇಹೇ ವರಶಾರ್ಙ್ಗಧಾರಿಣಃ ।
ಭವಂತು ಸುಸ್ಥಾ ಸಕಲಾ ಮನೀಷಿಣೋ ಯತಂತು ಕಿಂಪೂರ್ವೋತ್ತರಪಕ್ಷಸಿದ್ಧಯೇ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ತೃತೀಯಾವಲಿ 15–17)

ಇಂತಹ ಕೆಚ್ಚನ್ನು ಪ್ರದರ್ಶಿಸಿದ ದಾಖಲೆಗಳಿರಲಿಲ್ಲ. ವಾದಿರಾಜರ ಭಕ್ತವೃಂದಕ್ಕೆ ಆಚಾರ್ಯರ ಈ ಗರ್ಜನೆ ಮಂಗಳಕರ ಅಮೃತಸೇಚನ ಮಾಡಿದಂತಾಗಿ ಹರ್ಷವುಕ್ಕಿಸಿದರೆ ರಾಜರ ದ್ವೇಷಿಗಳ ಪಾಲಿಗೆ ಎದೆಯಲ್ಲಿ ಶೂಲ ಇರಿದಂತಾಯಿತು.

ಹೇಳಿದ ಸಮಯಕ್ಕೆ ಸರಿಯಾಗಿ ಆಚಾರ್ಯರು ತಮ್ಮ ಶಿಷ್ಯವೃಂದದೊಡನೆ ಸಾರಂಗಪಾಣಿಯ ದೇವಾಲಯಕ್ಕೆ ತೆರಳಿ ಶ್ರೀಶನಿಗೆ ಪೊಡಮಟ್ಟು ಪ್ರಾರ್ಥಿಸಿದರು. ನಂತರ ದೇಗುಲದ ವಿಶಾಲವಾದ ಹೊರಾಂಗಣಕ್ಕೆ ಬಂದು ಹರಿಗುರುಗಳ ಸ್ಮರಣೆಯನ್ನು ಮಾಡುತ್ತಾ ಅಲ್ಲಿ ನೆರೆದಿದ್ದ ಎಲ್ಲಾ ಜನರಿಗೂ ಬಾಗಿ ನಮಸ್ಕರಿಸಿದರು. ಪ್ರಕಾಂಡಪಂಡಿತರಾಗಿದ್ದರೂ ವಿನಯಾದಿಸದ್ಗುಣಗಳಿಂದ ಶೋಭಿಸುವ ಆಚಾರ್ಯರ ತೇಜಃಪುಂಜ ವ್ಯಕ್ತಿತ್ವವನ್ನು ಕಂಡು ಸಭಿಕರು ಮೆಚ್ಚುಗೆಯ ದೃಷ್ಟಿಯಿಂದ ನೋಡತೊಡಗಿದರು. ಸ್ವಲ್ಪ ಸಮಯದ ಹಿಂದೆ ಜಾಂಗಟೆಯನ್ನು ಬಾರಿಸುತ್ತಾ ದುರಾಗ್ರಹಿಗಳ ಎದುರಿಗೆ ಸಿಂಹದಂತೆ ಗರ್ಜಿಸಿದ ಆಚಾರ್ಯರು ಇವರೇ! ಎಂದು ಇಡೀ ಸಭೆ ಆಶ್ಚರ್ಯಪಟ್ಟಿತು. ಎಷ್ಟು ಹೊತ್ತು ನಿರೀಕ್ಷಿಸಿದರೂ ಆಚಾರ್ಯರ ಪಂಥಾಹ್ವಾನವನ್ನು ಸ್ವೀಕರಿಸಿ ಅವರ 'ಋಜುತ್ವವಿರೋಧಿಕಪೋಲಚಪೇಟಿಕಾ' ಕೃತಿಯನ್ನು ಖಂಡಿಸುವಂತಹ ಅಥವಾ 'ಅಬ್ಜಾರಣ್ಯ'ವನ್ನು ಪುಷ್ಟೀಕರಿಸುವಂತಹ ಸಮರ್ಥ ವಿದ್ವಾಂಸರೊಬ್ಬರೂ ಮುಂದೆ ಬರಲಿಲ್ಲ. ಆಗ ಆಚಾರ್ಯರು ಅಲ್ಲಿ ನೆರೆದಿದ್ದ ಪುರಜನರಿಗೆ ಸಮಸ್ತ ವಿಷಯವನ್ನೂ ಅರಿಕೆ ಮಾಡಿಕೊಂಡು ತಾವು ರಚಿಸಿದ್ದ ಕೃತಿಯನ್ನು ಸಾದ್ಯಂತವಾಗಿ ಪ್ರವಚನ ಮಾಡಿದರು. "ವಾದಿರಾಜರ ಋಜುತ್ವೋಪಾಸನೆ ಆರಾಧ್ಯ ವಿಷಯವೇ ಹೊರತು ಹಾದಿರಂಪಾಗುವ ಸರಕಲ್ಲ. ಈ ಕುರಿತು ಏನೇ ವಾದೋಪವಾದಗಳು, ವಾಕ್ಯಾರ್ಥಗಳು ಜ್ಞಾತುಮಿಚ್ಛಾ ಮರ್ಯಾದೆಗೆ ಒಳಪಟ್ಟು ನಡೆದರೆ ಮಾತ್ರ ಅದಕ್ಕೊಂದು ಶೋಭೆ ಬಂದೀತು. ಇಲ್ಲದಿದ್ದರೆ ದ್ವೇಷಾಸೂಯೆಗಳಿಗೆ ಕಾರಣವಾಗಿ ಇಂತಹ ವಿಕೃತಿಗಳನ್ನು ಸೃಷ್ಟಿಸುತ್ತದೆ. 'ಅಬ್ಜಾರಣ್ಯ'ವೆಂಬ ಕೃತ್ರಿಮ ಗ್ರಂಥದ ಮೂಲಕ ನಮ್ಮ ಗುರುಗಳನ್ನು

ಹಾಗೂ ನಮ್ಮ 'ಋಜುವಿಶ್ವಾಸ'ವನ್ನು ನಿಂದನೆ ಮಾಡಿದ್ದರಿಂದ, ಹಾಗೂ ವಿನಾಕಾರಣ ಗದ್ದಲವೆಬ್ಬಿಸಿದ್ದರಿಂದ ನಾವು ಅನಿವಾರ್ಯವಾಗಿ ಇಂತಹ ಸಾಹಸ ಕಾರ್ಯ ಮಾಡಬೇಕಾಯಿತು" ಎಂದು ಆಚಾರ್ಯರು ತಮ್ಮ ಅಂತರಂಗದ ಭಾವನೆಗಳನ್ನು ಜನರೆದುರಿಗೆ ಪ್ರಾಮಾಣಿಕವಾಗಿ ತೆರೆದಿಟ್ಟರು. ಅಲ್ಲಿದ್ದ ಸಭಿಕವೃಂದ ಆಚಾರ್ಯರ ಪಾರದರ್ಶಿಕ ನಡೆ ಮತ್ತು ಪ್ರಾಸಾದಿಕ ನುಡಿಗಳಲ್ಲಿ ಅಡಗಿದ್ದ ಸತ್ಯವನ್ನು ಕಂಡುಕೊಂಡು ಹರ್ಷೋದ್ಗಾರ ಮಾಡಿತು. ನಂತರ ಆಚಾರ್ಯರು ತಮ್ಮ ಪ್ರತಿಜ್ಞಾ ವಿಧಿಯಂತೆ ಎಲ್ಲರ ಸಮಕ್ಷಮದಲ್ಲಿ ಕೃತಕ ಗ್ರಂಥವಾದ ಅಬ್ಜಾರಣ್ಯ ಮಹಾತ್ಮ್ಯೆಯನ್ನು ದಹನ ಮಾಡಿ ಅದರ ಭಸ್ಮವನ್ನು ಗುರುಗಳ ಪಾದಗಳಿಗೆ ಅರ್ಪಿಸಲು ಸಂಗ್ರಹಿಸಿಕೊಂಡರು.

ಇದನ್ನೆಲ್ಲಾ ಮರೆಯಿಂದ ನೋಡುತ್ತಿದ್ದ, ಬೌದ್ಧಿಕವಾಗಿ ಆಚಾರ್ಯರನ್ನು ಎದುರಿಸಲಾಗದ, ಅವರ ಕೆಲವು ವಿರೋಧಿಗಳು ದುಷ್ಟರಿಂದ ಪ್ರಚೋದಿತರಾಗಿ ಹಠಾತ್ತನೆ ಆಚಾರ್ಯರ ಮೇಲೆ ದೈಹಿಕ ದಾಳಿ ಮಾಡಲು ಮುಂದಾದರು. ಆದರೆ ಭೂತರಾಜರ ವಿಶೇಷ ಕೃಪೆಗೆ ಪಾತ್ರರಾಗಿದ್ದ ಆಚಾರ್ಯರಿಗೆ ಭಯವೆಲ್ಲಿಯದು? ಗುರುಗಳ ಸೂಚನೆಯಂತೆ ಅವರ ಶಿಷ್ಯರಲ್ಲೊಬ್ಬರು ಏಕಾಂಗಿಯಾಗಿ ಭೂತರಾಜರ ಕ್ಷಣಾವೇಶದಿಂದ ಎಲ್ಲ ದುರ್ಮಾರ್ಗಿಗಳನ್ನೂ ಸಮರ್ಥವಾಗಿ ಹಿಮ್ಮೆಟ್ಟಿಸಿದರು. ಕೌರವ ಸೈನ್ಯವನ್ನು ಸದೆಬಡಿದ ಧನಂಜಯನಂತೆ ಶೋಭಿಸಿದ ಅವರ ಆಟೋಪಕ್ಕೆ ರಾಜರ ಮೃದ್ವೇಷಿಗಳೆಲ್ಲರೂ ಅಲ್ಲಿಂದ ಪಲಾಯನ ಮಾಡಿದರು. ಇದನ್ನೆಲ್ಲಾ ನೋಡುತ್ತಿದ್ದ ಸಭೆ ಮತ್ತೊಮ್ಮೆ ಹರ್ಷೋದ್ಗಾರಮಾಡಿ ಆಚಾರ್ಯರಿಗೆ ಜಯಕಾರ ಹಾಕಿತು[1].

---

1. ಸಮೀಕ್ಷ್ಯ ತಾನಾಹ ಸಮೀಪಸಂಸ್ಥಿತಂ ಸ್ವಕೀಯಶಿಷ್ಯಂ ರಿಪುವಾರಣಕ್ಷಮಮ್ ।
ನಿವಾರಯಾಶು ತ್ವಮಿತಿ ಪ್ರಚೋದಿತಃ ಕರೇ ಮಹಾಂತಂ ಮುಸಲಂ ದಧಾರ ಹ ॥
ಸ ಭೂತರಾಜಂ ಭವದಿಂದುಧಾರಿಣಂ ಸ್ಮರನ್ ತದೀಪತ್ ಕೃಪಯಾವಲೋಕಿತಃ ।
ಸಮಸ್ತಮೃದ್ವೇಷಿಮದಾಪನೋದನೇ ಬಭೂವಶಕ್ತೋ ಮಹತಾ ಮುದಂ ದದನ್ ॥

→

ಇದಾದ ನಂತರ ಆಚಾರ್ಯರು ತಮ್ಮ ಶಿಷ್ಯರೊಡಗೂಡಿ ಅನ್ನೋದಕಗಳನ್ನು ತ್ಯಜಿಸಿ ಪರಿತಪಿಸುತ್ತಿದ್ದ ರಘುಪ್ರವೀರರ ಸನ್ನಿಧಿಗೆ ಬಂದರು. ಆ ಹೊತ್ತಿಗೆ ಶ್ರೀಗಳವರಿಗೆ ತಮ್ಮ ಕೆಲವು ಶಿಷ್ಯರ ಮೂಲಕ ಆಚಾರ್ಯರು ನಡೆಸಿದ ಸಾಹಸ ಕಾರ್ಯಗಳು ವಿದಿತವಾಗಿತ್ತು. ಉಪವಾಸದಿಂದ ಬಳಲಿದ್ದರೂ ಶ್ರೀಗಳವರು ಉತ್ಸಾಹಭರಿತವಾಗಿ ಎದ್ದು ಆಚಾರ್ಯರನ್ನು ಎದುರುಗೊಂಡರು. ಆಚಾರ್ಯರು ಬಂದವರೇ ಗುರುಗಳಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ ತಾವು ತಂದಿದ್ದ ಕೃತಕ ಗ್ರಂಥದ ಭಸ್ಮವನ್ನು ಅವರ ಪಾದದಲ್ಲಿ ಸಮರ್ಪಿಸಿದರು.

ಇದನ್ನು ನೋಡಿ 'ಅಭಿನವ ವೃಂದಾವನಾಚಾರ್ಯ'ರಂತೆ ಶೋಭಿಸುತ್ತಿದ್ದ ರಘುಪ್ರವೀರರಿಗೆ ಮಹದಾನಂದವಾಯಿತು. ಜಂಬುಖಂಡಿ ಆಚಾರ್ಯರ ಧೈರ್ಯ ಸಾಹಸಗಳನ್ನು ಹೃತ್ಪೂರ್ವಕವಾಗಿ ಶ್ಲಾಘಿಸಿದ ಶ್ರೀಗಳವರು ಆ ದಿವಸ 'ರಾಜರ ಋಜುತ್ವೋತ್ಕರ್ಷ ಸ್ಥಾಪನೆಯ ಮಂಗಳ ಮಹೋತ್ಸವವನ್ನು' ಆಚರಿಸಲು ಸೂಚಿಸಿದರು. ಹಾಗಾಗಿ ಅಂದಿನ ಸಂಸ್ಥಾನ ಪೂಜೆಯು ವಿಶೇಷ ಸಂಭ್ರಮದಿಂದ ಕೂಡಿತ್ತು. ಹಲವಾರು ವಿಧದ ಭಕ್ಷ್ಯಭೋಜ್ಯಗಳನ್ನು ಶ್ರೀಗಳವರು ತಮ್ಮ ಅರ್ಚಾಮೂರ್ತಿಗಳಿಗೆ ಸಮರ್ಪಿಸಿದರು. ನಂತರ ನಡೆದ ಮೃಷ್ಟಾನ್ನ ಭೋಜನವಂತೂ ಅಮೃತದ ಸವಿಯನ್ನೂ ಹಿಮ್ಮೆಟ್ಟಿಸಿತ್ತು.[1]

ಹೀಗೆ ಆಚಾರ್ಯರ ಪ್ರತಿಯೊಂದು ಕ್ರಿಯೆಯೂ ಸಹ ವಾದಿರಾಜರ

---

→ ಸ ಸಂಚರನ್ ಕೌರವಸೈನ್ಯಮಂಡಲೇ ಧನಂಜಯಃ ಪ್ರಾಗಿವ ಶಾತ್ರವಂ ಜಯಃ।
ಭಯಾದ್‌ದ್ರವಂತಂ ಗುರುರಾಜಮೃತ್ತಿಕಾ ವಿಪಕ್ಷಸಂಘಂ ತ್ವಜಯದ್‌ಗುರೂದಿತಃ॥
– ಶ್ರೀಸುಧಾಕರಗುರುಗುಣರತ್ನಮಾಲಾ (ತೃತೀಯಾವಲಿ 22–24)

1. ಇತಿ ಸ್ವಸೇವಾಸುನಿವಿಷ್ಟಚೇತಸಾ ಜಯೀ ಸ್ವಶಿಷ್ಯೇಣ ಸುಧಾಕರಾಹ್ವಯಃ।
ಗುರೂರ್ಗೃಹಿತ್ವಾ ಸಮವಾಪ ದುಷ್ಕವಿಪ್ರಜಲ್ಪಿತಗ್ರಂಥವಿಭೂತಿಮಂಜಸಾ॥
ಸಮರ್ಪಯಾಮಾಸ ಸ ಭೀಮಸೇತುಸನ್ಮಠಾಧಿಪಶ್ರೀಚರಣೇಷು ಭಕ್ತಿಮಾನ್।
ತದೈವ ದೇವಾರ್ಚನಪೂರ್ವಕಂ ಕೃತಂ ಸುಭೋಜನಂ ತೈರ್ಗುರುಭಿರ್ಮಠಾಧಿಪೈಃ॥
– ಶ್ರೀಸುಧಾಕರಗುರುಗುಣರತ್ನಮಾಲಾ (ತೃತೀಯಾವಲಿ 25–26)

ಭಕ್ತವೃಂದಕ್ಕೆ ಸಂತೋಷವನ್ನುಂಟು ಮಾಡುತ್ತಿದ್ದವು. ಆದರೆ ಭಾವಿಪ್ರಾಣನಲ್ಲಿ ದುರಾಗ್ರಹವುಳ್ಳವರಿಗೆ ಗಂಟಲಗಾಣದಂತೆ ತ್ರಾಸಕರವಾಗಿದ್ದವು. ರಾಜರ ಋಜುಮಹಿಮೆಗಳನ್ನು ತಿರಸ್ಕರಿಸುವ ಮದ್ದಾನೆಗಳ ಕುಂಭಸ್ಥಳವನ್ನು ಸೀಳುವ ಸಿಂಹದಂತೆ ಆಚಾರ್ಯರು ವಿಜೃಂಭಿಸುತ್ತಿದ್ದರಿಂದಲೇ ಶ್ರೀಸುಧಾಕರಗುರುಗುಣರತ್ನಮಾಲಾಕಾರರು :

**ಚಲತ ಚಲತ ತೂರ್ಣಂ ವಾದಿರಾಟ್‌ದ್ವಿಟ್‌ಶೃಗಾಲಾಃ**
**ನಿಕಟಮುಪಗತೋಽಯಂ ಜಂಬುಖಂಡ್ಯಾರ್ಯಸಿಂಹಃ।**
**ಸ ಹಿ ಖರನಖರಾಭೈರ್ದಾರಯನ್ ದುಷ್ಕವೀಭಾನ್**
**ಲಸತಿ ನಿಜಸುವಾಕ್ಯೈರ್ನೃಕ್ಷಿ ಕಿಂ ಸುಪ್ರತೀತಃ॥**

'ವಾದಿರಾಜರ ದ್ವೇಷಿಗಳೆಂಬ ನರಿಗಳೇ, ಈ ಕೂಡಲೇ ಇಲ್ಲಿಂದ ತೊಲಗಿರಿ, ಏಕೆಂದರೆ ಜಂಬುಖಂಡಿ ಎಂಬ ಹೆಸರಿನ ಸಿಂಹವು ತನ್ನ ತೀಕ್ಷ್ಣವಾದ ನಖಸದೃಶವಾದ ವಾಕ್ಯಗಳಿಂದ ರಾಜರ ಋಜುತ್ವ ವಿಷಯದಲ್ಲಿ ದುರಾಗ್ರಹವುಳ್ಳ ದುಷ್ಟ ಕವಿಗಳೆಂಬ ಆನೆಗಳ ಕುಂಭ ಸ್ಥಳವನ್ನು ಸೀಳುತ್ತಾ ಬರುತ್ತಿದೆ. ಪ್ರಖ್ಯಾತವಾದ ಈ ಅಪೂರ್ವ ಕೇಸರಿಯನ್ನು ನೀವು ಕಂಡಿಲ್ಲವೇನು? ಆದ್ದರಿಂದ ತ್ವರಿತವಾಗಿ ಪಲಾಯನ ಮಾಡಿರಿ'. ಎಂದು ಪ್ರತಿಯೊಂದು ಅಧ್ಯಾಯದ ಅಂತ್ಯದಲ್ಲಿಯೂ ಮಾರ್ಮಿಕವಾಗಿ ಕರೆ ನೀಡುತ್ತಾರೆ.

## ಕೊಯಮತ್ತೂರಿನಲ್ಲಿ ಕೋಲಾಹಲ

ಆಚಾರ್ಯರು ಸಂಚಾರತ್ವೇನ ಕೊಯಮತ್ತೂರಿಗೆ ಬಂದಿದ್ದಾಗಲೂ ಇದೇ ತರಹ ಇನ್ನೊಂದು ಪ್ರಸಂಗ ನಡೆಯಿತು. ಅಲ್ಲಿಯೂ ಸಹ ಜಂಬುಖಂಡಿ ಆಚಾರ್ಯರು 'ಋಜುತ್ವವಿರೋಧಿಕಪೋಲಚಪೇಟಿಕಾ' ಗ್ರಂಥವನ್ನು ವ್ಯಾಖ್ಯಾನ ಮಾಡಿದರಲ್ಲದೇ ಎಲ್ಲರ ಸಮ್ಮುಖದಲ್ಲಿ 'ಅಬ್ಜಾರಣ್ಯ' ಕೃತಿಯನ್ನು ಕರ್ಪೂರದಿಂದ ದಹಿಸಿದರು. ಇದರಿಂದ ನಗರದಲ್ಲಿ ಬಿಗುವಿನ ವಾತಾವರಣ ನಿರ್ಮಾಣವಾಗಿ ದೊಡ್ಡ ಕೋಲಾಹಲವೇ ಉಂಟಾಯಿತು. ಊರಿನ ಪ್ರಮುಖರಾದ ಶ್ರೀ ಅಪ್ಪಾಜಿ

ರಾಯರು ಮಧ್ಯಸ್ಥಿಕೆ ವಹಿಸಿ ಎಲ್ಲರನ್ನೂ ಸಮಾಧಾನ ಪಡಿಸಿದರಲ್ಲದೇ ತಮ್ಮ ಮನೆಯಲ್ಲಿ ಉಭಯ ಪಕ್ಷದವರನ್ನೂ ಸಭೆ ಸೇರಿಸಿ ವಿಚಾರ ವಿನಿಮಯಕ್ಕೆ ಅನುವು ಮಾಡಿಕೊಟ್ಟರು. ಆ ಸಂದರ್ಭದಲ್ಲಿ 'ಅಬ್ಜಾರಣ್ಯ'ವನ್ನು ಪುಷ್ಟೀಕರಿಸಿದ ಶ್ರೀಹನುಮಂತಾಚಾರ್ಯ ಹಾಗೂ ಅದನ್ನು ವಿರೋಧಿಸಿದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ನಡುವೆ ನಡೆದ ಸಂವಾದದ ಆಂಗ್ಲ ಭಾಷಾ ದಾಖಲೆಯನ್ನು ಶ್ರೀಗುರುಗೋವಿಂದದಾಸರು ತಾವು ರಚಿಸಿರುವ ಹರಿಭಕ್ತಿ ವಿಜಯ – ಭಾಗ 1ರಲ್ಲಿ ಹೀಗೆ ನೀಡಿರುತ್ತಾರೆ.

## Debate between Hanumantha Chariar and Jamacundi Vathiraja Chariar

In the town of Coimbatore, on the night of the 12th November 1876 an audience was held in the house of Appaji Rao to hear the arguements as to whether the Purana known as "Abjaranium" is genuine or concocted of late which appears to relate to the essecnce and nature of the famous Vathiraja Swami and Viswapriya Tirtha.

**Hanumantha Chariar :** To prove that Abjaranya is genuine.

**Jamcundi Vathiraja Chariar :** To prove that it is concocted but not genuine.

**H. Achar :** It is genuine. It consists of five chapters. It speaks of one man having four desciples and says that they are demons. I am not able to describe them, but as you have disputed its truthfulness you are welcome to answer yourself.

**V. Achar :** Very well. It has five chapters, three genuine and two concocted, because the subject matter of the

latter two chapters four and five is contrary to that treated of in the three former chapters.

**H. Achar :** Vathiraja Swami specified in four and five is different from the famous and well known Vathiraja Swamy, and Vishwapriya Tirtha spoken of there in is quite different from the one whom we have seen. Those treated of in the said Purana are internal beings, while those latter mentioned are reverential and godly.

**V. Achar :** If you admit that Vathiraja Swami and Vishwapriya tirtha treated of in chapter four and five are inferior beings and ill natured, why do you dispute their destruction.

**H. Achar :** Never mind what it treats of. It is sin to destroy it.

**V. Achar :** Why?

**H. Achar :** As it treats of fact it should not have been destroyed.

**V. Achar :** No, it does not speak of facts. It speaks of things, which never existed. The story has no foundation. As it tends to mislead (even admitting the characters treated of threin are different from those of the namesakes) the people that may come across the said chapters regarding the nature of the latter (genuine and famous Vathiraja Swami and Vishwapriya Tirtha) it deserves of destruction and so I have destroyed it.

**H. Achar :** Silence then. One Venkataramanachar asked Vathirajachar to produce the chapters 1, 2, and 3.

**V.Achar :** I can produce them, bu I have not got them with me in whole, but I have quoted from them in my criticism, if you like I shall read them. But on being asked to produce the very book, he held that as the genuineness of the three said chapters is admitted on both sides, the production there of was unnecessary.

**H.Achar :** Spoke irrelevant things, the audience dispersed.

Written by : **B. Madurao,** Head Clerk.
Sd.() **Sri Gururaja** in Sanskrit
(Printed at the Belgaum Samachar Press)

**ವಿರೋಧೀಯ ರಾಜಸ್ಯ ವಾದಿರನ್ಯೋ ವಿಚಾರ್ಯತಾಮ್ ।**

## ಬಹಿಷ್ಕಾರದ ಬಿಸಿ

ವಾದಿರಾಜರ ಋಜುತ್ವ ಪ್ರತಿಪಾದನೆಯನ್ನು ಒಂದು ಹವ್ಯಾಸವಾಗಿ ಪರಿಗಣಿಸದೆ ಅನವರತಗೈಯುವ ಶ್ವಾಸೋಚ್ಛ್ವಾಸದಂತೆ ಎಣಿಸಿ ತಮ್ಮ ಬಾಳಿನ ಪವಿತ್ರ ಮಂತ್ರವಾಗಿರಿಸಿಕೊಂಡಿದ್ದ ಶ್ರೀಜಂಬುಖಂಡಿ ಆಚಾರ್ಯರು ತಮ್ಮ ಜೀವಿತದಲ್ಲಿ ಹಲವಾರು ಕಠಿಣತರ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಅದರಲ್ಲಿ ತಮ್ಮ ಮಠದ ಪೀಠಾಧಿಪತಿಗಳ ಕೆಂಗಣ್ಣಿಗೆ ಗುರಿಯಾಗಿ ಬಹಿಷ್ಕಾರದ ಬಿಸಿಯನ್ನು ಅನುಭವಿಸಿದ್ದೂ ಒಂದು. ಜಿಡ್ಡುಗಟ್ಟಿದ ಅಂದಿನ ಮಠೀಯಶಾಠ್ಯವನ್ನು ಬಿಂಬಿಸುವ ಈ ಸಂಗತಿ ತಾತ್ತ್ವಿಕ ಸಂಘರ್ಷಕ್ಕಿಂತ ಪೂರ್ವಾಗ್ರಹಪೀಡಿತ ವೈಯುಕ್ತಿಕ ದ್ವೇಷಾಸೂಯೆಗಳಿಗೆ ಕಾರಣವಾದದ್ದು ಮತ್ತೊಂದು ದುರಂತ.

ಮಾಧ್ವ ಸಂಪ್ರದಾಯದ ಬಹುತೇಕ ಎಲ್ಲಾ ಮಠಗಳೂ ವಾದಿರಾಜರ ಋಜುತ್ವವನ್ನು ಒಪ್ಪಿಕೊಂಡಿದ್ದು ಈ ಬಗ್ಗೆ ಎಲ್ಲಿಯೂ ಪ್ರತಿರೋಧ

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೂ ಇರಲಿಲ್ಲ[1]. ಆದರೆ ಕ್ರಿ.ಶ. 1850ರ ನಂತರ ಅಪಸ್ವರ ಕೇಳಿಬರತೊಡಗಿತ್ತು. ಉತ್ತರಾದಿ ಮಠದ ಪೀಠದಲ್ಲಿಯೂ ಸಹ 1879ರವರೆಗೆ ಈ ಕುರಿತು ಮಿಕ್ಕ ಮಠ ಗಳಲ್ಲಿದ್ದಂತೆಯೇ ವಿಶ್ವಾಸವಿದ್ದ ಹಾಗೆ ತೋರುತ್ತದೆ ಎಂದು ಡಾ॥

---

1. "ವಾದಿರಾಜ ಸ್ವಾಮಿಗಳು ಋಜುಗಳೆಂಬಲ್ಲಿ ಬ್ರಹ್ಮಾಂಡ ಪುರಾಣವುಂಟೆಂದು ವಿಜಯದಾಸರು ಹೇಳಿದರು. ವಾಮನ, ಪಾದ್ಮ, ಬ್ರಹ್ಮವೈವರ್ತ, ಬೃಹನ್ನಾರದೀಯ, ಸ್ಕಾಂದ, ಋಕ್ಸಂಹಿತೆಗಳ ವಚನಗಳೂ ಉಂಟೆಂದು 1645ರಲ್ಲಿಯೇ ಶ್ರೀವೇದನಿಧಿಗಳ ಆಜ್ಞೆಯಿಂದ ರಚಿತವಾದ ವಾದಿರಾಜ ಗುರುವರ ಚರಿತಾಮೃತ ಗ್ರಂಥದಲ್ಲಿಯೇ ಕಂಡಿದೆ. ಗುರುರಾಜರು ಋಜುಗಳೆಂದು ಶ್ರೀವೇದವೇದ್ಯರೇ 1600ರಲ್ಲಿ ತಿಳಿಸಿ ಹಾಗೆ ಪೂಜಿಸಿದರು. ಗುರುರಾಜರೇ ಆಖ್ಯಾನವನ್ನು ಪ್ರಕಾಶಪಡಿಸಿ ಕಲ್ಲಿನಲ್ಲಿಯೂ ಕೆಲವು ಶ್ಲೋಕಗಳನ್ನು ಕೊರೆಸಿ ವೇದನಿಧಿಗಳ ಮೂಲಕ 1640ರಲ್ಲೇ ಸ್ಥಾಪನೆ ಮಾಡಿಸಿದ್ದಾರೆ. ಆಗ ಯಾವ ಪಂಡಿತರೂ ಏನೂ ಹೇಳಲಿಲ್ಲ. ಅನೇಕರು ಅನುಮೋದಿಸಿಯೂ ಬಿಟ್ಟರು. ಹಾಗೇ ಇನ್ನೂರೈವತ್ತು ವರ್ಷಗಳಾದವು".

– "ವ್ಯಾಸರಾಜ ಮಠದ ಗೌಡಗೆರೆ ವೆಂಕಟರಮಣಾಚಾರ್ಯರು ಪ್ರಸಿದ್ಧ ಪಂಡಿತರು. ಅವರ ತಂದೆಗಳಾದ ಗೌಡಗೆರೆ ವಾಸುದೇವಾಚಾರ್ಯರು ಕವಿಗಳೂ, ಚತುಃಶಾಸ್ತ್ರ ಜ್ಞಾನಿಗಳೂ ಆಗಿದ್ದವರು. ಅವರು ಶ್ರೀ ಸತ್ಯವೀರರ ಕಾಲದವರೇ. ಅವರು ಮಾಡಿರುವ ಐವತ್ತು ಶ್ಲೋಕದ ಗುರುರಾಜಸ್ತವನದಲ್ಲಿ ವಾದಿರಾಜರು ಋಜುಗಳೆಂದೇ ಒಪ್ಪಿದ್ದಾರೆ.

**'ಅಜಪದಮುಪರಿಷ್ಟಾದ್ಧಾತುಕಾಮೋ ಹಯಾಸ್ಯೋ**
**ಯತಿವರ ಬಹುಭಾರದ್ಭಾಸಮಾನಃ।**
**ವಸತಿ ವದನಮಧ್ಯೇ ವಾದಿರಾಜಸ್ಯ ದಿವ್ಯೇ**
**ಸರಳ ಸರಸಕಾವ್ಯಾರಂಭಲಕ್ಷ್ಮೀಸಮೇತಃ॥'**

ಎಂದು ಕೊಂಡಾಡಿದ್ದಾರೆ.

ಯಲತ್ತೂರು ಸೇತುಮಾಧವಾಚಾರ್ಯಾದಿ ಪಂಡಿತರು ಶ್ರೀಸತ್ಯವೀರರ ಕಾಲದಲ್ಲೇ ಅವರ ನಿಲುವನ್ನು ಖಂಡಿಸಿ ಆಖ್ಯಾನ ಪ್ರಾಮಾಣ್ಯ ಸಮರ್ಥಿಸಿ ಪತ್ರಿಕೆಗಳನ್ನು ಪ್ರಕಟಿಸಿದ್ದಾರೆ.

– **ಶ್ರೀಮದ್ವಾದಿರಾಜ ಋಜುತ್ವ ಸಿದ್ಧಾಂತ**

ಲೇ : ಶ್ರೀ ಹೆಚ್. ಸುಬ್ಬರಾವ್, ಮೈಸೂರು.

ಬಿ.ಎನ್.ಕೆ. ಶರ್ಮ ಅವರು ಅಭಿಪ್ರಾಯಪಡುತ್ತಾರೆ. ಹಿಂದೆಯೇ ತಿಳಿಸಿದಂತೆ ಶ್ರೀಮಠದ ಯತಿಶ್ರೇಷ್ಠರಲ್ಲಿ ಒಬ್ಬರೆಂದು ಪ್ರಖ್ಯಾತರಾದ ಶ್ರೀಸತ್ಯಧರ್ಮತೀರ್ಥರು (1797–1830) ಶ್ರೀವಾದಿರಾಜರಲ್ಲಿ ಅಪರಿಮಿತ ಭಕ್ತಿಯನ್ನು ಹೊಂದಿದ್ದರೆಂಬುದಕ್ಕೆ ಪ್ರೌಢ ಪದಪ್ರಬಂಧದಲ್ಲಿ ಅವರು ರಚಿಸಿರುವ ಶ್ರೀವಾದಿರಾಜಸ್ತೋತ್ರವೇ ಸಾಕ್ಷಿಯಾಗಿದೆ. ಈ ಸ್ತೋತ್ರದಲ್ಲಿ ಬರುವ 'ಸರ್ವಂ ಸರ್ವಂ ಸಹಾಯಾಮಸಮಸಮ ಇತಿ ಶ್ರೀಮತಾಂ ಸಾರ್ವಭೌಮೇ', 'ಚಕ್ರೀ ಸ ತ್ರಿಕ್ರಮೋऽತೋऽನುಮತಮನುಮನು ಶ್ರೀಮತಾಪೂಜನೇನ । ಸಂಬದ್ಧಾ ಯಸ್ಯ ಬದ್ಧೋऽವಸದವತು ಸದಾ ದಾಸದಾಸಂ ಸ ವಾದೀಟ್', ಎಂಬುದರಲ್ಲಿ ಶ್ರೀಗಳವರು ವಾದಿರಾಜರನ್ನು ಅಸಮ ಶಬ್ದವಾಚ್ಯರಾದ ಮುಖ್ಯ ಪ್ರಾಣದೇವರಿಗೆ ಸಮೀಕರಿಸುವರಲ್ಲದೇ ದ್ವಾಪರದಲ್ಲಿ ರುಕ್ಮಿಣೀ ಕೃಷ್ಣರಕಲ್ಯಾಣಕ್ಕೆ ನೆರವಾದ ವಿಪ್ರನಾಗಿ, ನಂತರ ಕಲಿಯುಗದಲ್ಲಿ ತ್ರಿವಿಕ್ರಮಾತ್ಮಕ ಕೃಷ್ಣನನ್ನು ಸೋದಾ ಕ್ಷೇತ್ರದಲ್ಲಿ ಪ್ರತಿಷ್ಠಿಸುವುದರ ಮೂಲಕ ರಾಜರು ತಮ್ಮ ಭಾವಿವಿರಿಂಚತ್ವವನ್ನು ನಿರೂಪಿಸುವರೆಂದು ಆ ಸ್ತೋತ್ರಕ್ಕೆ ವ್ಯಾಖ್ಯಾನವನ್ನು ಬರೆದಿರುವ ಪಂಡಿತ ಆತ್ಮಕೂರು ಆನಂದತೀರ್ಥಾಚಾರ್ಯರು ಸ್ಪಷ್ಟ ಅಭಿಪ್ರಾಯಪಡುತ್ತಾರೆ. ವಾದಿರಾಜರ ಋಜು ಮಹಿಮೆಗಳಲ್ಲಿ ದಾರ್ಢ್ಯ ಹೊಂದಿದ್ದ ಶ್ರೀಗಳವರು ಆಖ್ಯಾನೋಕ್ತ ವ್ಯಕ್ತಿಗಳೆಂಬ ಹೇಳಿಕೆಯೂ ಇದೆ[1]. 1872ರಿಂದ

---

1. 'ರುದ್ರಾಂಶರೆಂದು ಖ್ಯಾತ ಮಹಿಮರಾದ ಶ್ರೀಸತ್ಯಧರ್ಮತೀರ್ಥರು ಭಾಗೀರಥಿಯನ್ನು ಪ್ರತ್ಯಕ್ಷೀಕರಿಸಿಕೊಂಡವರು. ಗುರುಗಳು ಶ್ರೀವಾದಿರಾಜರ ಋಜುಮಹಿಮಾ ಬೋಧಕವಾದ 'ಶ್ರೀವಾದಿರಾಜ ಸ್ತೋತ್ರ'ವನ್ನು ಬರೆದಿದ್ದಾರೆ. ಶ್ರೀರಾಜರಿಗೆ ಭಾವಿಸಮೀರತ್ವವನ್ನು ಪ್ರೌಢವಾದ ಸೊಗಸಾದ ಶೈಲಿಯಲ್ಲಿ ಸಮರ್ಥಿಸಿದ್ದಾರೆ. ಜಟಿಲವೂ, ಪರಮ ಗಂಭೀರವೂ ಅದ ಈ ಸ್ತೋತ್ರಕ್ಕೆ ಆತ್ಮಕೂರಿನ ಪಂಡಿತ ಆನಂದತೀರ್ಥಾಚಾರ್ಯರು 'ಗುರುಭಾವ ಪ್ರಕಾಶಿಕಾ' ಎಂಬ ಅಪೂರ್ವ ವ್ಯಾಖ್ಯಾನವನ್ನು ಬರೆದು ಶ್ರೀಸತ್ಯಧರ್ಮರ ಹಾರ್ದವನ್ನು ಸಜ್ಜನರಲ್ಲಿ ತಿಳಿಯಪಡಿಸಿದ್ದಾರೆ. ಇವರ ವೃಂದಾವನವು ಹೊಳೆ ಹೊನ್ನೂರಿನಲ್ಲಿ ಇದೆ. ಗುರುಗಳು ಆಖ್ಯಾನೋಕ್ತ ವ್ಯಕ್ತಿಗಳಾಗಿದ್ದು

→

1879ರವರೆಗೂ ಪೀಠದಲ್ಲಿದ್ದ ಶ್ರೀಸತ್ಯಪರಾಕ್ರಮತೀರ್ಥರಂತೂ ತಮ್ಮ ಪೂರ್ವಾಶ್ರಮದಲ್ಲಿ ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ವಿದ್ಯಾಗುರುಗಳೇ ಆಗಿದ್ದವರು. ರಾಜರ ಋಜುತ್ವದಲ್ಲಿ ಹಾಗೂ ಮೃತ್ತಿಕಾ ಧಾರಣೆಯಲ್ಲಿ ಶ್ರದ್ಧೆಯನ್ನು ಹೊಂದಿದ್ದ ವಾಯಿ ಮನೆತನಕ್ಕೆ ಸೇರಿದ್ದ ಶ್ರೀಗಳವರು ಪೀಠಾಧಿಪತಿಗಳಾದ ನಂತರ ಜಂಬುಖಂಡಿ ಆಚಾರ್ಯರ ವಿಷಯದಲ್ಲಿ ಕೆಲವರು ಎತ್ತಿದ ಆಕ್ಷೇಪಕ್ಕೆ ಮನ್ನಣೆ ನೀಡದೆ ಆಚಾರ್ಯರನ್ನು ಪುರಸ್ಕರಿಸಿದರು. ಅವರ ವಿದ್ಯಾ ಪ್ರತಿಭೆಗಳನ್ನು ಕಂಡು ಆನಂದಿಸಿ ಕರವಸ್ತ್ರದ ಮರ್ಯಾದೆ ಕರುಣಿಸಿದರಲ್ಲದೇ 'ದ್ವಾದಶನಾಮಗಳಿಗೆ ಮೃತ್ತಿಕಾ ಪ್ರತಿನಾಮಗಳನ್ನು ಲೇಪಿಸಿದಾಚಾರ್ಯರ ವಿಷಯ ಯಾರೂ ಆಕ್ಷೇಪ ಮಾಡಬಾರದು' ಎಂಬ ರಾಯಸವನ್ನೇ ಶ್ರೀಮಠದಿಂದ ಹೊರಡಿಸಿದರು. ಸಂಸ್ಕೃತಾಕ್ಷರದಲ್ಲಿರುವ ಶ್ರೀಗಳವರ ರಾಯಸ ಹಾಗೂ ನಿರೂಪಗಳನ್ನು ಶ್ರೀಗುರುಗೋವಿಂದದಾಸರು ತಾವು ಪ್ರಕಟಿಸಿರುವ 'ಹರಿಭಕ್ತವಿಜಯ ಭಾಗ–1'ರಲ್ಲಿ ಯಥಾವತ್ತಾಗಿ ಕನ್ನಡದಲ್ಲಿ ನೀಡಿರುತ್ತಾರೆ. ಇದೇ ಮಾದರಿಯಲ್ಲಿ ಶ್ರೀವ್ಯಾಸರಾಜ ಮಠಾಧೀಶರಾದ ಶ್ರೀ ವಿದ್ಯಾಸಿಂಧು ತೀರ್ಥ ಶ್ರೀಪಾದಂಗಳವರು ರಾಯಸವನ್ನು ನೀಡಿ (ಕ್ರಿ.ಶ. 1876) ಶ್ರೀವಾದಿರಾಜರ ಋಜುತ್ವವನ್ನು ವಿರೋಧಿಸಿ ಕಲಹ ಮಾಡುವುದು

---

→ XVIII ನೆಯ ಅಧ್ಯಾಯದಲ್ಲಿ ಶ್ರೀರಾಜರಿಂದ ವಿಶೇಷ ಅನುಗ್ರಹೋಪದೇಶವನ್ನು ಪಡೆದಿದ್ದಾರೆ. ಅದಲ್ಲದೇ VIIನೇ ಅಧ್ಯಾಯದ ಕೊನೆಯಲ್ಲಿ ವೇದನಿಧಿ ಪ್ರಕರಣದಲ್ಲಿ, ನಂತರ ಅಧ್ಯಾಯದ ಶೇಷ ಪ್ರಕರಣದಲ್ಲಿ, ಕೊನೆಯ ದ್ವಿತೀಯ ಪ್ರಾಣಾವಧಿ ನಿದರ್ಶನಪರ್ವ ಭಾಗದಲ್ಲಿಯ ಹಯಗ್ರೀವ ಮುನಿ ಪ್ರಕರಣದಲ್ಲಿಯೂ ಗುರುಗಳ ತಪಸ್ಸು, ಜ್ಞಾನ, ಪ್ರಸಾರ, ಆಖ್ಯಾನಗ್ರಂಥದಲ್ಲಿ ಆದರ ಮೊದಲಾದುದನ್ನು ಕುರಿತು ವರ್ಣಿಸಲಾಗಿದೆ. ಪೂರ್ವಾಶ್ರಮದಲ್ಲಿ ಗುರುಗಳಿಗೆ ಬಂದೊದಗಿದ ಮ್ಲೇಚ್ಛರ ಉಪಟಳವನ್ನು ಶ್ರೀರಾಜರೇ ಪರಿಹಾರ ಮಾಡಿದ್ದೂ ವರ್ಣಿತವಾಗಿದೆ"

**– ತತ್ತ್ವಮಲ್ಲಿಕಾ ಸ್ಮರಣಸಂಚಿಕೆ–2000,**
(ಶ್ರೀವೃಂದಾವನಾಖ್ಯಾನೋಕ್ತ ಮಹಿಮರು) ಸಂ. ಪಂಡಿತ ಶ್ರೀ
ಆನಂದತೀರ್ಥಾಚಾರ್ಯ ಮತ್ತು ಡಾ. ಗುರುರಾಜ ಕೃ. ನಿಪ್ಪಾಣಿ.

ಸ್ವಲ್ಪವೂ ಸರಿಯಲ್ಲ ಎಂದು ಅಭಿಪ್ರಾಯಪಟ್ಟಿದ್ದರೆ; ಮಂತ್ರಾಲಯ ಶ್ರೀರಾಘವೇಂದ್ರ ಸ್ವಾಮಿಗಳ ಮಠಾಧೀಶರಾದ ಶ್ರೀ ಸುಪ್ರಜ್ಞೇಂದ್ರ ತೀರ್ಥ ಶ್ರೀಪಾದಂಗಳವರು[1] ಕ್ರಿ.ಶ. 1885ರಲ್ಲಿ ಹೊರಡಿಸಿದ ರಾಯಸದಲ್ಲಿ 'ಒಂದು ಬಾರಿ ಗುರು ವಾದಿರಾಜರ ಚರಣದ್ವಂದ್ವವ ನೆನೆದರೆ ಹಿಂದೆ ಮಾಡಿದ ದುರಿತಂಗಳೆಲ್ಲ ಬೆಂದು ಹೋಗುವುದಿದಕೆ ಸಂಶಯವಿಲ್ಲ. ಹರಿ ಬಲ್ಲ. ಹರ ಬಲ್ಲ. ಉದ್ದಂಡೋದ್ದಂಡಗಂಡ ಪ್ರಚಂಡ ಮಾಯಿಮತ ವಿಧ್ವಂಸಕ ಮಧ್ವಮತೋದ್ಧಾರ ಭಾವಿ ಹನುಮಚ್ಚಕ್ರವರ್ತಿನ್ ಪರಮಹಂಸಾರೂಢ ಶ್ರೀವಾದಿರಾಜೇಂದ್ರಪ್ರಭೋ' ಎಂಬ ಸ್ಪಷ್ಟ ಮಾತುಗಳಿಂದ ವಾದಿರಾಜರ ಋಜುತ್ವವನ್ನು ಸಮರ್ಥಿಸಿರುತ್ತಾರೆ. ಶ್ರೀಸೋದೆ ವಾದಿರಾಜ ಮಠಾಧೀಶ ರಾದ ಶ್ರೀವಿಶ್ವಾಧೀಶತೀರ್ಥ ಶ್ರೀಪಾದಂಗಳವರಂತೂ ಆಚಾರ್ಯರ ಧೈರ್ಯ, ಸಾಹಸ ಮತ್ತು ಮನೋದಾರ್ಢ್ಯಕ್ಕೆ ಪ್ರಸನ್ನರಾಗಿ ಘಂಟಾ, ಸಿತಛತ್ರ, ಕರದೀಪ, ಕರವಸ್ತ್ರ, ಬೆನ್ನುಮಣೆ, ತಟ್ಟೆ ಮರ್ಯಾದೆಗಳನ್ನು ಕರುಣಿಸಿದ್ದಾರೆ. ಆ ಸಂದರ್ಭದಲ್ಲಿ ಅವರು ಹೊರಡಿಸಿದ ರಾಯಸ ಹೃದಯಸ್ಪರ್ಶಿ ಹಾಗೂ ಚಾರಿತ್ರಿಕ ಮಹತ್ತ್ವವುಳ್ಳದ್ದಾಗಿದೆ. ಶ್ರೀಗುರು ಗೋವಿಂದ ದಾಸರು ಪ್ರಕಟಿಸಿರುವ ಶ್ರೀಗಳವರ ರಾಯಸ ಹೀಗಿದೆ :

---

1. ಜಂಬುಖಂಡಿ ವಾದಿರಾಜಾಚಾರ್ಯರಿಗೆ ಅವರ ಕಾಲದ ಶ್ರೀರಾಘವೇಂದ್ರ ಸ್ವಾಮಿಗಳ ಮಠದ ಗುರುಗಳಾದ ಶ್ರೀ ಸುಪ್ರಜ್ಞೇಂದ್ರತೀರ್ಥರು 1885ರಲ್ಲಿ ನಿರೂಪ ಕೊಟ್ಟು ಶ್ರೀರಾಘವೇಂದ್ರ ಸ್ವಾಮಿಗಳ ಕಾಲದಿಂದಲೂ ಗುರುರಾಜರ ಋಜುತ್ವ ನಂಬಿಕೆ ತಮಗುಂಟೆಂದು ಸೂಚಿಸಿದರೆಂದು ಐತಿಹ್ಯವಿದೆ. ವ್ಯಾಸರಾಜರ ಪದವೂ ಈ ನಂಬಿಕೆಗೆ ಸ್ಮಾರಕವಾಗಿದೆ. 'ಸಾಕ್ಷೀ ಹಯಾಸ್ಯೋऽತ್ರ ಹಿ' ಎಂದು ಹೇಳಿದ ಶ್ರೀರಾಘವೇಂದ್ರ ಸ್ವಾಮಿಗಳು ಪರೋಕ್ಷ ಪ್ರಿಯರಾದ ದೇವತೆಗಳಷ್ಟೆ. ಆದ್ದರಿಂದ ಸಮರ್ಥ ಶುದ್ಧ ಮನಸ್ಕತ್ವ ಹೇತುವಿನಿಂದ ಶ್ರೀರಾಘವೇಂದ್ರ ಸ್ವಾಮಿಗಳೂ ಆಖ್ಯಾನ ಪ್ರಾಮಾಣ್ಯ ಜ್ಞಾನವುಳ್ಳವರೇ.

– ಶ್ರೀಮದ್ವಾದಿರಾಜ ಋಜುತ್ವಸಿದ್ಧಾಂತ
ಲೇ : ವಿದ್ವಾನ್ ಹೆಚ್. ಸುಬ್ಬರಾವ್, ಮೈಸೂರು.

"ಸ್ವಸ್ತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವದ್ಯನೇಕ ಗುಣ-ಗಣಮಂಡಿತ, ಪದವಾಕ್ಯಪ್ರಮಾಣ ಪಾರಾವಾರ ಪಾರಂಗತ ಸರ್ವತಂತ್ರ ಸ್ವತಂತ್ರ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ನಿರತ ಸಕಲ ಸುಮುನಿಕರ ಮಣಿಮಯಮಕುಟ ಪ್ರಭಾಪುಂಜರಂಜಿತ ಶ್ರೀಮದ್ಭೈಷ್ಮೀ ಸತ್ಯಾಸಮೇತ ಯಾದವಕೃಷ್ಣ ಪಾದಪದ್ಮಾರಾಧಕ ಶ್ರೀಮದ್ವ್ಯಾಸಿಷ್ಟಕೃಷ್ಣ ಭೂವರಾಹ ಹಯಗ್ರೀವ ಪಾದಾರವಿಂದ ನಿರಂತರಾರ್ಚಕ ಶ್ರೀಮದಾನಂದತೀರ್ಥಾಚಾರ್ಯ ಸಹೋದರ ಶ್ರೀಮದ್ವಿಷ್ಣುತೀರ್ಥಾಚಾರ್ಯ ವಂಶಾಬ್ಧಿಚಂದ್ರ ಶ್ರೀಮದ್ವಾದಿರಾಜ ಗುರುಸಿಂಹಾಸನಾರೂಢ ಶ್ರೀಮದ್ವೃಂದಾವನಾಚಾರ್ಯಾಭಿಧ ಶ್ರೀವಿಶ್ವಪ್ರಿಯತೀರ್ಥ ಕರಕಮಲ ಸಂಜಾತ ಶ್ರೀಮದ್ವಿಶ್ವಾಧೀಶತೀರ್ಥ ಶ್ರೀಪಾದಂಗಳವರು-

ಆ ಸೇತು ಹಿಮಾಚಲ ಪರ್ಯಂತಾಖಿಲದೇಶೀಯ ಅಶೇಷ ಹರಿಗುರು ಭಕ್ತಿಪರಾಯಣ ವೈದಿಕ ಲೌಕಿಕ ಜನರುಗಳಿಗೆ ಕೃತಾನೇಕ ನಾರಾಯಣ ಸ್ಮರಣೆಗಳು. ನಾವು ಶಾಲಿವಾಹನ ಶಕೆ **1808**ನೇ ಪರಿವರ್ತಮಾನ ವ್ಯಯಾಬ್ದೀಯ (ಕ್ರಿ.ಶ. **1886**) ಫಾಲ್ಗುಣಸಿತ ಶ್ರೀಭೂತರಾಜಾಭಿವ್ಯಂಜಕ ಚತುರ್ದಶೀ ಮಂಗಳವಾರ ಪರ್ಯಂತ, ಶ್ರೀಕೃಷ್ಣ ಸಮೇತ ವೇದವ್ಯಾಸ ಭೂವರಾಹ ಹಯಗ್ರೀವ ದೇವರ ಪೂಜಾ ಜಪ ವ್ಯಾಖ್ಯಾನಾದಿಗಳು ಮಾಡಿಕೊಳ್ಳುತ್ತಾ ಶ್ರೀಸೋದಾ ಪುರದಲ್ಲಿ ಕ್ಷೇಮಿಗಳು. ನಿಮ್ಮ ಸುಕ್ಷೇಮ ತಿಳಿಸಿ ಸಂತೋಷಪಡಿಸ ತಕ್ಕದ್ದು. ಸಾಂಪ್ರತ. ಪ್ರಾಕ್ ನಮ್ಮ ಶ್ರೀಗುರುರಾಜರ ಚರಣ ಕೋಕನದೇಂದಿರಾಯಮಾನ, ಹಾನಗಲ್ಲು ವಾದಿರಾಜಾಚಾರ್ಯ ರಿಗೆ **1795**ನೇ (ಕ್ರಿ.ಶ. **1873**) ಶ್ರೀಮುಖಿವತ್ಸರ, ಫಾಲ್ಗುಣಾಸಿತ ಪಂಚಮೀ ದಿವಸ ಇಲ್ಲೇ ಶ್ರೀಗುರುರಾಜ ಪ್ರಭೃತಿಗಳಿಗೆ ಲಾತವ್ಯತ್ವಾದಿ ವ್ಯವಸ್ಥಾಪನಾರ್ಥ, ಘಂಟಾ, ಸಿತಛತ್ರ, ಕರದೀಪ, ಕರವಸ್ತ್ರ ಮರ್ಯಾದೆ ಕೊಟ್ಟಿದ್ದಲ್ಲದೇ ಇವತ್ತು ಕೆಲವು ಮಹಾ ಮರ್ಯಾದಾ

ಕೋಡೋ ಕಾರಣ ತಾರಣಾಬ್ದ (ಕ್ರಿ.ಶ. 1884) ದಲ್ಲಿ ಮದರಾಸಿನಲ್ಲಿ ಉತ್ತರಾದಿ ಮಠದ ಸತ್ಯವೀರ ಸ್ವಾಮಿಗಳು ಭೂತರಾಜಾದಿಗಳಿಗೆ ಅವಾಚ್ಯಗಾಲೀದಾನವಲ್ಲದೆ 'ಮಾರ್ತಿಕಗರ್ವ ನಿರ್ವಾಪಣ' ಎಂಬ ದುರ್ಗ್ರಂಥವನ್ನು ರಚಿಸಿ ಪ್ರಸಿದ್ಧಿ ಪಡಿಸೋಣ, ಈ ಆಚಾರ್ಯರು ಸಹಿಸದೆ 'ಮೃತ್ತಿಕಾ ದ್ರೋಹಿ ಗರ್ವ ನಿರ್ವಾಪಣೋಭಯ, ಮಧ್ವಕರ್ಥೋಜ್ಜೀವಸ' ಗ್ರಂಥ ಅವರಂತೆ ರಚಿಸಿ ಪ್ರಸಿದ್ಧಿ ಪಡಿಸಿದ್ದೂ ನೋಡಿ ಮತ್ತೂ ತಾಂಡವಸ್ವಾಮಿ ರಾಜಾಚಾರ್ಯರು ಕರೂರಲ್ಲೇ ಮೃದಲಂಕೃತವೇ ಧೃತ ಎಂದು ದಂಡ ಕೊಟ್ಟರು. ಪತ್ರವೂ ಕೊಟ್ಟು ಶುದ್ಧರಾದರು. ನೆರೂರು ರಾಜಾಚಾರ್ಯರು, ಘಟಿಕಾಚಲದ ಶ್ಯಾಮಾಚಾರ್ಯರು, ವ್ಯಂಗಲೂರು ಉಡುಪೀ ನರಹರಿ ಆಚಾರ್ಯರು, ಸ್ವಜನಕರಾದ ವಾಸುದೇವಾಚಾರ್ಯರೂ, ಆಖ್ಯಾನಪ್ರಾಮಾಣ್ಯಶಂಕಾಪಂಕ ಪ್ರಕ್ಷಾಳನ ಮಾಡಿ ಮಹಾ ರಾಜಕೀಯರಾದರು. ಮೃದ್ವೃತ್ತಿ, ವೃಂದಾವನ ಸದ್ಮಾರ್ಚನರ ಸಾಮ್ಯದಿಂದ ಭದ್ಮದಿಂದೆ ನ ತತ್ತ್ವಂ, ಯಂತಂದು ಪತ್ರ ಕೊಟ್ಟರು. ಚೋಳಮಂಡಳ ಮಹಿತರು ಭೀತರಾಗಿ ಟೀಕಾಕೃತ್ಪಾದರ ವೃಂದಾವನವೇ ಇಲ್ಲಾ ಕುತಃ ಪೂಜಾ ಅಂತಂದರು. ಇಂಥಾ ಚಾಲದಲ್ಲಿ ಶ್ರೀಮೃತ್ತಿಕಾ ಹಚ್ಚೀ ಇವರು ತಮ್ಮ ಮಠಕ್ಕೆ ಹೋಗಿ, ಮರ್ಯಾದಾ ಸಂಪಾದಿಸಿ, ವಾದ ಮಾಡಿ ಮೃನ್ನಿಮಿತ್ತಾನ್ಯಗಳ್ಹಾಕಿದ ಪತ್ರ ಶ್ರೀಕಾರ ತಿರುಗಿಸಿದರು. ಪುನಃ ತದ್ವಿರೋಧಿ ಪ್ರಮಾಣ ಪ್ರಸಿದ್ಧಿ ಪಡಿಸಿದ ಪ್ರಯುಕ್ತಾ ದೇಹಾಂತ ವಿರೋಧಿಗಳಾಗಿ ವರ್ತಮಾನರೂ, ತದ್ವದ್ವಿರೋಧಿಗಳದ್ಯಾಪಿ ಈ ಉತ್ಸವಕ್ಕೆ ಬರೋ ಕಾಲದಲೆ ಕಿಟಿಜಾ ಕೂಲಕ ಚಿತ್ತಾಪುರದಲ್ಲಿ ಸತ್ಯಧೀರಸ್ವಾಮಿಗಳ ಸಮಕ್ಷಮ ನಾವು ಕೊಟ್ಟ ಜಯಘಂಟಾ ಹೊಡೆದು ಲಕ್ಷಿಸದೇ ಬಂದರು. 'ತಚ್ಛ್ರುತ್ವಾ ಯತಯೋಪೀಹ ಮೂಕೀ ಭೂತಾ ಅಹೋ' ಅಂತ ಆಖ್ಯಾನೋಕ್ತ ಗುರೂಕ್ತಾನುಭವಕ್ಕೆ ಬಂತು. ಈ ದಾರ್ಢ್ಯ ಪ್ರಸನ್ನರಾಗಿ ಅಂತಃಪ್ರೇರಕ ಶ್ರೀಗುರುರಾಜರ ಪ್ರೇರಣೆಯಿಂದ ಬೆನ್ನು ತಟ್ಟೀ ಮರ್ಯಾದಾಗಳು

ಕೊಟ್ಟಿದ್ದೇವೆ. ಭಾಜಂತ್ರ್ಯಾದಿ ಮಂಗಳ ಘೋಷದಿಂದ ಶ್ರೀ ಗುರುವಾದಿರಾಜರ ಭಟರನ್ನು ಕರೆದುಕೊಂಡು ಹೋಗೋದು. ಶ್ರೀ ಹರಿ ಪ್ರೀತನಾಗುವ. ಇತಿ ನಾರಾಯಣಸ್ಮರಣೆ.

– ಶ್ರೀವಿಶ್ವಾಧೀಶತೀರ್ಥ ಶ್ರೀಪಾದರು."

ಹೀಗೆ ಎಲ್ಲಾ ಮಠದ ಪೀಠಾಧಿಪತಿಗಳ ಗೌರವಾದಾರಗಳಿಗೆ ಪಾತ್ರರಾಗಿದ್ದ ಜಂಬುಖಂಡಿ ಆಚಾರ್ಯರು ಉತ್ತರಾದಿ ಮಠದ ಪೀಠವನ್ನೇರಿದ ಶ್ರೀಸತ್ಯವೀರತೀರ್ಥರು (1879–86) ಮತ್ತು ಶ್ರೀಸತ್ಯಧೀರತೀರ್ಥರ (1886–1907) ಕಾಲದಲ್ಲಿ ತೀವ್ರ ಪ್ರತಿರೋಧವನ್ನು ಎದುರಿಸಬೇಕಾಗಿ ಬಂದಿತು. ತೀರ ವೈಯಕ್ತಿಕ ಕಾರಣಗಳಿಂದಾಗಿ ಪರಂಪರಾಗತ ತಾತ್ತ್ವಿಕ ವಿಶ್ವಾಸವೇ ಬುಡಮೇಲಾದದ್ದು ನಿಜಕ್ಕೂ ಒಂದು ವಿಪರ್ಯಾಸ. ಇದಕ್ಕೆ ಕಾರಣಗಳೇನೇ ಇರಲಿ, 'ರಾಜರ ಋಜುತ್ವೋಪಾಸನೆಯ ಶ್ರದ್ಧಾಳು'ಗಳಾಗಿದ್ದ ಆಚಾರ್ಯರು ತಮ್ಮ ಮಠದ ಬಹಿಷ್ಕಾರಕ್ಕೆ ತುತ್ತಾಗಬೇಕಾಯಿತು[1]. ಇದಕ್ಕೆ ಕುಂಭಕೋಣೆ ಹಾಗೂ ಕೊಯಮತ್ತೂರಿನಲ್ಲಿ ನಡೆದ ಪ್ರಸಂಗಗಳೂ ತುಪ್ಪ ಸುರಿದಿರಬೇಕು.

---

1. "The names of Satyavira Swami (1879-86) and Satyadhira (1896-1907) are prominently associated with the opposition front. It was at this juncture that Jamkhandi VadirAja Acharya (1842-96) a doughty champion of Rjutva and a Vidyashishya of Sri Satyaparakrama Tirtha himself of Uttaradi Mutt and of Vidyadhisha Tirtha Swami of Krishnapura mutt of Udupi and an ardent devotee of Vishwapriya was crusading with all his eloquence and erudition in establishing the authenticity of the Akhyana. It was deemed intolerable that a renowned scholar and orator of the caliber of Jamkhandi Acharya, hailing from Uttara-Karnataka and owing allegiance to the Uttaradi Mutt should have joined hands with the Rjutva camp. It was galling to the pride of vested interests. The proverbial ire and machinery of persecution and excommunication (Bahishkara) or social boycott were put into action"

**Dr. B.N.K. Sharma.**

ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ – ಮುನ್ನುಡಿಯಲ್ಲಿ.

ಹಿಂದಿನ ಕಾಲದಲ್ಲಿ ಬಹಿಷ್ಕಾರವೆಂಬುದು ವೈದಿಕ ವಲಯದಲ್ಲಿ ಒಂದು ಶಾಪದಂತೆ ಗುರುತಿಸಲ್ಪಟ್ಟಿದ್ದು ಹಲವಾರು ತೊಂದರೆ, ತೊಡಕುಗಳನ್ನು ಅನುಭವಿಸಬೇಕಾಗಿತ್ತು. ಆದರೆ ಆಚಾರ್ಯರು ಮಾತ್ರ ಯಾವುದಕ್ಕೂ ಹೆದರದೆ ರಾಜರ ಋಜುತ್ವೋತ್ಕರ್ಷವನ್ನು ಉದ್ಘೋಷಿಸುತ್ತಾ ಸಾಧನೆಯ ಪಥದಲ್ಲಿ ಮುನ್ನಡೆದರು[1].

ಶ್ರೀಸತ್ಯವೀರರ ಕಾಲದಲ್ಲಿ ಪ್ರಾರಂಭವಾದ ಕಿರುಕುಳ ಅವರ ನಂತರ ಪಟ್ಟಕ್ಕೆ ಬಂದ ಶ್ರೀಸತ್ಯಧೀರರ ಅವಧಿಯಲ್ಲಿಯೂ ಮುಂದುವರೆಯಿತು. ಒಂದು ಸಲ ಆಚಾರ್ಯರು ಚಿಕ್ಕೋಡಿಗೆ ಬಂದಿದ್ದಾಗ ಅವರ ಪುತ್ರನು ತೀವ್ರವಾಗಿ ಅಸ್ವಸ್ಥಗೊಂಡು ಬಳಲುತ್ತಿದ್ದನು. ಆ ಸಂದರ್ಭದಲ್ಲಿ ಅಲ್ಲಿಗೆ ಸಮೀಪದಲ್ಲಿಯೇ ಬೀಡುಬಿಟ್ಟಿದ್ದ ಶ್ರೀಗಳವರು, ವ್ಯಾಧಿಗ್ರಸ್ತನಾದ ಆಚಾರ್ಯರ ಪುತ್ರನಿಗೆ ಸೂಕ್ತ ಔಷಧೋಪಚಾರಕ್ಕೂ ಆಸ್ಪದ ಕೊಡದೆ, ಚಾಡಿಕೋರರ ಮಾತುಗಳನ್ನು ಕೇಳಿ ಆಚಾರ್ಯರನ್ನು ಊರಿನಿಂದಲೇ ಹೊರಗೆ ಹಾಕಿಸಿಬಿಟ್ಟರು. ಇದರಿಂದ ತೀವ್ರವಾಗಿ ನೊಂದ ಆಚಾರ್ಯರು ತಮ್ಮ ಮನಸ್ಸನ್ನು ಕಲ್ಲಾಗಿಸಿಕೊಂಡು ಹೋರಾಡಲು ನಿರ್ಧರಿಸಿದರು[2]. ತಮಗಾದ ಅನ್ಯಾಯದ ವಿರುದ್ಧ ಧೈರ್ಯದಿಂದ ಪ್ರತಿಭಟಿಸಿ ಕಾನೂನಿನ

---

1. ಇಷ್ಟೆಲ್ಲಾ ಕಷ್ಟ ಕೋಟಲೆಗಳನ್ನು ಅನುಭವಿಸಿದರೂ ಆಚಾರ್ಯರದು ತಾತ್ತ್ವಿಕ ಸಮರವೇ ಹೊರತು ವೈಯಕ್ತಿಕ ದ್ವೇಷಾಸೂಯೆಗಳಿಂದ ಕೂಡಿದ ಘರ್ಷಣೆಯಲ್ಲ. ಇದಕ್ಕೆ ಅವರು ಬಹಿಷ್ಕಾರದ ಅವಧಿಯಲ್ಲಿ, ಮಠಾದೇಶವನ್ನು ಗೌರವಿಸಿ ಕೇವಲ ಅಂಗಾರವನ್ನು ಮಾತ್ರ ಧರಿಸುತ್ತಿದ್ದುದೇ ಸಾಕ್ಷಿ. ಅಷ್ಟೇ ಅಲ್ಲದೆ ಪುನರ್ವಿವಾಹದ ಸಂಬಂಧವಾಗಿ ಮದರಾಸಿನಲ್ಲಿ ನಡೆದ ಸಭೆಯಲ್ಲಿ ಮಠದ ಪರವಾಗಿ ಭಾಗವಹಿಸಿ ಅದರ ನಿಲುವನ್ನು ಎತ್ತಿಹಿಡಿದ ವಿಷಯವನ್ನು ಅವರೇ ತಮ್ಮ ಆತ್ಮಕಥನದಲ್ಲಿ ಉಲ್ಲೇಖಿಸಿರುತ್ತಾರೆ.

2. ಇಲ್ಲಿಂದೀಚೆಗೆ ಆಚಾರ್ಯರ ಎದೆಯು ಕಲ್ಲಾಯಿತು. ಗುರು ಸ್ಥಾನವೆಂದು ಭಯ ಭಕ್ತಿಯಿಂದ ನಡೆದುಕೊಂಡು, ಅವರು ಕೊಟ್ಟ ಅಪಾರ ಹಿಂಸೆಗಳನ್ನು ನ್ಯಾಯಾನ್ಯಾಯಗಳನ್ನೂ ನೋಡದೆ ಸಹಿಸಿದ್ದಾಯಿತು. ಇಷ್ಟಾದರೂ

→

ಸಮರವನ್ನೇ ಸಾರಿದರು. ನ್ಯಾಯಾಲಯದ ಮೆಟ್ಟಲೇರಿ ಹರಿವಾಯು ಗುರುಗಳ ಕೃಪಾವಿಶೇಷದಿಂದ ಎಲ್ಲಾ ಖಟ್ಲೆಗಳಲ್ಲಿಯೂ ಜಯಶಾಲಿಗಳಾದರು. ಬಹಿಷ್ಕಾರಕ್ಕೆ ಕಾರಣ, ಅದರಿಂದಾಗಿ ತಾವು ಪಟ್ಟ ಪಾಡು ಹಾಗೂ ಆ ಸಂದರ್ಭದಲ್ಲಿ ನಡೆದ ಸಮಸ್ತ ವಿದ್ಯಮಾನಗಳನ್ನು ಸ್ವತಃ ಆಚಾರ್ಯರೇ An Exposition ಎಂಬ ಹೆಸರಿನಲ್ಲಿ ಹೀಗೆ ವಿಸ್ತಾರವಾಗಿ ಹೇಳಿಕೊಂಡಿರುತ್ತಾರೆ. ಸತ್ಯ ಘಟನೆಗಳ ಮೇಲೆ 'ಕ್ಷಕಿರಣ' ಬೀರುವ ಅಧಿಕೃತ ಐತಿಹಾಸಿಕ ದಾಖಲೆಯೂ ಸಹ ಇದಾಗಿದೆ.

ಅದರ ಆಂಗ್ಲ ಭಾಷೆಯ ಪೂರ್ಣ ಪಾಠ ಕೆಳಕಂಡಂತಿದೆ :

## AN EXPOSITION

I live at a place going by name of Shirguppa just close by Bellary in the Madras Presidency. My name is Jamkhandi Vajirajacharya. The circumstances of my birth are very peculiar and therefore I am sure they will neither be insipid nor out of place here to be mentioned. My mother was without any issue

---

→ ಶ್ರೀಗಳವರ ಕೃಪಾದೃಷ್ಟಿ ಬೀಳಲಿಲ್ಲ. ಮನುಷ್ಯನಾದವನು ಎಲ್ಲಿಯವರೆಗೆ ಬಗ್ಗಿಯಾನು? ನೆಲದವರೆಗೂ ಬಗ್ಗಬಹುದು. ಅನಂತರ ಅಲ್ಲಿಂದ ಮೇಲಕ್ಕೆ ಏಳಬೇಕಷ್ಟೆ, ಅಂತೆಯೇ ಆಚಾರ್ಯರು ದೃಢಸಂಕಲ್ಪ ತೊಟ್ಟರು. ತಮಗಾದ ಅನ್ಯಾಯದ ಸೇಡನ್ನು ತೀರಿಸಿಕೊಳ್ಳಲು ಮನ ಮಾಡಿದರು. ಇದಕ್ಕಾಗಿ ಕೋರ್ಟಿಗೆ ಫಿರ್ಯಾದೆ ಕೊಟ್ಟರು. ಇವರ ಪರವಾಗಿ ಸಾಕ್ಷಿ ಹೇಳಲು ಆಗ ಮೈಸೂರು ಸರ್ಕಾರದಲ್ಲಿ ಚೀಫ್ ಸೆಕ್ರೆಟರಿ ಆಗಿದ್ದ ಶ್ರೀ ಆರ್.ಬಿ. ವಿಜೇಂದ್ರರಾಯರೆಂಬುವರು ತಮ್ಮನ್ನು ಆಹ್ವಾನ ಮಾಡದೇ ಇದ್ದರೂ ಸ್ವಯಂ ಬಂದು ತಾವೇ ಸಾಕ್ಷಿಯನ್ನು ಕೊಟ್ಟು ಆಚಾರ್ಯರ ಹೇಳಿಕೆ ಕೊಟ್ಟಿದ್ದನ್ನೆಲ್ಲಾ ರುಜುವಾತು ಮಾಡಿದರು. 'ದಂಡಿನಲ್ಲಿ ಸೋದರಮಾವನೇ!!' ಎಂಬ ಗಾದೆಯಂತೆ ಶ್ರೀಗಳವರದೇ ತಪ್ಪೆಂದು ತೀರ್ಮಾನವಾಯಿತು.

– ಶ್ರೀಗುರುಗೋವಿಂದವಿಠಲದಾಸರು (ಹರಿಭಕ್ತವಿಜಯ ಭಾಗ–1)

till she reached a ripe old age, when she was advised to do homage at the shrine of an ascetic named Sri Vajiraja Swami whose relies rest in holy peace at a place called Swadi, which has consequently become a frequent resort of Vaishnavite pilgrims. My mother by constant and hearty devotion as well as by faithfully drinking the Mrittika (the holy red mud) in his Vrindavana (a holy tomb) noted for its efficacy in fulfilling the desires of its devotees, was sucessfull in propitiating him and was blessed with the longhoped-for son in myself. I studied our shastras with the learned and revered Swami of Sri Satyaparakrama of the Uttaradhi Matha, and with the Swami of Krishnapur in Udupi in the Mangalore district for more than 24 years and by their favour was successful in many discourses with Pandits living in such distant parts of the country as Kashmir and others, for which I was honoured with a planquin and other accompanying honors by the Swami my master and head of the Vaishnavite sect.

Shri Satyavirya Swami, the successor of my master of the Uttaradi Matha, being envious of my fame as a Shastri, and out of spite towards me on account of my applying to my body the mud. I always look upon with veneration and gratitude, wrote an unmannerly letter to H.H. the Chief of Jamkhandi while in Madras in the Hindu year Taran, requesting him to cast me away and to punish me as if I was a criminal, calling me and the holy Vajiraj Swami "TIKACHARYA DROHEE" literally an offender against Tikacharya a term reflecting the greatest disrespect upon any body it is conferred on, as far as the Vaishnava community is concerned and also two or three others were sent to R.B. Hucharao at Belgaum, to the agent of the

Matha at Koppal and to the priest of Hulgi, all fully of deadly rancour against me and in each of them the favourite curse "TIKACHARYA DROHEE" was repeated. Pocketing all such insults flung at me, I remained calm as an ocean, supported by my disciples like R.B. Vijayendrarao, Chief Secy, to the Mysore Government. In the meanwhile Satyavirya Swami, the author of my excommunication, breathed his last.

Shri Satyadhira Swami, his successor, without himself going into details with regard to the notice of his predecessor for excommunicating me, at once confirmed all that Satyavirya had done, by again issuing orders for my excommunication to Mysore, Adonee and Belgaum from Gadug and Koppal respectively, in all of which, besides the usual curse named above, it was stated that my behaviour was similar to that of Bhimanakatti Swami though the latter was superior to him in every respect save that of power. After a while I halted at Chikodi on my way to Belgaum from Kolhapur with my son, extremely weak on account of severe sickness, when the Swami who also was there, caused us to be turned out, not even taking into his consideration the feeble state of my son's health in the heat of the day.

This was the finishing stroke to the series of persecutions and insults flung at me and it had reached such a state that I was unable to bear it any longer. I lodged a complaint against his Holiness Satyadheera Swami in the Magistrate's court at Bellary for having called me "TIKACHARYA DROHEE TAMOYOGIA" which means a person fit for hell. The magistrate dismissed the complaint saying that his was not authorized to take cognizance of the religious matter as it was. I

reffered the case to the High Court of Judicature at Madras where by the unceasing exertions of Mr. Bhasyaayanger a Pleader at the place, the Magistrate was ordered to take my case upon his file and to try it. The trial commenced at Bellary. My disciple R.B. Vejandra Rao came of his own accord to give evidence on my behalf and proved to the satisfaction of everybody, quoting authorities for his statements that in-as-much-as Shree Vajeeraja Swami was superior to Teekachar the devotees of the former do not as a matter of fact become the haters or the offenders of the latter. Sufficient witnesses being heard the Swami of the Uttaradi Mutt was charged with having committed an offence under section 499 of the Indian P. Code and was asked to enter on his defence. My best thanks are here due to Mr. Rangarao, my pleader. At the trial P. Ramarao the pleader for the defence tried to ask me questions like the following.

1) In Shirguppa did you not take your meals twice on the Amavasha the 15th of the dark half of a Hindu month?
2) Do you not drink Panak (a drink like lemonade) on Ekadasee days (the 11th day)?
3) Do you not make a bow to Grahasthas (secular gentlemen) touching their feet?
4) Do you not drink Panak sitting on a carpet?
5) In Ramdurg Hanumanthrao's house did you not offer Naivedya (the daily offer of food) to God, wearing new clothes?
6) Do you not drink water standing?

These questions were properly objected to and the objection allowed, as it is evident that they are quite irrelevant in a case for

having abused me. After taking the evidence of the defence the magistrate let off the accused Swami for want of sufficient evidence. I preferred to appeal against the decision to the District Judge at Bellary. I left Bellary for Deccan Hydrabad accompanied by my pleaders Messrs K. Rangarao and Ananathachar to see the Swamy who was there and who had requested me in a letter to see him in person when he had promised to take my case into his considerations.

We saw him, my case was considered and the orders of excommunication issued by his predecessor in office, as well as by himself were cancelled. Further he added that no one of his disciples was to question my acts and requested me to refrain conducting the case against him any further. We agreed, and accordingly the case was withdrawn.

In the begining of the year 1891, I was at Shahapur where I was entertained at a dinner party by gentleman named Shreeniwasarao Tatti, where some of his friends were also present. Priests of that place and of Belgaum, began to show their envy and hatred against me, by trying to prohibit persons from inviting me to their houses and from even talking to me. They proceeded, even so far, as to obstruct a religious ceremony which was to be performed at the house of one of the gentlemen invited by Mr. Tatti. When I came to know all this nonsense I as a matter of necessity, again complained before the magistrate of Sahapur against the agent of the Uttaradi Math Swami, and who was the secret instrument by which all the proceedings named above were into motion. The complaint was granted and a warrant was issued for his arrest. He absconded and was not found until the day of trial, when he presented himself in the

court and begged my pardon through Mr. Kasinathrao Kalghatgi nazer to the Sub-Judge's court, Belgaum, which I granted, out of compassion for his gray hairs and after withdrawing the case I left Shahapur for Bellary. After all this I again hear that order No. 852 from Karnool of excommunication against the said Shrinivas Naik has been widely circulated. Nothing can be more astonishing for the Swami to act in this way, after himself having entered into a contract with me to the effect that no one was to question my acts. But wonders upon wonders, I hear that, a certain priest of Shahapur, named Annacharya Bookabag, who gave evidence against the Swami at Bellary, has been ordered, by a letter to repair to the Swami, wherever he may be and the same orders his excommunication until he does so. I do not know how to critisize this unjust, peremtoryand foolish order. Still the Swamy, a holy man, persists in commiting further breaches of faith by excommunicating a priest named Belkhod Kristachari of Chicodi for having taken his food with me. I think I can fill volumes upon volumes, were I to continue my descripiton of the iniquitous., unjust, high-handed and senseless orders of his Holiness Satyadheer Swami of Uttaradi Math. But this is not my intention to do. Like him, I do not take pride in mortyfying others. The picture which I have tried to draw in the exposition which I lay before public, will. I am sure enable people to set a right value upon his acts as well as upon his self. Suffice it to say, that, I mean to take law again into my hands for having so basely insulted me by the letters referred to towards the concluding portion of my exposition."

ಶಹಾಪುರದ ದುಂಡಿರಾಜ್ ಮುದ್ರಣಾಲಯದಲ್ಲಿ ಮುದ್ರಿತವಾದ ಈ ಚಾರಿತ್ರಿಕ ವಿವರಣೆಗಳನ್ನು ಶ್ರೀಜಂಬುಖಂಡಿ ವಾದಿರಾಜಾಚಾರ್ಯರು

ದಿನಾಂಕ 22ರ ಫೆಬ್ರವರಿ 1891ರಂದು ಶಹಾಪುರದಲ್ಲಿ ಬಿಡುಗಡೆಗೊಳಿಸಿದರು. ಆಂಗ್ಲಭಾಷೆಯ ಮೇಲೆ ಆಚಾರ್ಯರಿಗಿದ್ದ ಪ್ರಭುತ್ವಕ್ಕೆ ಸಾಕ್ಷಿಯಾಗಿರುವ ಈ ವಿವರಣೆಯ ಮೂಲಪ್ರತಿಯನ್ನು ಈಗಲೂ ಅವರ ವಂಶೀಕರು ಬಹು ಜತನದಿಂದ ಸಂಗ್ರಹಿಸಿಟ್ಟಿದ್ದಾರೆ. ಈ ವಿವರಣೆಯಲ್ಲಿ ಆಚಾರ್ಯರ ಪ್ರಾಮಾಣಿಕತೆ, ಪ್ರಖರ ತತ್ತ್ವನಿಷ್ಠೆ, ಸತ್ಯ ಸಂಗತಿಗಳನ್ನು ದಾಖಲಿಸ ಬೇಕೆಂಬ ಕಳಕಳಿ ಮತ್ತು ಅಪ್ರತಿಮ ಧೈರ್ಯ ಸಾಹಸಗಳೂ ಸಹ ಬಿಂಬಿಸಲ್ಪಟ್ಟಿವೆ. ಸಿಂಹದಂತಹ ಧೀರೋದಾತ್ತ ವ್ಯಕ್ತಿತ್ವವುಳ್ಳವರಾಗಿದ್ದರೂ, ಸುಕೋಮಲ ಸ್ವಭಾವ ಮತ್ತು ಸೂಕ್ಷ್ಮ ಮನಸ್ಸನ್ನು ಹೊಂದಿದ್ದ ಆಚಾರ್ಯರು ಅಂದು ಅನುಭವಿಸಿದ ನೋವು ತಳಮಳಗಳು ಇಲ್ಲಿನ ಪ್ರತಿಯೊಂದು ನುಡಿಯಲ್ಲಿಯೂ ಮಡುಗಟ್ಟಿವೆ. ಆ ಸಂದರ್ಭದಲ್ಲಿದ್ದ ಜಿಡ್ಡುಗಟ್ಟಿದ ಮತಾಂಧಾನುಕರಣೆ ಮತ್ತು ಸಂಕುಚಿತ ಮನೋಭಾವದ ಪಾತ್ರಗಳ ಪರಿಚಯವೂ ಸಹ ಇದರಿಂದಾಗುತ್ತದೆ.



# ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಕೃತಿಶ್ರೇಣಿ

**ಭಾ**ವಿಸಮೀರರ ಭಟಾಗ್ರಣಿಗಳೂ, ಪಂಡಿತವರೇಣ್ಯರೂ ಆಗಿದ್ದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಮಾಡಿದ ಸಾಧನೆ ಮತ್ತು ಸಾರಸ್ವತ ಭಂಡಾರಕ್ಕೆ ಕೊಟ್ಟ ಕೊಡುಗೆ ಅಜರಾಮರವಾದವು. ರಾಜರ ಋಜುತ್ವೋತ್ಕರ್ಷವನ್ನು ಸಮರ್ಥವಾಗಿ ಪ್ರತಿಪಾದಿಸುವ ಮಹತ್ತರ ಉದ್ದೇಶಕ್ಕಾಗಿಯೇ ಭುವಿಗವತರಿಸಿದ ಆಚಾರ್ಯರು ತಮ್ಮ ಗುರಿ ಸಾಧನೆಯ ದಿಸೆಯಲ್ಲಿ ಪ್ರದರ್ಶಿಸಿದ ಅಪ್ರತಿಮ ಧೈರ್ಯ, ಸಾಹಸಗಳು ನೂರಾರು ಸಾಧಕರಿಗೆ ನವ ಸ್ಫೂರ್ತಿಯನ್ನು ತುಂಬಿದವು. ಆ ವಿಶ್ವಾಸದ ಬೆಳಕಿನಲ್ಲಿ ನಡೆಯುತ್ತಿದ್ದ ಸಜ್ಜನ ವೃಂದವಂತೂ ಆಚಾರ್ಯರ ಪ್ರವೇಶದಿಂದ ಹೊಸ ಹುಟ್ಟನ್ನೇ ಪಡೆದುಕೊಂಡಿತು. ಅವರ ಜೀವಿತಾವಧಿ ಯಲ್ಲಿ ನಡೆದ ತಾತ್ವಿಕ ಸಂಘರ್ಷ; ಕುಂಭಕೋಣ, ಕೊಯಮತ್ತೂರು ಮುಂತಾದ ಕಡೆಗಳಲ್ಲಿ ಬುಗಿಲೆದ್ದ ಋಜುತ್ವ ವಿರೋಧೀಜ್ವಾಲೆ, ತಟ್ಟಿದ ಬಹಿಷ್ಕಾರದ ಬಿಸಿ ಕಾನೂನಿನ ಸಮರ ಮೊದಲಾದ ಸಂಕಷ್ಟಗಳನ್ನು ಗಮನದಲ್ಲಿರಿಸಿ ನೋಡಿದಾಗ ಆಚಾರ್ಯರು ಕ್ರಮಿಸಿದ ಹಾದಿ, ಮುಟ್ಟಿದ ಗುರಿ ಮತ್ತು ನಿರ್ಮಿಸಿದ ವೈವಿಧ್ಯಪೂರ್ಣ ಕೃತಿಶ್ರೇಣಿ ನಿಜಕ್ಕೂ ವಿಸ್ಮಯಕರವಾದವು. ಬಿಂಬೋಪಾಸನೆಯ ಮಹತ್ವದ ಘಟ್ಟವನ್ನು ತಲುಪಿದ ಸಾತ್ವಿಕ ಚೇತನವೊಂದರ ಸಾರ್ಥಕ ಸೃಷ್ಟಿಗಳಾಗಿ ಅವರ ಕೃತಿಗಳು ಈ ಹೊತ್ತಿಗೂ ಸಾರಸ್ವತ ಲೋಕದಲ್ಲಿ ಮಾನ್ಯತೆ ಪಡೆದಿವೆ. ಅಪೂರ್ವ ಪ್ರತಿಭಾ ಸಾಮರ್ಥ್ಯದ ಹೆಗ್ಗುರುತಾಗಿರುವ ಆಚಾರ್ಯರ ಒಂದೊಂದು ಕೃತಿಗಳೂ ಅವರ ಪ್ರಗಲ್ಭ ಪಾಂಡಿತ್ಯ, ಪ್ರಾಮಾಣಿಕ ಅಭಿವ್ಯಕ್ತಿ ಮತ್ತು ಹೃದಯ ಶ್ರೀಮಂತಿಕೆಯ ಪ್ರತಿಬಿಂಬಗಳಾಗಿವೆ.

ಜಂಬುಖಂಡಿ ಆಚಾರ್ಯರು ರಚಿಸಿರುವ ಕೃತಿಗಳು, ಸಂಖ್ಯೆ ಹಾಗೂ ಮೌಲ್ಯದ ದೃಷ್ಟಿಯಿಂದಲೂ ಹಿರಿದಾಗಿವೆ. ದೇಶದಾದ್ಯಂತ ಮಿಂಚಿನಂತೆ ಸಂಚಾರ ಕೈಗೊಂಡು, ಕಾಶ್ಮೀರ ಮೊದಲಾದ ರಾಜಮಹಾರಾಜರ ಆಸ್ಥಾನಕ್ಕೆ ಹೋಗಿ ಅಲ್ಲಿ ಹಲವಾರು ಪರವಾದಿಗಳನ್ನು ಜಯಿಸಿ, ರಾಜಸನ್ಮಾನವನ್ನು ಪಡೆದ ಆಚಾರ್ಯರು ತಮ್ಮ ಸಿದ್ಧಾಂತ ಪ್ರತಿಪಾದನೆಗಾಗಿ ಮತ್ತು ಪರಮತ ನಿರಾಕರಣೆಗಾಗಿ ಹಲವಾರು ಖಂಡನ-ಮಂಡನ ಕೃತಿಗಳನ್ನು ರಚಿಸಿರುವ ಸಾಧ್ಯತೆಯಿದೆ. ಪೂರ್ವಸೂರಿಗಳ ಗ್ರಂಥಗಳಿಗೆ ವ್ಯಾಖ್ಯಾನಗಳಲ್ಲದೇ ಅನೇಕ ಸ್ವತಂತ್ರ ಗ್ರಂಥಗಳನ್ನೂ ಅವರು ನಿರ್ಮಿಸಿರಬಹುದು. ಆದರೆ ವ್ಯಾಖ್ಯಾನ ಕೃತಿಗಳೇ ಹೆಚ್ಚಿದ್ದು ಅವು ಆಚಾರ್ಯರ ಇತರ ಕೃತಿಗಳಿಗಿಂತಲೂ ನೀಡಿದಾಗಿದ್ದು ಬಹುವಾಗಿ ಪದ್ಯ ರೂಪದಲ್ಲಿವೆ. ಪ್ರತಿಯೊಂದು ಹಂತದಲ್ಲಿಯೂ ತಮ್ಮ ಪೂರ್ವಸೂರಿಗಳ ಮೇಲ್ಪಂಕ್ತಿಯನ್ನು ಅನುಸರಿಸಿರುವುದು ನಿಚ್ಚಳವಾಗಿ ಕಂಡುಬರುತ್ತದೆ[1]. ಹರಿವಾಯು ಗುರುಗಳ ಭಕ್ತಾಗ್ರೇಸರರಾಗಿದ್ದುದ್ದರಿಂದ ನೂರಾರು ಸ್ತೋತ್ರಾವಲಿಗಳೂ ಸಹ ಅವರಿಂದ ಮೂಡಿರಬಹುದು. ಆದರೆ ನಮ್ಮ ದುರಾದೃಷ್ಟದಿಂದ ಆಚಾರ್ಯರ ಎಲ್ಲ ಕೃತಿಗಳೂ ಇಂದು ಉಪಲಬ್ಧವಿಲ್ಲ. ಅವರು ಎಷ್ಟು ಕೃತಿಗಳನ್ನು ರಚಿಸಿದರೆಂಬ ನಿಖರ ಮಾಹಿತಿಯೂ

---

1. "ಆಚಾರ್ಯರ ಗ್ರಂಥಸಂಪತ್ತು ದ್ವಿಮುಖವಾಗಿವೆ. ವ್ಯಾಖ್ಯಾನ ಮತ್ತು ಸ್ವತಂತ್ರ ಕೃತಿಗಳು. ಇವುಗಳಲ್ಲಿ ವ್ಯಾಖ್ಯಾನ ಕೃತಿಗಳೇ ಸುದೀರ್ಘವಾಗಿದ್ದು ಉಳಿದವು ಲಘು ಕೃತಿಗಳಾಗಿವೆ. ಇನ್ನೊಂದು ವಿಶೇಷವೆಂದರೆ ವ್ಯಾಖ್ಯಾನ ರಚನೆ ಸಂದರ್ಭದಲ್ಲಿಯೂ ಪದ್ಯ ರೂಪದಿಂದಲೇ ಹೆಚ್ಚಾಗಿ ಮಾಡಿದ್ದಾರೆ. ಸುಲಲಿತವಾದ ಇವರ ಪದ್ಯ ರಚನೆಯನ್ನು ನೋಡಿದರೆ, ಅದು ಇವರಿಗೆ ಸಂಪೂರ್ಣ ಕರಗತವಾಗಿದ್ದಂತೆ ತೋರುತ್ತದೆ. ಇದಲ್ಲದೆ ಆಚಾರ್ಯರು ಉದಾಹರಿಸಿರುವ ಪ್ರಮಾಣ ಪಂಕ್ತಿಗಳ ಸಂಖ್ಯೆಯನ್ನು ಮತ್ತು ವೈಶಾಲ್ಯವನ್ನು ನೋಡಿದರೆ, ಶ್ರೀಮದಾಚಾರ್ಯರ ಅನುಗ್ರಹದಿಂದ ಅವರ ಸರಣಿಯನ್ನೇ ಅನುಸರಿಸಿದಂತೆ ಕಾಣುತ್ತದೆ.

**– ಡಾ. ನಿಪ್ಪಾಣಿ ಗುರುರಾಜಾಚಾರ್ಯ**

(ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯ)

ಇದ್ದಂತಿಲ್ಲ. ಆದರೆ ಇಲ್ಲಿಯ ತನಕ ಲಭ್ಯವಿರುವ ಅವರ ಕೃತಿಗಳ ಸಂಖ್ಯೆ ಸುಮಾರು ನಲವತ್ತು.[1] ಆದರೆ ಲಭ್ಯವಿರುವ ಅವರ ಎಲ್ಲಾ ಕೃತಿಗಳೂ ಮುದ್ರಣವನ್ನು ಕಂಡಿಲ್ಲ. ಕೆಲವನ್ನು ಬಿಟ್ಟರೆ ಮಿಕ್ಕ ಕೃತಿಗಳೆಲ್ಲವೂ ಹಸ್ತಪ್ರತಿರೂಪದಲ್ಲಿದ್ದು ಅಪೂರ್ಣವಾಗಿವೆ. ಕಾಲನ ಕಾಲ್ತುಳಿತಕ್ಕೆ ಸಿಕ್ಕ ಕೆಲವಂತೂ ಓದಲಾಗದಷ್ಟು ತ್ರುಟಿತಗೊಂಡಿವೆ. ಪ್ರತಿಭೆಯೇ ಮೂರ್ತಿವೆತ್ತಂತಿದ್ದ ಧೀರೋದಾತ್ತ ವ್ಯಕ್ತಿತ್ವವೊಂದರ ಈ ಮಹೋನ್ನತ ಫಲಗಳನ್ನು ಜತನದಿಂದ ಸಂಗ್ರಹಿಸಿ, ಆಸ್ವಾದಿಸಲಾಗದಷ್ಟು ಹೊಣೆಗೇಡಿಗಳಾಗಿ ಬಿಟ್ಟೆವಲ್ಲಾ ಎಂಬುದೇ ವೇದನೆಯ ಸಂಗತಿಯಾಗಿದೆ. ವಿಶಾಲಹೃದಯದ ಪಂಡಿತಮಂಡಲಿಯಿಂದ ವ್ಯವಸ್ಥಿತ ಸಂಶೋಧನೆ ನಡೆದರೆ ಈಗಲೂ, ಆಚಾರ್ಯರ ಮತ್ತಷ್ಟು ಅಮೂಲ್ಯ ಕೃತಿಗಳು ಬೆಳಕಿಗೆ ಬರಬಹುದು. ಲಭ್ಯವಿರುವಷ್ಟೇ ಕೃತಿಗಳು ಸಮರ್ಪಕ ರೀತಿಯಲ್ಲಿ ಪ್ರಕಟವಾಗಿ ಜನಮನಕ್ಕೆ ತಲುಪಬಹುದು.

ವಿದ್ವನ್ಮಣಿಗಳಾಗಿ ಸಂಸ್ಕೃತ ಭೂಯಿಷ್ಠ ಪರಿಸರದಲ್ಲಿ ಹೆಚ್ಚು ಚರಿಸುತ್ತಿದ್ದುದ್ದರಿಂದ ಅವರ ಕೃತಿಶ್ರೇಣಿಯಲ್ಲಿ ಸಹಜವಾಗಿ ಸಂಸ್ಕೃತ ಗ್ರಂಥಗಳದೇ ಸಿಂಹಪಾಲು. ವ್ಯಾಸ-ದಾಸ ಸಾಹಿತ್ಯಗಳಲ್ಲಿ ಸಮಾನ ಪರಿಶ್ರಮವನ್ನು ಹೊಂದಿದ್ದ ಆಚಾರ್ಯರು ಸಂಸ್ಕೃತದಲ್ಲೆಷ್ಟು ಆಸಕ್ತಿ ಹಾಗೂ ಸಂಭ್ರಮದಿಂದ ಕೃತಿಗಳನ್ನು ರಚಿಸಿದರೋ ಅಷ್ಟೇ ಆಸಕ್ತಿ, ಸಂಭ್ರಮ, ಆದರಾಭಿಮಾನಗಳಿಂದ ಕನ್ನಡದಲ್ಲಿಯೂ ಕೃತಿಗಳನ್ನು ರಚಿಸಿರಬಹುದೆಂಬ ಅಭಿಪ್ರಾಯವನ್ನು ತಳ್ಳಿಹಾಕುವಂತಿಲ್ಲ. ಮೇಲಾಗಿ, ತಾವು ಸದೃಢವಾಗಿ ನಂಬಿದ್ದ ವಾದಿರಾಜ ಸ್ವಾಮಿಗಳೂ ಸಹ ವ್ಯಾಸ-ದಾಸ ಸಾಹಿತ್ಯಗಳ ಸವ್ಯಸಾಚಿಗಳು. ಕನ್ನಡದಲ್ಲಿ ನೂರಾರು ಕೀರ್ತನೆಗಳಲ್ಲದೇ, ದೀರ್ಘ ಕೃತಿಗಳನ್ನೂ ಸಹ ರಚಿಸಿದ ಹಿರಿಮೆ ಅವರದು; ಆಚಾರ್ಯರ ಮೇಲೆ ಗಾಢ ಪ್ರಭಾವ ಬೀರಿದ್ದ ಲಿಂಗಸೂಗೂರು ರಾಮದಾಸರು,

---

1. "A scholar in his own right the Acharya left us nearly forty works, partly in Sanskrit and in Kannada on Sastrartha, Dasa Sahitya etc.

- Dr. B.N.K. Sharma

(ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆಯ ಮುನ್ನುಡಿ)

ಕಮಲಾಪತಿ ವಿಠಲದಾಸರು, ಹೊನ್ನಾಳಿದಾಸರು ಮುಂತಾದವರೂ ಸಹ ಹರಿದಾಸರಾಗಿದ್ದು ಕನ್ನಡದಲ್ಲಿ ಹಲವಾರು ಕೀರ್ತನೆಗಳನ್ನು ರಚಿಸಿರುತ್ತಾರೆ. ಹಾಗಾಗಿ ಆಚಾರ್ಯರೂ ಸಹ ಈ ಮಹನೀಯರ ಮೇಲ್ಪಂಕ್ತಿಯನ್ನು ಅನುಸರಿಸಿರಬೇಕು. ಇದಲ್ಲದೇ, ಆಂಗ್ಲ ಭಾಷೆಯಲ್ಲಿಯೂ ಅವರಿಗೆ ಉತ್ತಮ ಪ್ರಭುತ್ವವಿತ್ತೆನ್ನುವುದಕ್ಕೆ ತಮ್ಮ ಜೀವಿತದ ಪ್ರಮುಖ ಘಟನೆಗಳನ್ನು ಬಿಂಬಿಸಲು ಅವರೇ ಪ್ರಕಟಿಸಿರುವ "An Exposition" ಎಂಬ ಚಾರಿತ್ರಿಕ ದಾಖಲೆಯೇ ಸಾಕ್ಷಿಯಾಗಿದೆ. ಆದರೂ ಪ್ರಾಕೃತ ಭಾಷೆಯಾದ ಕನ್ನಡಕ್ಕೆ ದೇವಭಾಷೆಯ ಸ್ಥಾನವನ್ನು ತಂದುಕೊಟ್ಟ ಮೋಕ್ಷಪ್ರದ ಕೃತಿ ಶ್ರೀಜಗನ್ನಾಥದಾಸರ "ಹರಿಕಥಾಮೃತಸಾರ"ಕ್ಕೆ ಅವರು ರಚಿಸಿರುವ "ಭಾವಸೂಚನೆ" ಎಂಬ ವ್ಯಾಖ್ಯಾನದ ಅರ್ಪಣಾ ಪದ್ಯಗಳನ್ನು ನೋಡಿದಾಗ, ಇಭವರದ ವಿಠಲಾಂಕಿತರಾಗಿ ಹರಿದಾಸರಾಗಿದ್ದ ಆಚಾರ್ಯರು ಕನ್ನಡದಲ್ಲಿ ಭಾವಪೂರ್ಣ ಕೀರ್ತನೆಗಳನ್ನೂ, ಪ್ರಮೇಯಭರಿತ ಕೃತಿಗಳನ್ನೂ ಅಧಿಕ ಸಂಖ್ಯೆಯಲ್ಲಿ ರಚಿಸಿರಬೇಕೆನ್ನಿಸುತ್ತದೆ. ಭಾವ ಸೂಚನೆಯ ಅರ್ಪಣಾ ಪದ್ಯಗಳು ಕೇವಲ ಮೂರು ನುಡಿಗಳಾದರೂ ಅವುಗಳಲ್ಲಿ ಮಿಂಚುವ ಕಾವ್ಯ ಸೌಂದರ್ಯ, ನಿರೂಪಣಾ ಚಾತುರ್ಯ ಮತ್ತು ಭಾಷಾ ಪ್ರೌಢಿಮೆಗಳು ಇದನ್ನು ಸಮರ್ಥಿಸುತ್ತವೆ. ಅವರು ರಚಿಸಿರುವ "ಬದರೀನಾರಾಯಣ ಸ್ತುತಿ, ಹನುಮತ್ ಪ್ರಾರ್ಥನಾ, ವಾದಿರಾಜ ಪ್ರಾರ್ಥನಾ, ವಿದ್ಯಾಧೀಶಾಷ್ಟಕಮ್, ಷೋಡಶಕಲಾಭಿಮಾನಿ ದೇವತಾಸ್ತೋತ್ರಂ" ಮುಂತಾದ ಸ್ತೋತ್ರ ಸಾಹಿತ್ಯವನ್ನು ನೋಡಿದರೆ ಆಚಾರ್ಯರು ಸಹಜ ಕವಿಯಂತೆ ತೋರುತ್ತಾರೆ. ಇದಲ್ಲದೇ ಹರಿಕಥಾಮೃತಸಾರಕ್ಕೆ ಅವರು ರಚಿಸಿರುವ ಮತ್ತೊಂದು ವ್ಯಾಖ್ಯಾನವಾದ "ಶ್ರೀವ್ಯಾಸದಾಸ ಸಿದ್ಧಾಂತಕೌಮುದೀ" ಎಂಬ ಕೃತಿ ಉಭಯ ಸಾಹಿತ್ಯಗಳಲ್ಲಿ ಅವರು ಸಾಧಿಸಿದ್ದ ಸಮನ್ವಯತೆಯನ್ನು ಪ್ರಕಟಗೊಳಿಸುತ್ತದೆ. ಇದಕ್ಕೆ ಪೂರಕವೆಂಬಂತೆ ಶ್ರೀವಿಷ್ಣುತೀರ್ಥ ವಿರಚಿತ "ಅಧ್ಯಾತ್ಮರಸರಂಜನಿ" ಎಂಬ ಅಪೂರ್ವ ಸಂಸ್ಕೃತ ಗ್ರಂಥಕ್ಕೆ ಆಚಾರ್ಯರು ತಿಳಿಗನ್ನಡದಲ್ಲಿ ರಚಿಸಿರುವ ವ್ಯಾಖ್ಯಾನವೂ ಲಭ್ಯವಿದೆ. ಇಷ್ಟಕ್ಕೇ ತೃಪ್ತರಾಗದೇ ಅವರು

ಹರಿಕಥಾಮೃತಸಾರಕ್ಕೆ "ಹರಿಕಥಾಮೃತಸಾರಪಂಚಿಕಾ" ಎಂಬ ವ್ಯಾಖ್ಯಾನ ವನ್ನು ಸಹ ಬರೆದಿರುತ್ತಾರೆ. ಆದರೆ ಅದು ಪೂರ್ಣವಾಗಿ ಉಪಲಬ್ಧ ವಿದ್ದಂತೆ ತೋರುವುದಿಲ್ಲ.

ಗಹನವಾದ ಶಾಸ್ತ್ರಾರ್ಥಗಳನ್ನು ಕಾವ್ಯಮಯವಾಗಿ ಮನವೊಪ್ಪುವಂತೆ ತಮ್ಮ ಕೃತಿಗಳಲ್ಲಿ ನಿರೂಪಿಸುವ ಆಚಾರ್ಯರು, ಹಲವಾರು ಪ್ರಮಾಣ ಪಂಕ್ತಿಗಳ ಹೊಳಹಿನಲ್ಲಿ ಅದನ್ನು ಸಮರ್ಥಿಸುತ್ತಾರೆ. ಅವರ ವಿವರಣೆ ಗಳಲ್ಲಿ ಕಂಡುಬರುವ ನೇರವಂತಿಕೆ ಮತ್ತು ಸರಳತೆ ಕೃತಿಯ ಸೊಬಗನ್ನು ಹೆಚ್ಚಿಸಿವೆ. ಸಂಸ್ಕೃತದಲ್ಲಿರುವ ಅವರ ಸ್ತೋತ್ರ ಸಾಹಿತ್ಯವಂತೂ, ಭಾಷೆಯ ಬಂಧವನ್ನು ಮೀರಿದ ಭಾವ ಬಂಧುರದಲ್ಲಿ ಅರಳಿದೆ. ಗಮನಾರ್ಹ ಅಂಶವೆಂದರೆ ಆಚಾರ್ಯರು ಯಾವುದೇ ಕೃತಿಯನ್ನು ರಚಿಸಲಿ ಅದರ ಮಂಗಳಾಚರಣೆ ಹಾಗೂ ಅಂತ್ಯ ಶ್ಲೋಕಗಳಲ್ಲಿ ತಪ್ಪದೇ ತಮ್ಮ ಆರಾಧ್ಯ ಗುರುಗಳನ್ನು ಶ್ರದ್ಧೆಯಿಂದ ಸ್ಮರಿಸಿ ಅವರ ಋಜುಮಹಿಮೆಗಳನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಕೊಂಡಾಡುತ್ತಾರೆ. ಕೆಲವೊಮ್ಮೆ ಸಂದರ್ಭೋಚಿತ ವಾಗಿ ಕೃತಿಯ ಪ್ರಮುಖ ಘಟ್ಟಗಳಲ್ಲಿಯೂ ಉಲ್ಲೇಖಿಸುವುದುಂಟು. ಆಚಾರ್ಯರ ಈ 'ಋಜುದೀಕ್ಷೆ' ಕೃತಿಯ ದಿಕ್ಕು ತಪ್ಪಿಸದೆ ಅದಕ್ಕೆ ಅಪೂರ್ವ ಕಾಂತಿಯನ್ನೇ ತೀಡಿದೆ.

ಜಂಬುಖಂಡಿ ಆಚಾರ್ಯರ ವಂಶಸ್ಥರಿಂದ ಹಾಗೂ ವಿವಿಧ ಮೂಲಗಳಿಂದ ಅವರ ಲಭ್ಯ ಕೃತಿಗಳನ್ನು ಸಂಶೋಧಿಸಿ ವಿದ್ವಾಂಸರಾದ ಡಾ. ನಿಪ್ಪಾಣಿ ಗುರುರಾಜಾಚಾರ್ಯರು ಮಹೋಪಕಾರವನ್ನೇ ಮಾಡಿರು ತ್ತಾರೆ. ಅವರು ನೀಡಿರುವ ಪಟ್ಟಿಯಂತೆ ಜಂಬುಖಂಡ್ಯಾರ್ಯರು ರಚಿಸಿರುವ ಕೃತಿ, ವಿವರಗಳು ಹೀಗಿವೆ :

**1) ಶ್ರೀವ್ಯಾಸ-ದಾಸ ಸಿದ್ಧಾಂತ ಕೌಮುದೀ**

ಹರಿದಾಸ ಚತುಷ್ಟಯರಲ್ಲಿ ಒಬ್ಬರೆಂದು ಪ್ರಖ್ಯಾತರಾದ ಶ್ರೀಜಗನ್ನಾಥ ದಾಸರ ಮೇರುಕೃತಿ "ಶ್ರೀಹರಿಕಥಾಮೃತಸಾರ"ಕ್ಕೆ ಬರೆದ ವ್ಯಾಖ್ಯಾನ ಇದಾಗಿದೆ. ಒಂದೇ ಆಗಿರುವ ವ್ಯಾಸ-ದಾಸ ಸಾಹಿತ್ಯದ ತಿರುಳನ್ನು

ಮುಮುಕ್ಷುಗಳ ಆಸ್ವಾಧನೆಗಾಗಿ ತೆರೆದಿಡುವುದು ಹಾಗೂ ಇವೆರಡನ್ನೂ ಸಮನ್ವಯಗೊಳಿಸುವುದು ಕೃತಿಯ ಮೂಲ ಉದ್ದೇಶವೆಂದು ಶೀರ್ಷಿಕೆಯೇ ಸಾದರಪಡಿಸುತ್ತದೆ. ಹಾಗಾಗಿ ಇದು ಉಭಯ ಸಾಹಿತ್ಯ ಪ್ರಿಯರ ಪಾಲಿಗೂ ಒಂದು ದೀಪ್ತಿಯಂತಿದ್ದು ಹಲವಾರು ಅಧ್ಯಾತ್ಮಿಕ ಮೌಲ್ಯಗಳ ಮತ್ತು ರಹಸ್ಯಪ್ರಮೇಯಗಳ ಮೇಲೆ ಬೆಳಕು ಚೆಲ್ಲುತ್ತವೆ. ಸಾಹಿತ್ಯ ಸೊಬಗುಳ್ಳ ಈ ಸುಂದರ ವ್ಯಾಖ್ಯಾನವನ್ನು "ಪಂಚರತ್ನ ಪ್ರಕಾಶಿಕಾ" ದಲ್ಲಿ ಮೊಟ್ಟಮೊದಲ ಬಾರಿಗೆ ಪ್ರಸಿದ್ಧಿಸಿದ ಕೀರ್ತಿ ಲಿಂಗಸೂಗೂರಿನ ಶ್ರೀವರದೇಂದ್ರ ಸಾಹಿತ್ಯ ಮಂಡಲಿಯ ಶ್ರೀಗೋರಾಬಾಳು ಹನುಮಂತ ರಾಯರದು. ಈಗಾಗಲೇ ಎರಡು ಮುದ್ರಣವನ್ನು ಕಂಡಿರುವ "ಪಂಚರತ್ನ ಪ್ರಕಾಶಿಕಾ"ವನ್ನು ಪ್ರಸಿದ್ಧ ಪಂಡಿತರಾದ ಶ್ರೀಜಾಲಿಹಾಳ ಕೇಶವಾ ಚಾರ್ಯರು ಅನುವಾದಿಸಿರುತ್ತಾರೆ. ಆಚಾರ್ಯರ ಈ ಮೇರು ಕೃತಿ ಇನ್ನೂ ಕೆಲವು ಕಡೆ ಪ್ರಕಾಶಿತಗೊಂಡಿರುವುದು ಕಂಡುಬರುತ್ತದೆ.

## 2) ಭಾವಸೂಚನೆ

"ಭಾವಸೂಚನೆ" ಎಂಬುದು ಹರಿಕಥಾಮೃತಸಾರಕ್ಕೆ ಆಚಾರ್ಯರು ಬರೆದ ವ್ಯಾಖ್ಯಾನವಾಗಿದ್ದು ವ್ಯಾಸ–ದಾಸ ಸಾಹಿತ್ಯದ ಸೊಬಗನ್ನು ಉಣಬಡಿಸುವಲ್ಲಿ ಇಟ್ಟ ಮತ್ತೊಂದು ಸದೃಢ ಹೆಜ್ಜೆಯಾಗಿದೆ. ಸಂಸ್ಕೃತ ಮಿಶ್ರಿತ ಕನ್ನಡ ಭಾಷೆಯಲ್ಲಿರುವ ಈ ಕೃತಿಯಲ್ಲಿ ಆಚಾರ್ಯರು ಹಲವಾರು ಅಪರೋಕ್ಷ ಜ್ಞಾನಿಗಳಾದ ಹರಿದಾಸರ ವಚನಗಳನ್ನು ಪೂರಕ ವಾಗಿ ಬಳಸಿಕೊಂಡಿದ್ದಾರೆ. ಮೂಲಕೃತಿಯಷ್ಟೇ ಅಲ್ಲದೇ ಶ್ರೀದವಿಠಲದಾಸ ರಿಂದ ರಚಿತವಾಗಿರುವ ಹರಿಕಥಾಮೃತಸಾರದ ಫಲಸ್ತುತಿ ಸಂಧಿಗೂ ಸಹ ಆಚಾರ್ಯರು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಇದೂ ಕೂಡ ವರದೇಂದ್ರ ಸಾಹಿತ್ಯ ಮಂಡಲದ "ಪಂಚರತ್ನಪ್ರಕಾಶಿಕಾ"ದಲ್ಲಿ ಪ್ರಕಾಶಿತ ಗೊಂಡಿದೆ.

## 3) ಶ್ರೀಹರಿಕಥಾಮೃತಸಾರ ಪಂಚಿಕಾ

ಕೃತಿಯ ಹೆಸರೇ ಹೇಳುವಂತೆ ಇದೂ ಸಹ ಶ್ರೀಜಗನ್ನಾಥದಾಸ ರಾಯರ "ಹರಿಕಥಾಮೃತಸಾರ"ಕ್ಕೆ ಬರೆದ ಮತ್ತೊಂದು ವ್ಯಾಖ್ಯಾನ.

ಹಸ್ತಪ್ರತಿ ರೂಪದಲ್ಲಿರುವ ಈ ವ್ಯಾಖ್ಯಾನ ಪೂರ್ಣವಾಗಿ ಉಪಲಬ್ಧವಿದ್ದಂತೆ ತೋರುವುದಿಲ್ಲ.

**4) ಶ್ರೀವಿಜಯದಾಸಮಹೋದಯಾನಾಂ ಸುಳಾದೇಃ ಅರ್ಥಕಥನಮ್**

ಭೃಗು ಋಷಿಗಳ ಅಂಶಸಂಭೂತರೆಂದು ಪ್ರಖ್ಯಾತರಾದ ಶ್ರೀವಿಜಯ ದಾಸಾರ್ಯರ ಸುಳಾದಿಯನ್ನು ಕುರಿತು ಸಂಸ್ಕೃತದಲ್ಲಿ ಬರೆದಿರುವ ಅಪೂರ್ವ ವ್ಯಾಖ್ಯಾನ. ಸುಳಾದಿಯ ಅರ್ಥ ವಿವರಣೆಗಳು ಸರಳ ಹಾಗೂ ಆತ್ಮೀಯ ಧಾಟಿಯಲ್ಲಿದ್ದು ಓದುಗರ ಮೇಲೆ ಗಾಢಪ್ರಭಾವ ಬೀರುತ್ತವೆ. ವಿಜಯದಾಸರಂತಹ ದಾಸವರೇಣ್ಯರ ಕುರಿತಾಗಿ ಪಂಡಿತರಾದ ಆಚಾರ್ಯರಿಗಿದ್ದ ಶ್ರದ್ಧಾಭಕ್ತಿಗಳಿಗೆ ಮತ್ತು ಅವರ ದಾಸ–ಸಾಹಿತ್ಯಾಭಿಮಾನಕ್ಕೆ ಹಿಡಿದ ಕೈಗನ್ನಡಿ ಈ ಪುಟ್ಟ ಕೃತಿ.

**5) ಶ್ರೀವಿದ್ಯಾಧೀಶಾಷ್ಟಕಮ್**

ಆಚಾರ್ಯರ ವಿದ್ಯಾಗುರುಗಳಾದ ಉಡುಪಿ ಶ್ರೀಕೃಷ್ಣಾಪುರ ಮಠಾಧೀಶ ಶ್ರೀವಿದ್ಯಾಧೀಶ ತೀರ್ಥರನ್ನು ಕುರಿತು ರಚಿತಗೊಂಡಿರುವ ಈ ಪುಟ್ಟ ಅಷ್ಟಕ ಅವರ ಅಸೀಮ ಗುರುಭಕ್ತಿಗೆ ದ್ಯೋತಕವಾಗಿದೆ. ವಿದ್ಯಾಧೀಶರ ಮಹಿಮಾನ್ವಿತ ವ್ಯಕ್ತಿತ್ವವನ್ನು ಬಿಂಬಿಸುವ ಈ ಸ್ತೋತ್ರವನ್ನು ನೋಡಿದರೆ ಆಚಾರ್ಯರು ಶ್ರೀಗಳವರ ಅಂತ್ಯ ಕಾಲದಲ್ಲಿ ಅಥವಾ ಅವರ ಕಾಲಾನಂತರ ರಚಿಸಿರಬಹುದೆಂದು ತೋರುತ್ತದೆ.

"ಶ್ರೀಮದ್ವಿಕ್ರಮವತ್ಸರೇ ಮಿಥುನಗೇ ಸೂರ್ಯೇ ಹರೇರ್ವಾಸರೇ।
ಜ್ಯೇಷ್ಠೇ ಕೃಷ್ಣಸುಪಕ್ಷಕೇ ಗುರವರಾಃ ವೈಕುಂಠಲೋಕಂ ಶ್ರಿತಾಃ॥"

ಎಂಬುದಾಗಿ ವಿದ್ಯಾಧೀಶರು ವೃಂದಾವನಸ್ಥರಾದ ಕಾಲವನ್ನು ಸಹ ದಾಖಲಿಸಿರುವುದು ಈ ಅಷ್ಟಕದ ವಿಶೇಷ. ಶ್ರೀಗಳವರು ಹರಿಪಾದವನ್ನು ಸೇರಿದ ನಂತರ ಶ್ರೀಜಂಬುಖಂಡ್ಯಾರ್ಯರೇ ಮುಂದೆ ನಿಂತು ಬೆಂಗಳೂರಿನ ಸಿಟಿ ಮಾರ್ಕೆಟ್ ಪ್ರದೇಶದಲ್ಲಿರುವ ಗುಂಡೋಪಂತರ ಬೀದಿಯ ಕೃಷ್ಣ ಮಂದಿರದಲ್ಲಿ ಗುರುಗಳ ವೃಂದಾವನ ನಿರ್ಮಾಣ ಕಾರ್ಯದಲ್ಲಿ ಪೂರ್ಣ ನೆರವಾದರೆಂಬ ಹೇಳಿಕೆಯಿದೆ.

### 6) ಶ್ರೀವೃಂದಾವನಾಚಾರ್ಯ ಸ್ತೋತ್ರಮ್.

ರಾಜರ ಋಜುಮಹಿಮೆಗಳನ್ನು ಜಗತ್ತಿಗೆ ಪ್ರಕಟಿಸುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದ ಸೋದೆಮಠದ ಶಕಪುರುಷ ಶ್ರೀವಿಶ್ವಪ್ರಿಯತೀರ್ಥರ ಸ್ತೋತ್ರ. ವೃಂದಾವನಾಚಾರ್ಯರೆಂದು ಪ್ರಸಿದ್ಧವಾದ ಶ್ರೀಗಳವರ ಘನವ್ಯಕ್ತಿತ್ವವನ್ನು ಈ ಪುಟ್ಟ ಕೃತಿಯಲ್ಲಿ ಜಂಬುಖಂಡ್ಯಾರ್ಯರು ಪ್ರಭಾವಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ.

### 7) ಶ್ರೀವಿಷ್ಣುತೀರ್ಥ ವಿಜಯ

ಶ್ರೀವ್ಯಾಸತತ್ವಜ್ಞರ ವಿದ್ಯಾಶಿಷ್ಯರೂ, ಮೋದನೂರಿನ ಮಹಾಮುನಿಗಳೂ ಆದ ಶ್ರೀವಿಷ್ಣುತೀರ್ಥರ ರೋಚಕ ಜೀವಿತವನ್ನು ಸುಂದರವಾಗಿ ಕಟ್ಟಿಕೊಡುವ ಕಾವ್ಯಕೃತಿ. ಇದರ ಪ್ರಾರಂಭದ ಮಂಗಳಾಚರಣೆಯಲ್ಲಿ ಆಚಾರ್ಯರು ವಾದಿರಾಜರ ಋಜು ಮಹಿಮೆಗಳನ್ನು ದಾರ್ಢ್ಯದಿಂಧ ಉಲ್ಲೇಖಿಸುತ್ತಾರೆ. ವಿಷ್ಣುತೀರ್ಥರ ಸಿದ್ಧಿ-ಸಾಧನೆಗಳ ಮೇಲೆ ಮಹತ್ವದ ಬೆಳಕು ಚೆಲ್ಲುವ ಮತ್ತು ಹಲವಾರು ರಹಸ್ಯಪ್ರಮೇಯಭರಿತವಾದ ಈ ಸುಂದರ ಚಾರಿತ್ರಿಕಕೃತಿ ಅಧಿಕೃತವಾಗಿ ಎಲ್ಲೂ ಪ್ರಕಟಗೊಂಡಂತೆ ತೋರುವುದಿಲ್ಲ.

### 8) ಶ್ರೀಸುಮಧ್ವವಿಜಯಸರ್ಗಾರ್ಥಃ

ಅಡವಿ ಸ್ವಾಮಿಗಳಾದ ಶ್ರೀವಿಷ್ಣುತೀರ್ಥರು ಸುಮಧ್ವವಿಜಯದ ಹದಿನಾರು ಸರ್ಗಗಳ ಪ್ರಮೇಯಗಳನ್ನು ಸಂಗ್ರಹಿಸಿ ರಚಿಸಿರುವ "ಶ್ರೀಸುಮಧ್ವವಿಜಯಸಂಗ್ರಹಮಾಲಿಕಾ ಅಥವಾ ಫಲಮಾಲಿಕಾ" ಎಂಬ ಕೃತಿಯ ಬೆಳಕಿನಲ್ಲಿ ಆಚಾರ್ಯರು ಇದನ್ನು ರಚಿಸಿದ್ದಾರೆ. ಇದು ಅವರ ಸಂಗ್ರಹ ಸಾಮರ್ಥ್ಯವನ್ನು ಬಿಂಬಿಸುವುದಲ್ಲದೇ ಮೂಲಕೃತಿಯ ಹಿರಿಮೆಯನ್ನು ಸಹ ಧ್ವನಿಪೂರ್ಣವಾಗಿ ಸಾರುತ್ತದೆ.

### 9) ಅಧ್ಯಾತ್ಮರಸರಂಜನಿವ್ಯಾಖ್ಯಾನ

ಇದೂ ಸಹ ಅವಧೂತ ಶಿರೋಮಣಿಗಳೆಂದು ಪ್ರಖ್ಯಾತರಾದ ಶ್ರೀವಿಷ್ಣುತೀರ್ಥವಿರಚಿತ ಅಮೂಲ್ಯ ಕೃತಿ "ಅಧ್ಯಾತ್ಮರಸರಂಜನಿ"ಗೆ ಬರೆದ

ವಿಸ್ತೃತ ವ್ಯಾಖ್ಯಾನ. ಇದರಲ್ಲಿ "ಮನೋದೋಷನಿರಸನ" ಪ್ರಕರಣವನ್ನು ಮಾತ್ರ ವಿಶ್ಲೇಷಿಸಿರುವ ಆಚಾರ್ಯರು ದ್ವಂದ್ವ ಕ್ರಿಯಾನುಸಂಧಾನ, ಬಿಂಬೋಪಾಸನೆಯ ಮಹತ್ವವನ್ನು ಎತ್ತಿಹಿಡಿದಿದ್ದಾರೆ. ಇದನ್ನು ಆಚಾರ್ಯರು ಪ್ರತ್ಯೇಕವಾಗಿ ಸಂಸ್ಕೃತ ಹಾಗೂ ಕನ್ನಡ-ಎರಡೂ ಭಾಷೆಗಳಲ್ಲಿ ರಚಿಸಿರುವುದು ಕಂಡು ಬರುತ್ತದೆ. ಆಚಾರ್ಯರ ಕನ್ನಡ ವ್ಯಾಖ್ಯಾನವನ್ನು ಶ್ರೀಗುರುಗೋವಿಂದದಾಸರು ತಮ್ಮ "ಗುರುಕೃಪಾಗ್ರಂಥ ಮಾಲೆ"ಯಿಂದ ಪ್ರಕಟಿಸಿ ಮಹೋಪಕಾರ ಮಾಡಿರುತ್ತಾರೆ.

### 10) ಶ್ರೀಧವಲಗಂಗಾಸ್ತೋತ್ರಮ್

ಗಂಗಾ ಸನ್ನಿಧಾನವನ್ನು ಹೊಂದಿರುವ ಬಹು ಪುರಾತನವೂ, ಪವಿತ್ರವೂ ಆದ ಶ್ರೀ ಧವಲಗಂಗಾತೀರ್ಥವನ್ನು ಕುರಿತಾದ ಸಪ್ತಶ್ಲೋಕ ಗಳುಳ್ಳ ಸುಂದರಕೃತಿ. ಸೋದಾ ಕ್ಷೇತ್ರದ ಮಹತ್ವದ ಆಕರ್ಷಣೆಗಳಲ್ಲಿ ಒಂದಾದ ಧವಲಗಂಗಾತೀರ್ಥ ರಾಜರು ವೃಂದಾವನಸ್ಥರಾಗುವ ಮೊದಲೇ ಇತ್ತೆಂದು ತಿಳಿದುಬರುತ್ತದೆ. ತ್ರುಟಿತ ಹಸ್ತಪ್ರತಿ ರೂಪದಲ್ಲಿರುವ ಈ ಸ್ತೋತ್ರ ಎಲ್ಲಿಯೂ ಪ್ರಕಟವಾದಂತಿಲ್ಲ.

### 11) ಷೋಡಶಕಲಾಭಿಮಾನಿ ದೇವತಾಸ್ತೋತ್ರಮ್

ಹೆಸರೇ ಸೂಚಿಸುವಂತೆ ಹದಿನಾರು ಕಲಾಭಿಮಾನಿ ದೇವತೆಗಳ ಈ ಸ್ತೋತ್ರವನ್ನೂ ಸಹ ಆಚಾರ್ಯರು ಹದಿನಾರು ಶ್ಲೋಕಗಳಲ್ಲಿ ರಚಿಸಿರು ತ್ತಾರೆ. ಷಟ್ ಪ್ರಶ್ನಭಾಷ್ಯ ಮತ್ತು ಟೀಕಾಗ್ರಂಥಗಳ ಚಿಂತನೆಯ ಬೆಳಕಿನಲ್ಲಿ ಒಡಮೂಡಿರುವ ಒಂದು ಸುಂದರ ಕೃತಿ ಇದು.

### 12) ಪಿತೃಪಾದಸ್ತುತಿಃ

ತೆಲಗು ಲಿಪಿಯಲ್ಲಿರುವ ಈ ಸ್ತೋತ್ರವೂ ಸಹ ಹದಿನಾರು ನುಡಿಗಳಿಂದ ಕೂಡಿದೆ. ಸಮೀರ, ಭಾವಿಸಮೀರ ಹಾಗೂ ಭಾವಿರುದ್ರ ಪದಾರ್ಹರಾದ ಭೂತರಾಜರ ಮಹಿಮಾವರ್ಣನೆಯೂ ಇದರಲ್ಲಿ ಬಂದಿದ್ದು ಬಹುಶಃ ಇದನ್ನು ಜಂಬುಖಂಡ್ಯಾರ್ಯರ ಕಿರಿಯಪುತ್ರರಾದ ಶ್ರೀನಿವಾಸಾಚಾರ್ಯರು ತೆಲುಗು ಲಿಪಿಯಲ್ಲಿ ಬರೆದಿಟ್ಟಿರಬೇಕೆಂದು ಊಹಿಸಲಾಗಿದೆ.

## 13) ಆತ್ಮವೃತ್ತಾಂತಃ – ಅನುಗ್ರಹಸಂಪಾದನಂ ಚ.

ಇತ್ತೀಚೆಗೆ ಲಭ್ಯವಾದ ಈ ಕೃತಿಯಲ್ಲಿ ಆಚಾರ್ಯರ ಆತ್ಮವೃತ್ತಾಂತದ ಹಲವಾರು ಮಹತ್ತರ ಘಟ್ಟಗಳ ಅಧಿಕೃತ ವಿವರಣೆಗಳಿವೆ. ವಿಭಿನ್ನ ವೃತ್ತಗಳಲ್ಲಿ ರಚಿತಗೊಂಡಿರುವ ಈ ಕೃತಿಯಲ್ಲಿ ಒಟ್ಟು ಐವತ್ತಾರು ಶ್ಲೋಕ ಗಳಿವೆ. ಇದು ಆಚಾರ್ಯರ ಜೀವನ–ಸಾಧನೆಗಳ ಮೇಲೆ ಬೆಳಕು ಚೆಲ್ಲುವ ಚಾರಿತ್ರಿಕ ದಾಖಲೆಯೂ ಹೌದು.

## 14) ಶ್ರೀವಾದಿರಾಜ ಪ್ರಾರ್ಥನಾ

ಆಚಾರ್ಯರ ಪದ್ಯರಚನಾ ಸಾಮರ್ಥ್ಯವನ್ನು ಸಮರ್ಥವಾಗಿ ಬಿಂಬಿಸುವ ಈ ಸುಂದರ ಕೃತಿಯಲ್ಲಿ ಸಮೀರಪದಾರ್ಹರಾದ ವಾದಿರಾಜರ ಗುಣಗಣವರ್ಣನೆಯಿದೆ. ಭಾವಪೂರ್ಣವಾದ ಈ ಸ್ತೋತ್ರ ದಲ್ಲಿ ಸೋದಾ ಕ್ಷೇತ್ರ ಮಹಿಮೆ ಹಾಗೂ ಗಂಗಾ ಸನ್ನಿಧಾನ ಯುಕ್ತವಾದ ಧವಲಗಂಗಾ ತೀರ್ಥೋದ್ಭವದ ಪ್ರಸ್ತಾಪವಿದೆ.

## 15) ಭವವಿಮೋಚಕ ಶ್ರೀಗುರುರಾಜ ಪ್ರಾರ್ಥನಾ

ಇಪ್ಪತ್ತೇಳು ಶ್ಲೋಕಗಳುಳ್ಳ ಈ ಸ್ತೋತ್ರವೂ ಸಹ ವಾದಿರಾಜರ ಪರ ವಾಗಿದೆ. ಜ್ಞಾತಾಜ್ಞಾತಾ ಸಂಭವಿಸಬಹುದಾದ ಹಲವಾರು ದೋಷಗಳನ್ನು ಪಟ್ಟಿ ಮಾಡಿ ಅವುಗಳ ಪರಿಹಾರಕ್ಕಾಗಿ ಆಚಾರ್ಯರು ಇಲ್ಲಿ ತಮ್ಮ ಆರಾಧ್ಯ ಗುರುಗಳಾದ ಶ್ರೀವಾದಿರಾಜ ಪೂಜ್ಯಚರಣರನ್ನು ಮನಮುಟ್ಟುವಂತೆ ಪ್ರಾರ್ಥಿಸುತ್ತಾರೆ. ಭಕ್ತಿಯ ಮೇರುಮಜಲನ್ನು ತೆರೆಯುವ ಈ ಸುಂದರ ಕೃತಿ ಆತ್ಮಶೋಧನೆಗಾಗಿ ತುಡಿಯುವ ಆಚಾರ್ಯರ ಶ್ರೀಮಂತ ವ್ಯಕ್ತಿತ್ವದ ಮೇಲೂ ಕ್ಷಕಿರಣ ಬೀರುತ್ತದೆ.

## 16) ಹಿತೋಪದೇಶಃ

ಇದೂ ಸಹ ಆತ್ಮಾವಲೋಕನಕ್ಕೆ ಸಂಬಂಧಿಸಿದ ಚಿಂತನೆ ಹಾಗೂ ಅನುಷ್ಠಾನಗಳ ವಿವರಗಳಿಂದ ಕೂಡಿದೆ. ಹಲವಾರು ಪ್ರಮೇಯಭರಿತ ವಿಷಯಗಳನ್ನು ಕ್ರೋಢೀಕರಿಸಿ ರಚಿಸಲಾಗಿರುವ ಈ ಪುಟ್ಟ ಕೃತಿ ಹಸ್ತಪ್ರತಿ ರೂಪದಲ್ಲಿದ್ದು ಸುಮಾರು ಆರು ಪುಟಗಳಿಷ್ಟಿದೆ ಎನ್ನಲಾಗಿದೆ.

## 17) ಲಯಕ್ರಮನಿರೂಪಣಮ್

ಶೇಷಮಾರ್ಗ ಹಾಗೂ ಗರುಡ ಮಾರ್ಗಗಳ ಉಲ್ಲೇಖದಿಂದ ಕೂಡಿದ ಈ ಸಂಸ್ಕೃತ ಕೃತಿ ಪೂರ್ಣವಾಗಿ ಗದ್ಯ ರೂಪದಲ್ಲಿದ್ದು ಆಚಾರ್ಯರ ಗದ್ಯ ರಚನಾ ಸಾಮರ್ಥ್ಯವನ್ನು ಪ್ರಕಟಪಡಿಸುತ್ತದೆ. ಸುಮಾರು ಎರಡು ಪುಟಗಳಿಷ್ಟಿರುವ ಈ ಕೃತಿಯೂ ಸಹ ಹಸ್ತಪ್ರತಿ ರೂಪದಲ್ಲಿದೆ.

## 18) ಲಯನಿರೂಪಣಮ್

ಲಯನಿರೂಪಣಮ್ ಸಹ "ಲಯ" ಪ್ರಮೇಯವನ್ನು ಕುರಿತಾದ ಆಚಾರ್ಯರ ಮತ್ತೊಂದು ಕೃತಿ. ಇದೂ ಸಹ ನಾಲ್ಕು ಪುಟಗಳಷ್ಟು ಗದ್ಯರೂಪದಲ್ಲಿದೆ.

## 19) ಅತಿಗೋಪ್ಯಮ್ ಅಥವಾ ಅನನ್ಯ ಪ್ರಾರ್ಥನಾ

ಹೆಸರೇ ಸೂಚಿಸುವಂತೆ ಇದು ತಾವು ನಂಬಿದ ಆರಾಧ್ಯ ಮೂರ್ತಿಯನ್ನು ಅನನ್ಯ ಭಾವದಿಂದ ಪ್ರಾರ್ಥಿಸುವ ಆತ್ಮನಿವೇದನೆಯಾಗಿದೆ. ಗದ್ಯಪದ್ಯಗಳ ಮಿಶ್ರಣ ರೂಪದಲ್ಲಿರುವ ಈ ಭಾವೋದ್ರೇಕ ಸ್ತುತಿಯನ್ನು ಆಚಾರ್ಯರು ಬಹುಶಃ ತಮ್ಮ ಅಂತ್ಯ ಕಾಲದಲ್ಲಿ ರಚಿಸಿರಬೇಕೆಂದು ಊಹಿಸಲಾಗಿದೆ.

ಪ್ರೀತೋ ಭವ ಮಹಾಬಾಹೋ ದುಷ್ಟಕ್ಷತ್ರನಿಬರ್ಹಣ ।
ಶ್ರೀರಾಮ ದೇಹಿ ಮೇ ಲೋಕಂ ತ್ವದಿಷ್ಟಂ ಯಚ್ಛುಭಾಶುಭಮ್ ॥
ತ್ವಾಂ ದ್ರಕ್ಷ್ಯಾಮಿ ಸದಾ ನೌಮಿ(ಸ್ತೌಮಿ) ತ್ವಾಮೇವ ಕಮಲೇಕ್ಷಣ ।
ತ್ವಾಮೇವ ಶರಣಂ ಯಾಮಿ ರಕ್ಷ ಜನ್ಮಾಂತರೇಪಿ ಮಾಮ್ ॥

ಎಂಬ ನುಡಿಗಳನ್ನು ಭಕ್ತಹೃದಯ ಕೂಡಿಟ್ಟುಕೊಳ್ಳುತ್ತದೆ.

## 20) ಗುರುಸ್ತೋತ್ರವಿವೃತಿ ಶೋಧನಮ್

ಆಚಾರ್ಯರು ಹರಿಕಥಾಮೃತಸಾರಕ್ಕೆ ರಚಿಸಿರುವ 'ಭಾವಸೂಚನೆ'ಯ "ಅಸ್ಯ ಅಪಭ್ರಂಶಭಾಷೋಪೇತಸ್ಯ ಪ್ರಾಮಾಣ್ಯಮಸ್ಮತ್ಕೃತಗುರುರಾಜ ಋಜುತ್ವ ವಿರೋಧಿಪರಿಮರ್ದನಗುರುಸ್ತೋತ್ರವಿವೃತಿಶೋಧನಯೋಃ ಸಮ್ಯಕ್ಪ್ರಪಂಚಿತಂ" ಎಂಬ ವಾಕ್ಯವನ್ನು ನೋಡಿದರೆ ಆಚಾರ್ಯರು ಋಜುತ್ವ

ವಿರೋಧಿ ಪರಿಮರ್ದನದೊಂದಿಗೆ 'ಗುರುಸ್ತೋತ್ರವಿವೃತಿಶೋಧನ'ವೆಂಬ ಮತ್ತೊಂದು ಕೃತಿಯನ್ನು ರಚಿಸಿರುವಂತೆ ತೋರುತ್ತದೆ. ವಾದಿರಾಜರ ಮಹಿಮಾಪ್ರತಿಪಾದನೆಯ ವಿಶಿಷ್ಟ ವಿವರಗಳಿಂದ ಕೂಡಿವೆ ಎಂದು ಹೇಳಲಾಗುವ ಈ ಕೃತಿ ಇಂದು ಉಪಲಬ್ಧವಿದ್ದಂತೆ ಕಾಣುವುದಿಲ್ಲ.

## 21) ಶ್ರೀವಾದಿರಾಜಕೃತಸ್ತೋತ್ರ ವ್ಯಾಖ್ಯಾನಮ್

ಶೀರ್ಷಿಕೆಯೇ ಸೂಚಿಸುವಂತೆ ಇದು ಶ್ರೀವಾದಿರಾಜರಿಂದ ರಚಿತಗೊಂಡಿರುವ ವಿವಿಧ ಸ್ತೋತ್ರಗಳ ಅಂತರಾರ್ಥವನ್ನು ಬಿಚ್ಚಿಡುವ ಒಂದು ಅಪೂರ್ವಗ್ರಂಥ. ಅವರ ಸ್ತೋತ್ರೋಕ್ತ ವಾಕ್ಯಗಳಿಂದಲೇ 'ರಾಜರ ಭಾವಿಸಮೀರತ್ವ' ವನ್ನು ಜಾಣ್ಮೆಯಿಂದ ನಿರೂಪಿಸುವ ಆಚಾರ್ಯರ ಈ ವೈಶಿಷ್ಟ್ಯಪೂರ್ಣ ವ್ಯಾಖ್ಯಾನಕೃತಿ ಇಂದು ಪೂರ್ಣವಾಗಿ ಉಪಲಬ್ಧವಿಲ್ಲ.

## 22) ಶ್ರೀಹಯಗ್ರೀವ ವಾದಿರಾಜ ಪ್ರಾರ್ಥನಾ

ಸಾಧನೆಗೆ ಪೂರಕವಾದ ಸಾತ್ವಿಕ ಸಂಪತ್ತನ್ನು ದಯಪಾಲಿಸುವಂತೆ ವಾದಿರಾಜರನ್ನು ಮತ್ತು ಅವರ ಅಂತಃಸ್ಥ ಹಯಗ್ರೀವ ದೇವರನ್ನು ಭಾವಪೂರ್ಣವಾಗಿ ಪ್ರಾರ್ಥಿಸುವ ಈ ಕಿರುಕೃತಿ ಕೇವಲ ಮೂರು ನುಡಿಗಳಿಂದ ಕೂಡಿದ್ದು ಹೀಗಿದೆ:

ವಿದಾನಂದಾತ್ಮಕಾತ್ಮಾನೌ ನಿರ್ದೋಷಿ ಮಮ ವಾಸಿನಃ।
ಅಂತೇ ದ್ರವಿಣಭಾರಸ್ಯ ಪ್ರದೌ ಸೌಮ್ಯಜಿತೌ ಹರೀ ॥ 1 ॥

ಧನಂ ದದ ಧನಂ ದದ ಪ್ರಣತವರ್ಗಚಿಂತಾಮಣೇ
ಹರೇ ಮಮ ಹಯಾನನ ಪ್ರಣತವಾದಿರಾಜಾಮಲ।
ಉದಾರಗುಣವಾರಿಧೇ ತವ ಗುಣೈರಲಂಕಾರಿತಂ
ಕುರು ಪ್ರಕುರು ತತ್ಪರಂ ತವ ಪುರೇ ನಿವಾಸೇ ಕ್ಷಮಮ್ ॥ 2 ॥

ಶ್ರೀವಾದಿರಾಜ ಭಕ್ತೇನ ವಾದಿರಾಜಾಭಿದಾ ತವ।
ಕೃತಂ ಪದ್ಯದ್ವಯಂ ಯಸ್ತು ಪಠತೇ ಧನವಾನ್ ಭವೇತ್ ॥ 3 ॥

## 23) ಶ್ರೀಸ್ವಾಪ್ನವೃಂದಾವನಾಖ್ಯಾನ ಪ್ರಾಕೃತವ್ಯಾಖ್ಯಾ

ಶ್ರೀವಾದಿರಾಜರು ವೃಂದಾವನಸ್ಥರಾಗಿ ಸುಮಾರು ಮೂವತ್ತು

ವರ್ಷಗಳ ನಂತರ ತಮ್ಮ ಏಕಾಂತ ಭಕ್ತನಾದ ಲಕ್ಷ್ಮೀಪತಿ ಎಂಬ ಏಡಮೂಕವಿಪ್ರನಿಗೆ ಸ್ವಪ್ನಮೂಲಕ ಉಪದೇಶಿಸಿದ ಪ್ರಮೇಯಭರಿತ ಅಪೂರ್ವ ಗ್ರಂಥವಾದ ಶ್ರೀಸ್ವಾಪ್ನವೃಂದಾವನಾಖ್ಯಾನಕ್ಕೆ ಬರೆದಿರುವ ಈ ಪ್ರಾಕೃತವ್ಯಾಖ್ಯಾನ ಆಚಾರ್ಯರ ವಿಶಿಷ್ಟ ಕೃತಿಯೆಂದು ತಿಳಿಯಲಾಗಿದೆ. ವೃಂದಾವನಾಖ್ಯಾನದ ಹಲವಾರು ಸೂಕ್ಷ್ಮಾಂಶಗಳ ಮೇಲೆ ಸ್ಪಷ್ಟ ಬೆಳಕು ಬೀರುವ ಈ ವ್ಯಾಖ್ಯಾನ ಸಾಕಷ್ಟು ದೀರ್ಘವಾಗಿದ್ದು ಆಚಾರ್ಯರ ಪ್ರಾಕೃತ ಭಾಷಾ ಪ್ರೌಢಿಮೆಗೂ ಸಾಕ್ಷಿಯಾಗಿದೆ. ಭಾಷೆ ಹಳೆಯದಾದರೂ ಬಹು ಬಿಗುವಿನಿಂದ ಕೂಡಿದೆ.

## 24) ಶ್ರೀವಾದಿರಾಜ ಋಜುತ್ವ ವಿರೋಧಿಕಪೋಲಚಪೇಟಿಕಾ

ವಾದಿರಾಜರ ಋಜುತ್ವ ವಿಷಯವಾಗಿ ಕುಂಭಕೋಣದಲ್ಲಿ ಎದ್ದಿದ್ದ ಕೋಲಾಹಲದ ಸಂದರ್ಭದಲ್ಲಿ ಆಚಾರ್ಯರಿಂದ ರಚಿತಗೊಂಡ ಮಹತ್ವ ಪೂರ್ಣ ಖಂಡನಕೃತಿಯೆಂದು ತಿಳಿಯಲಾಗಿದೆ. ವಾದಿರಾಜರ ಋಜುತ್ವ ವಿರೋಧಿಗಳ ದುರಾಗ್ರಹದ ನಿಲುವು, ನುಡಿಗಳನ್ನು ಧೀರಗಂಭೀರ ವಾಣಿಯಿಂದ ಖಂಡಿಸುವ ಈ ಕೃತಿ ಈಗ ಪೂರ್ಣ ಉಪಲಬ್ಧವಿಲ್ಲ ದಿದ್ದರೂ ಸಿಕ್ಕಿರುವಷ್ಟೇ ಹಸ್ತಪ್ರತಿಯ ಭಾಗದಲ್ಲಿ ಹಲವಾರು ಶಾಸ್ತ್ರೋಕ್ತ ಸಂಗತಿಗಳ ಸಮರ್ಥನೆ ಇದರ ಸಶಕ್ತ ಧ್ವನಿಯನ್ನು ಎತ್ತಿಹಿಡಿಯುತ್ತದೆ.

## 25) ಶ್ರೀವಾದಿರಾಜ ಋಜುತ್ವವಿರೋಧಿ ಪರಿಮರ್ದನಮ್

ಪದ್ಮಾವತೀಚಕೋರೇಂದುಂ ವಾಯುಜಪ್ರಮುಖೈರ್ಯುತಮ್ ।
ಶ್ರೀನಿವಾಸಂ ಗುಣಾವಾಸಂ ನೌಮ್ಯಹಂ ಸೃತಿಮುಕ್ತಯೇ ॥
ವಾದಿರಾಜಸುಶರ್ಮಾಹಂ ವಾದಿರಾಜ ಪ್ರಸಾದತಃ ।
ಭಾರತೋನ್ಮಥನೇ ಶಕ್ತಂ ಏಷ್ಯದ್ಭಾರತಮುತ್ತಮಮ್ ॥
ಲಾತವ್ಯಜಂ(ಕಂ) ವಾದಿರಾಜಮುನಿವರ್ಯಂ ಭಜೇ ಮುದೇ ।
ವಾದಿರಾಜಗುರೋರ್ದಿವ್ಯಋಜುತ್ವಸ್ಯಾಪಲಾಪಿನಾಮ್ ॥
ಮರ್ದನಂ ಶ್ರುತಿಗೋತ್ರೈಶ್ಚ ಕರಿಷ್ಯೇಹಂ ಯಥಾಮತಿ ।
ದೃಷ್ಟ್ವಾ ಸಂತಃ ಪ್ರಮುದಿತಾ ಭವೇಯುರ್ವಾದಕೌಶಲಮ್ ॥

ಎಂದು ಪ್ರಾರಂಭವಾಗುವ 'ಶ್ರೀವಾದಿರಾಜ ಋಜುತ್ವ ವಿರೋಧಿಪರಿಮರ್ದನಮ್' ಎಂಬ ಕೃತಿಯೂ ಸಹ ವಾದಿರಾಜರ ಋಜುತ್ವ ವಿರೋಧಿಗಳನ್ನು ಖಂಡಿಸುವ ಮತ್ತೊಂದು ಪ್ರೌಢಶೈಲಿಯ ಗ್ರಂಥ. ಆಚಾರ್ಯರ ಪ್ರಗಲ್ಭಪಾಂಡಿತ್ಯಕ್ಕೆ ಸಾಕ್ಷಿಯಾಗಿರುವ ಈ ಕೃತಿಯಲ್ಲಿ ಋಜುತ್ವ ವಿರೋಧಿಗಳ ಅಪಲಾಪಗಳು ಎಷ್ಟು ಬಾಲಿಶ, ಎಷ್ಟು ಆಧಾರರಹಿತ ಎಂದು ಸಿದ್ಧಪಡಿಸಿರುವ ಆಚಾರ್ಯರು ಋಜುತ್ವ ಪ್ರಮಾಣಗಳಾಗಿ ವೇದ, ಶಾಸ್ತ್ರ, ಪುರಾಣ, ಇತಿಹಾಸವಲ್ಲದೇ ಹಲವಾರು ಅಪರೋಕ್ಷಿಗಳ ವಚನಗಳನ್ನು ವಾದಿರಾಜರ ಮಹಿಮಾಪರವಾಗಿ ಅರ್ಥೈಸಿರುವುದು ಈ ಕೃತಿಯ ಮತ್ತೊಂದು ವಿಶೇಷ.

## 26) ಶ್ರೀವಾದಿರಾಜಕೃತ ಅಭಯಸ್ತುತಿವಿವರಣಮ್

ಭಗವಂತನ ಕಾರುಣ್ಯ ಹಾಗೂ ಅವನ ಅಭಯದಾನಕ್ಕೆ ಪಾತ್ರರಾದ ಹಲವಾರು ಭಕ್ತರ ವೃತ್ತಾಂತಗಳನ್ನು ಸಾಕ್ಷಿಯಾಗಿ ನೀಡುತ್ತಾ ಅವನ ಅಭಯಾಕಾಂಕ್ಷಿಯಾಗಿ ವಾದಿರಾಜರು ಮಾಡಿರುವ "ಅಭಯಸ್ತುತಿ" ಸ್ತೋತ್ರ ಸಾಹಿತ್ಯದಲ್ಲಿಯೇ ಅಪೂರ್ವವಾದದ್ದು. ಜಂಬುಖಂಡಿ ಆಚಾರ್ಯರು ಈ ಅಪೂರ್ವ ಕೃತಿಯ ಸ್ವಾದವನ್ನು ತಮ್ಮ ಪ್ರಬುದ್ಧ ವಿವರಣೆಯ ಮೂಲಕ ಭಕ್ತವೃಂದಕ್ಕೆ ಪರಿಣಾಮಕಾರಿಯಾಗಿ ಮುಟ್ಟಿಸಿ ವಿಶೇಷ ಉಪಕಾರವನ್ನೇ ಮಾಡಿದ್ದಾರೆ.

## 27) ಅಪರೋಕ್ಷ ಜ್ಞಾನಸಾಧನಾನಿ

ಆಚಾರ್ಯರು ಈ ಪುಟ್ಟ ಕೃತಿಯಲ್ಲಿ ಅಪರೋಕ್ಷ ಜ್ಞಾನ ಸಾಧನೆಗಳನ್ನು ಪದಾರ್ಥ ಸಂಗ್ರಹೋಕ್ತ ಪ್ರಕಾರ ಸುಂದರವಾಗಿ ಸಾದರಪಡಿಸಿದ್ದಾರೆ. ಇದು ಪೂರ್ಣವಾಗಿ ಉಪಲಬ್ಧವಿದ್ದಂತೆ ತೋರುವುದಿಲ್ಲ.

## 28) ಯೋಗಿ ಋಜುಯೋಗಿಜ್ಞಾನಮ್

ಆಚಾರ್ಯರು ಬದರೀಯಾತ್ರೆಯನ್ನು ಕೈಗೊಂಡಾಗ ರಚಿಸಿರುವರೆಂದು ಹೇಳಲಾಗುವ ಗದ್ಯಕೃತಿ "ಯೋಗಿಋಜುಯೋಗಿಜ್ಞಾನಮ್". ಶ್ರೀಮನ್ಮಧ್ವಾಚಾರ್ಯರ ಪ್ರಮಾಣ ಲಕ್ಷಣ ಮತ್ತು ಅದರ ಟೀಕೆಯ

ಬೆಳಕಿನಲ್ಲಿ ಯೋಗಿ ಮತ್ತು ಋಜುಯೋಗಿಗಳ ಜ್ಞಾನಸ್ವರೂಪವನ್ನು ತಮ್ಮ ಪ್ರೌಢಶೈಲಿಯಲ್ಲಿ ಪರಿಚಯಿಸಿದ್ದಾರೆ.

**29) ಜ್ಞಾನಹೇತುಭಕ್ತಿಸಾಧ್ಯೋಪಾಸಿತಃ**

ಧ್ಯಾನದ ಮಹತ್ತ್ವವನ್ನು ತಿಳಿಯಪಡಿಸುವ ಈ ಕೃತಿಯಲ್ಲಿ ಅದರ ವಿಶ್ಲೇಷಣೆಯನ್ನು ಆಚಾರ್ಯರು ಮಾಡುತ್ತಾ ಶ್ರವಣ, ಮನನಾದಿಗಳು ಪ್ರಾರಂಭಿಕ ಹಂತದ ಸಾಧನೆಗಳೆಂದೂ, ಜೀವರ ಯೋಗ್ಯತಾನುಸಾರ ಪರಮಾತ್ಮ ಅದಕ್ಕೆ ಪೂರಕವಾದ ಅವಕಾಶವನ್ನು ಕಲ್ಪಿಸಿ ಅಗತ್ಯ ಸಾಧನೆ ಮಾಡಿಸುತ್ತಾನೆಂದೂ ಪ್ರತಿಪಾದಿಸುತ್ತಾರೆ. ಹಲವಾರು ಪ್ರಮೇಯಭರಿತ ಅಂಶಗಳುಳ್ಳ ಈ ಪುಟ್ಟ ಕೃತಿ ಧ್ಯಾನಾಸಕ್ತರ ಕೈಪಿಡಿಯಾಗಿದೆ.

**30) ಕರ್ಮಾಕರ್ಮವಿವೇಕಃ**

ಸೋದಾ ಕ್ಷೇತ್ರ ಸ್ಥಿತ ತ್ರಿವಿಕ್ರಮಮೂರ್ತಿ, ಧವಲಗಂಗಾತೀರ್ಥ ಮೊದಲಾದ ಪ್ರಾರ್ಥನಾ ಪದ್ಯಗಳಿಂದ ಕೂಡಿರುವ ಈ ಕೃತಿಯಲ್ಲಿ ಆಚಾರ್ಯರು ಕರ್ಮಾಕರ್ಮಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಹಸ್ತಪ್ರತಿ ರೂಪದಲ್ಲಿರುವ ಈ ಕಿರುಕೃತಿಯೂ ಸಹ ಮುದ್ರಣ ಕಂಡಿಲ್ಲ.

**31) ಶ್ರೀಜಯತೀರ್ಥಸ್ತೋತ್ರಮ್**

ಸರ್ವಮೂಲ ಗ್ರಂಥಗಳಿಗೆ ಸಮರ್ಥವಾದ ಟೀಕೆಗಳನ್ನು ರಚಿಸಿ ಟೀಕಾಕೃತ್ಪಾದಾಚಾರ್ಯರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರ ಮಹಿಮಾನ್ವಿತ ವ್ಯಕ್ತಿತ್ವವನ್ನು ಕಟ್ಟಿ ನಿಲ್ಲಿಸುವ ಸುಂದರ ಸ್ತೋತ್ರವಿದು. ಈ ಸ್ತೋತ್ರದ ನಾಲ್ಕನೆಯ ನುಡಿಯಲ್ಲಿ ಬರುವ "ಗುರುಜನಕುಲಮೌಲೇ ಯಾದವಾರ್ಯಾದಮುಷ್ಮಾದ್ ಯದುಪತಿಗುರುಭಾವಾತ್ ಸಂಪ್ರದಾಯಾನು ಸಾರಾತ್" ಎಂಬುದನ್ನು ನೋಡಿದರೆ ಇದು ಯಾದವಾರ್ಯರ ಶಿಷ್ಯರಾದ ಶ್ರೀನಿವಾಸತೀರ್ಥರ ರಚನೆ ಇರಬಹುದೆಂದೆನಿಸುತ್ತದೆ. ಆದರೆ ಅಂತ್ಯದಲ್ಲಿ ಬರುವ "ಶ್ರೀಸೌದಾಚಾರ್ಯಸನ್ನಿಧೌ ಶ್ರೀಜಂಬುಖಂಡೀ ವಾದಿರಾಜಾಚಾರ್ಯೈಃ ರಚಿತಮಿದಂ ಸ್ತೋತ್ರಮ್" ಎಂಬ ಸಮರ್ಪಣೆಯ ಸಾಲುಗಳು ಈ ಸ್ತೋತ್ರವನ್ನು ಜಂಬುಖಂಡಿ ಆಚಾರ್ಯರ ಕೃತಿಶ್ರೇಣಿಗೆ

ಸೇರಿಸುತ್ತದೆ. ಹಾಗಾಗಿ ಇದನ್ನು ಇಲ್ಲಿಯೇ ಕೊಡಲಾಗಿದೆ. ಈ ಕುರಿತು ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

## 32) ಶ್ರೀಮಟ್ಟೀಕಾಕೃತ್ಪೂಜ್ಯಪೂಜಿತರಾಮಪ್ರಾರ್ಥನಾ

ಹಲವಾರು ಪವಿತ್ರ ಕ್ಷೇತ್ರಗಳಲ್ಲಿ ಸರ್ವಮೂಲ ಮತ್ತು ಟೀಕಾದಿ ಗ್ರಂಥಗಳ ಪಾರಾಯಣ ಯಜ್ಞವನ್ನು ನಿರಂತರ ನಡೆಸುವ ಸಾಮರ್ಥ್ಯ ಸಿದ್ಧಿಗಾಗಿ ಆಚಾರ್ಯರು ಪ್ರಾರ್ಥಿಸಿದ್ದಾರೆ. ಕೃಷ್ಣವೇಣಿಯ ಮಹಿಮಾ ವರ್ಣನೆಯೂ ಇದರಲ್ಲಿ ಬರುವುದರಿಂದ ಬಹುಶಃ ಇದನ್ನು ಕೃಷ್ಣಾ ತೀರದಲ್ಲಿ ಆಚಾರ್ಯರು ರಚಿಸಿರಬೇಕು. ಈ ಸ್ತೋತ್ರದಲ್ಲಿ ಒಟ್ಟು ಹದಿಮೂರು ಶ್ಲೋಕಗಳಿವೆ.

## 33) ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಟಿಪ್ಪಣೀ ಗುರುರಾಜೀಯಸಾರಃ

ಶ್ರೀಮಧ್ವಮುನಿಗಳ ಶ್ರೀಮಹಾಭಾರತತಾತ್ಪರ್ಯನಿರ್ಣಯದ ಮೇಲೆ ಶ್ರೀವಾದಿರಾಜ ವಿರಚಿತ "ಗುರುಭಾವಪ್ರಕಾಶಿಕಾ" ಟೀಕಾಕೃತಿಯಲ್ಲಿ ಉಕ್ತವಾದ ಹಲವಾರು ಪ್ರಮೇಯ ವಿಶೇಷಗಳನ್ನು ಆಚಾರ್ಯರು ಇಲ್ಲಿ ವಿವೇಚಿಸುತ್ತಾರೆ. ಭೀಮನಕಟ್ಟೆ ಮಠದ ರಘುಪ್ರವೀರರ ಹೆಸರೂ ಇಲ್ಲಿ ಬರುವುದರಿಂದ ಬಹುಶಃ ಈ ವಿಷಯಗಳನ್ನು ಅವರೊಂದಿಗೂ ಅಚಾರ್ಯರು ಚರ್ಚಿಸಿರಬೇಕೆಂದು ತೋರುತ್ತದೆ. ಹಲವಾರು ಜಿಜ್ಞಾಸೆ ಗಳ ಮೇಲೆ ಬೆಳಕು ಬೀರುವ ಈ ವಿಶಿಷ್ಟ ಟಿಪ್ಪಣಿ ಹಸ್ತಪ್ರತಿ ರೂಪದಲ್ಲಿದ್ದು ಒಟ್ಟು ಎಂಟು ಪುಟಗಳಷ್ಟಿವೆ.

## 34) ಶ್ರೀಹನುಮತ್ ಪ್ರಾರ್ಥನಾ

ಮುಖ್ಯ ಪ್ರಾಣದೇವರ ಅಂತಸ್ಥನಾದ ರಮಾಪತಿಯನ್ನು ಹದಿನೆಂಟು ಶ್ಲೋಕಗಳಲ್ಲಿ ಕೊಂಡಾಡುತ್ತಾ ಸಾಧನ ಯೋಗ್ಯವಾದ ವೈಷ್ಣವ ಜನ್ಮವನ್ನು ನೀಡಿದ್ದಕ್ಕಾಗಿ ಆಚಾರ್ಯರು ತಮ್ಮ ಭಾವಪೂರ್ಣ ಕೃತಜ್ಞತೆಯನ್ನು ಸಲ್ಲಿಸುತ್ತಾರೆ. ಪ್ರತಿಯೊಬ್ಬ ಸಾಧನಜೀವಿಯ ಶ್ರುತಿಗೀತೆಯಿಂತಿರುವ ಈ ಸ್ತೋತ್ರ ಮತ್ತೆ ಮತ್ತೆ ಮೆಲಕುಹಾಕುವಂತಿದೆ.

## 35) ಬ್ಯಾಡಗೀಹನುಮತ್ ಸ್ತೋತ್ರಮ್

ಬ್ಯಾಡಗಿಯ ಪ್ರಸಿದ್ಧ ಪ್ರಾಣಪತಿಯ ಸನ್ನಿಧಾನಕ್ಕೆ ಹೋಗಿದ್ದಾಗ ಆಚಾರ್ಯರು ಐದು ಶ್ಲೋಕಗಳಿಂದ ಕ್ಷೇತ್ರಮೂರ್ತಿಯನ್ನು ಕೊಂಡಾಡಿದ್ದಾರೆ. ಭಾವಿವಿರಂಚಿಯೆನಿಪ ಪಂಚಮುಖನ ಮಹಿಮಾ ವರ್ಣನೆಗಳಿಂದ ಕೂಡಿದ ಈ ಸ್ತುತಿಯೂ ಸಹ ಆಚಾರ್ಯರು 'ಆಶುಕವಿ'ಗಳೆಂಬುದನ್ನು ದೃಢಪಡಿಸುತ್ತದೆ.

## 36) ಶ್ರೀರಾಮಮುಖ್ಯಪ್ರಾಣಪ್ರಾರ್ಥನಾ

ಸಂಸಾರದ ನಿಸ್ಸಾರತೆಯನ್ನು ಹಲವಾರು ದೃಷ್ಟಾಂತಗಳ ಮೂಲಕ ತಿಳಿಸುತ್ತಾ ಅದರ ನಿವೃತ್ತಿಗಾಗಿ ಹನುಮ, ರಾಮರಲ್ಲಿ ಅನನ್ಯವಾಗಿ ಪ್ರಾರ್ಥಿಸುತ್ತಾರೆ. ಆಚಾರ್ಯರಲ್ಲಿದ್ದ ಭಕ್ತಿಯ ಪರಾಕಾಷ್ಠೆಯನ್ನು ಇಲ್ಲಿ ಕಾಣಬಹುದು. ಹದಿಮೂರು ಶ್ಲೋಕಗಳುಳ್ಳ ಈ ಸ್ತೋತ್ರದ "ಶ್ರೀವಾದಿರಾಜಸುಗುರೋ ಪ್ರಾರ್ಥನಾ ಗುರುಶಿಷ್ಯಯೋಃ" ಎಂಬ ವಾಕ್ಯವನ್ನು ನೋಡಿದರೆ ಗುರುಶಿಷ್ಯರಿಬ್ಬರೂ ಸೇರಿ ಮಾಡಿರುವ ಸ್ತುತಿಯಂತೆ ತೋರುತ್ತದೆ.

## 37) ತೀರ್ಥಪದನಿರೂಪಣಮ್

ಈ ಪುಟ್ಟ ಕೃತಿಯಲ್ಲಿ "ತೀರ್ಥ" ಪದವನ್ನು,

> ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ।
> ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥

ಎಂಬ ಶ್ಲೋಕದ ಬೆಳಕಿನಲ್ಲಿ ಹೃದಯಂಗಮವಾಗಿ ಆಚಾರ್ಯರು ವಿಶ್ಲೇಷಿಸುತ್ತಾರೆ. ಎರಡು ಪುಟಗಳ ಈ ಗದ್ಯಕೃತಿಯೂ ಸಹ ಸಾಕಷ್ಟು ತ್ರುಟಿತಗೊಂಡಿದ್ದು ಹಸ್ತಪ್ರತಿರೂಪದಲ್ಲಿದೆ.

## 38) ಓಂಕಾರಾರ್ಥಃ

ಈ ಕೃತಿಯಲ್ಲಿ "ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಮುಂತಾದವುಗಳನ್ನು ಆಚಾರ್ಯರು ಪ್ರಸ್ತಾಪಿಸಿ "ಓಂ" ಕಾರಕ್ಕೆ ವಿವಿಧ ಅರ್ಥಗಳನ್ನು ಸವಿಸ್ತಾರವಾಗಿ ಬರೆದಿರುತ್ತಾರೆ. ಇದರಲ್ಲಿಯೂ ಸಹ,

ವೃಂದಾವನಾಚಾರ್ಯಸಂಪ್ರಾಪ್ತಜ್ಞಾನೈಶ್ವರ್ಯಾನಹಂ ಸದಾ।
ರಘುಪ್ರವೀರಾಖ್ಯಗುರೂನ್ ಭಜೇ ಜ್ಞಾನಾದಿಸಿದ್ಧಯೇ॥

ಎಂದು ಭೀಮನಕಟ್ಟೆ ಮಠಾಧೀಶರಾಗಿದ್ದ ಶ್ರೀರಘುಪ್ರವೀರರ ಉಲ್ಲೇಖವಿರುವ ಶ್ಲೋಕವೊಂದಿರುವುದು ಗಮನಾರ್ಹ.

**39) ನಾರಾಯಣ ನಾಮಸ್ಮರಣನಿರೂಪಣಮ್**

ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ।
ತಥಾಽಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್॥

ಎಂಬ ಶ್ಲೋಕವನ್ನು ವ್ಯಾಖ್ಯಾನಿಸುತ್ತಾ ಭವತಾರಕವಾದ 'ನಾರಾಯಣ' ನಾಮಸ್ಮರಣೆಯ ಮಹತ್ವವನ್ನೂ, ಅದನ್ನು ಮಾಡುವಾಗ ಹೊಂದಿರಬೇಕಾದ ಅನುಸಂಧಾನಗಳನ್ನೂ ಮನಮುಟ್ಟುವಂತೆ ಇಲ್ಲಿ ನಿರೂಪಿಸಿದ್ದಾರೆ. ಈ ವ್ಯಾಖ್ಯಾನ ಕೃತಿಯ ಆದಿ ಮತ್ತು ಅಂತ್ಯದಲ್ಲಿ ಬರುವ ಪ್ರಾರ್ಥನಾರೂಪದ ಶ್ಲೋಕಗಳು ಹೃದ್ಯವಾಗಿ ಒಡಮೂಡಿವೆ.

**40) ಬದರೀನಾರಾಯಣಸ್ತುತಿಃ**

ಶ್ರೀಮದಾನಂದತೀರ್ಥಾರ್ಯಸೇವಿತಂ ಬದರೀಸ್ಥಿತಮ್।
ವಾದಿರಾಜಯತಿಶ್ರೇಷ್ಠವಂದಿತಂ ನೌಮಿ ಸಂತತಮ್॥
ಬದರೀಕ್ಷೇತ್ರನಿಲಯಂ ಸದಯಂ ಸರ್ವದಾವ್ಯಯಮ್।
ಸದರೀಶಶಯಂ (ಯುತಂ) ಸೇವೇ ಸದಾ ಸಾಧುಜನಪ್ರಿಯಮ್॥

ಎಂದು ಪ್ರಾರಂಭವಾಗುವ ಈ ಸ್ತೋತ್ರವನ್ನು ಆಚಾರ್ಯರು ಬದರಿಕ್ಷೇತ್ರಕ್ಕೆ ಹೋಗಿದ್ದಾಗ ರಚಿಸಿರಬೇಕೆನ್ನಿಸುತ್ತದೆ. ವಾದಿರಾಜವಂದಿತ ಬದರೀನಾರಾಯಣನ ಮುಂದೆ ನಿಂತ ಭಾವೋದ್ರೇಕದ ಉತ್ಕಟ ಕ್ಷಣದಲ್ಲಿ ಸ್ಫುರಣಗೊಂಡ ಆಶುಕವಿತೆಯಂತಿರುವ ಈ ಸ್ತೋತ್ರ ಆಚಾರ್ಯರ ಕಾವ್ಯಸಾಮರ್ಥ್ಯಕ್ಕೂ ಸಾಕ್ಷಿಯಾಗಿದೆ.

**41) ಆಪಸ್ಸೂಕ್ತಾರ್ಥವಿವರಣಮ್**

ಸಂಸ್ಕೃತ ಮಿಶ್ರಿತ ಕನ್ನಡದಲ್ಲಿರುವ ಈ ಗದ್ಯಕೃತಿ "ಆಪೋ ಹಿ ಷ್ಠಾ

ಮಯೋಭುವಃ, ಶಂನೋದೇವಿ" ಮುಂತಾದ ಸೂಕ್ತಗಳ ಅಂತರಾರ್ಥಗಳನ್ನು ವಿಶ್ಲೇಷಿಸುತ್ತದೆ. ಸುಮಾರು ಎಂಟು ಪುಟಗಳಷ್ಟು ಹಸ್ತಪ್ರತಿ ರೂಪದಲ್ಲಿರುವ ಈ ಕೃತಿಯಲ್ಲಿ ಆಚಾರ್ಯರು ಅರ್ಘ್ಯ ಮಂತ್ರಗಳ ಔಚಿತ್ಯಗಳನ್ನೂ ಸಹ ಪ್ರಸ್ತಾಪಿಸುತ್ತಾರೆ.

**42) ಸಂಕ್ಷೇಪಭಾಷ್ಯವ್ಯಾಖ್ಯಾ**

ಶ್ರೀಮನ್ಮಧ್ವರು ರಚಿಸಿರುವ ಅಣುಭಾಷ್ಯದ ಪ್ರಮುಖ ಪಂಕ್ತಿಗಳನ್ನು ಶಾಸ್ತ್ರೀಯವಾಗಿ ವಿಶ್ಲೇಷಿಸುವ ಜಂಬುಖಂಡಿ ಆಚಾರ್ಯರು ಹಲವಾರು ಮೂಲಗಳಿಂದ ಹೆಕ್ಕಿತೆಗೆದ ಪ್ರಾಚೀನ ವಾಕ್ಯಗಳನ್ನು ಪೂರಕವಾಗಿ ನೀಡಿ ಅಣುಭಾಷ್ಯದ ಮಹತ್ತನ್ನು ಎತ್ತಿಹಿಡಿದಿದ್ದಾರೆ. ಹೆಸರೇ ಹೇಳುವಂತೆ ಇದು ಸಂಕ್ಷೇಪ ವ್ಯಾಖ್ಯಾನವಾದರೂ ಸುಮಾರು ಹದಿನಾರು ಪುಟಗಳಿಂದ ಕೂಡಿದೆ. ಇದೂ ಸಹ ಎಲ್ಲೂ ಪ್ರಕಟವಾದಂತಿಲ್ಲ.

**43) ಬ್ರಹ್ಮಸೂತ್ರಾಧಿಕರಣಸಾರಸಂಗ್ರಹಃ**

ವೇದವ್ಯಾಸವಿರಚಿತ ಬ್ರಹ್ಮಸೂತ್ರಗಳ ಅಧಿಕರಣಗಳ ಅಂತರಾರ್ಥಗಳನ್ನು ಶ್ರೀಮನ್ಮಧ್ವರ ಭಾಷ್ಯದ ಬೆಳಕಿನಲ್ಲಿ ವಿಶ್ಲೇಷಿಸಿ ಮುಖ್ಯತಯಾ ಪರಬ್ರಹ್ಮನೇ ಅಧಿಕರಣ ವಿಷಯವಾಚ್ಯನೆಂದು ಆಚಾರ್ಯರು ಇಲ್ಲಿ ಸಮರ್ಥವಾಗಿ ಪ್ರತಿಪಾದಿಸಿದ್ದಾರೆ.

**ಜಿಜ್ಞಾಸೋತ್ಥಜ್ಞಾನಜನ್ಯಪ್ರಸಾದಾದ್ಗುಣಪೂರ್ತಿತಃ।**
**ಜಿಜ್ಞಾಸ್ಯೋ ಬ್ರಹ್ಮ ಸೃಷ್ಟ್ಯಾದಿಕರ್ತಾಃ ಶಾಸ್ತ್ರೇಡ್ಯ ಮುಖ್ಯತಃ॥**

ಎಂದು ಈ ಕೃತಿ ಪ್ರಾರಂಭವಾಗುತ್ತದೆ. ಜಿಜ್ಞಾಸುಗಳು ಸದಾ ಕೂಡಿಟ್ಟುಕೊಳ್ಳುವ ಈ ಪ್ರಮೇಯಭರಿತ ಕೃತಿ ಶ್ಲೋಕ ರೂಪದಲ್ಲಿರುವ 'ಸೂತ್ರಸ್ತೋತ್ರ'ವಾಗಿದೆ.

**44) ಕೇಶವಾದಿನಮನಪ್ರಕಾರಃ**

ಕೇಶವಾದಿ ಇಪ್ಪತ್ನಾಲ್ಕು ಭಗವನ್ಮೂರ್ತಿಗಳ ನಾಮ ಮಹಿಮೆಗಳ ವಿಸ್ತಾರ ವರ್ಣನೆ ಇದರಲ್ಲಿದೆ. ಪ್ರತಿಯೊಂದು ನಾಮಾವಳಿಯ ಅಂತ್ಯದಲ್ಲಿ ಬರುವ 'ನಮಃ' ಎಂಬ ಪದ ಮತ್ತೆಮತ್ತೆ ಘಂಟಾನಾದದಂತೆ

ಮನೋಕೋಶದಲ್ಲಿ ಧ್ವನಿಸಿ ಪಾಠಕರಿಗೆ ವಿಶಿಷ್ಟ ಅನುಭವವನ್ನು ನೀಡುತ್ತದೆ.

**45) ವಿಷ್ಣು ಸಹಸ್ರನಾಮ ಶಬ್ದಾರ್ಥ:**

ಭಗವಂತನ ಸಾವಿರ ನಾಮಗಳ ಪವಿತ್ರ ಸ್ತೋತ್ರ ಗುಚ್ಛವಾದ "ಶ್ರೀವಿಷ್ಣುಸಹಸ್ರನಾಮ"ದ ಮಹಿಮೆಯನ್ನು ಪ್ರತಿಯೊಂದು ಶಬ್ದದ ಅರ್ಥವಿಸ್ತಾರ ಮಾಡುವ ಮೂಲಕ ವಿವೇಚಿಸಿದ್ದಾರೆ. ವಿವರಣೆ ಸಂಕ್ಷಿಪ್ತವಾಗಿದ್ದರೂ ಕೃತಿಯ ಔನ್ನತ್ಯವನ್ನು ಪ್ರತಿಪಾದಿಸುವಲ್ಲಿ ಪರಿಣಾಮಕಾರಿಯಾಗಿದೆ.

ಹೀಗೆ ಜಂಬುಖಂಡಿ ವಾದಿರಾಜಾಚಾರ್ಯರು ನಿರ್ಮಿಸಿರುವ ಗ್ರಂಥಗುಚ್ಛ ಎಂತಹವರಿಗೂ ಅಚ್ಚರಿಯನ್ನು ಮೂಡಿಸುವಂತಿದೆ. ಆಚಾರ್ಯರು ರಚಿಸಿರುವ ಕೃತಿಗಳ ಸಂಖ್ಯೆ ನಿಖರವಾಗಿ ತಿಳಿದು ಬಂದಿಲ್ಲವಾದ್ದರಿಂದ ಇದು ಇಷ್ಟೇ ಎಂಬ ನಿಲುವಿಗೆ ಬರಲಾಗುವುದಿಲ್ಲ. ಈ ನಿಟ್ಟಿನಲ್ಲಿ ವ್ಯವಸ್ಥಿತ ಸಂಶೋಧನೆ ನಡೆದರೆ ಇನ್ನಷ್ಟು ಅಮೂಲ್ಯ ಕೃತಿಗಳು ಅವರ ಕೃತಿಶ್ರೇಣಿಗೆ ಸೇರುವ ಸಾಧ್ಯತೆಯಿದೆ.



# ಮಹಿಮಾನ್ವಿತ ವ್ಯಕ್ತಿತ್ವ

**ಭಾ**ವಿಸಮೀರರ ಭಕ್ತಶ್ರೇಷ್ಠರಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ವ್ಯಕ್ತಿತ್ವ ಮಹಿಮಾನ್ವಿತವಾದದ್ದು. ಸತ್ಸಿದ್ಧಾಂತ ಸ್ಥಾಪನೆಯಲ್ಲಿ ವಿನಿಯೋಗವಾದ ಅವರ ಬದುಕಿನ ಒಂದೊಂದು ಕ್ಷಣವೂ ರೋಚಕ ಘಟನೆಗಳಿಂದ ಕೂಡಿದ್ದು ಪರಮ ಸಾರ್ಥಕ್ಯವನ್ನು ಪಡೆದುಕೊಂಡಿವೆ. ಭಗವಂತನ ಅನುಗ್ರಹ ವಿಶೇಷದಿಂದ ಅಪೂರ್ವ ಜ್ಞಾನವನ್ನೂ, ಯೋಗಸಿದ್ಧಿಯನ್ನೂ ಸಂಪಾದಿಸಿದ್ದ ಆಚಾರ್ಯರ ಬಾಳಿನುದ್ದಕ್ಕೂ ಮಹಿಮೆಗಳ ಮಹಾಪೂರವೇ ಹರಿದಿದೆ. ಕೇವಲ ಅರ್ಧ ಶತಮಾನಗಳಷ್ಟು ಕಾಲ ಜೀವಿಸಿದ್ದರೂ ಹಲವಾರು ಶತಮಾನಗಳಾದರೂ ಮರೆಯಲಾರದಂತಹ ಅತ್ಯದ್ಭುತ ಸಾಧನೆಯನ್ನು ಮಾಡಿದ ಹೆಗ್ಗಳಿಕೆ ಅವರದು. ಹರಿಗುರುಭಕ್ತಿಯಲ್ಲಿ, ವಿಷಯ ವಿರಕ್ತಿಯಲ್ಲಿ, ಅನುಪಮ ವಾಕ್ಶಕ್ತಿಯಲ್ಲಿ, ರಾಜರ ಋಜುತ್ವ ಮಹಿಮೆಗಳನ್ನು ಸಮರ್ಥಿಸುವ ಯುಕ್ತಿಯಲ್ಲಿ, ಸಚ್ಛಾಸ್ತ್ರ ಪ್ರೌಢಿಮೆಯಲ್ಲಿ, ವ್ಯಾಸ ದಾಸಸಾಹಿತ್ಯದ ಸಮನ್ವಯತೆಯಲ್ಲಿ, ಗ್ರಂಥ ನಿರ್ಮಾಣದಲ್ಲಿ ಆಚಾರ್ಯರಿಗೆ ಆಚಾರ್ಯರೇ ಸಾಟಿ. ಸತ್ಯ ಪ್ರತಿಪಾದನೆಯ ಹಾದಿಯಲ್ಲಿ ಹೆಜ್ಜೆ ಹೆಜ್ಜೆಗೂ ಎದುರಾಗುತ್ತಿದ್ದ ಎಡರುತೊಡರುಗಳಿಗೆ ಸೆಡ್ಡು ಹೊಡೆದು ನಿಂತ ಅವರ ಅಪ್ರತಿಮ ಧೈರ್ಯ; ಎಂತಹ ಅಪಾಯಕರ ಸ್ಥಿತಿಯಲ್ಲಿಯೂ ವಿಚಲಿತಗೊಳ್ಳದ ಸ್ಥೈರ್ಯ; ಅಸಾಮಾನ್ಯ ಸಂಘಟನಾಚಾತುರ್ಯ; ಗುರಿಯ ಕಡೆಗೆ ಮುನ್ನುಗ್ಗುವಲ್ಲಿ ತೋರುತ್ತಿದ್ದ ಸಾತ್ವಿಕಛಲ, ಪ್ರಖರ ಮನೋಬಲ; ಅಸ್ಖಲಿತ ತಾಳ್ಮೆ, ದೀನದಲಿತರಲ್ಲಿ ತೋರುತ್ತಿದ್ದ ದೇವಕಾರುಣ್ಯ, ಕ್ಷಮಾಗುಣ; ಶಿಷ್ಯವಾತ್ಸಲ್ಯ ಮುಂತಾದವು ಅಪೂರ್ವವಾದವು.

ಗರುಡ, ರುದ್ರೇಂದ್ರಾದಿಗಳಿಂದ ವಂದಿತ ಪಾದರಾದ ಶ್ರೀವಾದಿರಾಜರ ಪದಪದ್ಮದಲ್ಲಿ ದುಂಬಿಯಂತೆ ಸದಾ ವಿಹರಿಸುವ ಆಚಾರ್ಯರ ಅದ್ಭುತಚರಿತಾನುವಾದವನ್ನು:

ಯೇಷಾಂ ಸುಪರ್ಣಹರಶಕ್ರಮುಖೇಡ್ಯಪಾದ–
ಶ್ರೀವಾದಿರಾಜಪದಪದ್ಮಮಧುವ್ರತಾನಾಮ್ ।
ಮಾಹಾತ್ಮ್ಯಮದ್ಭುತತಮಂ ನಿಖಿಲಾನುಭೂತಂ
ವಕ್ಷ್ಯೇ ಯಥಾಮತಿ ಮನೋವಚನೋರುಶುದ್ಧ್ಯೈ ॥

ಎಂದು ವಿನೀತರಾಗಿ ಪ್ರಾರಂಭಿಸುವ ಶ್ರೀಸುಧಾಕರ ಗುರುಗುಣ ರತ್ನಮಾಲಾಕಾರರು ಅವರ ಮಹಿಮಾನ್ವಿತ ವ್ಯಕ್ತಿತ್ವವನ್ನು ವಿವಿಧ ದೇವತೆಗಳಿಗೆ ಹೋಲಿಸಿ ಮುದಗೊಳ್ಳುತ್ತಾರೆ. ಜಂಬುಖಂಡ್ಯಾರ್ಯರು ಹರಿಪ್ರೀತಿಗಾಗಿ ಕೈಗೊಳ್ಳುವ ಗಾನನೃತ್ಯಾದಿಗಳಲ್ಲಿ ತುಂಬುರ, ನಾರದರಂತೆ ಕಂಡರೆ ಜಪತಪಾದ್ಯನುಷ್ಠಾನದಲ್ಲಿ ಮುನಿಶ್ರೇಷ್ಠರು; ಜ್ಞಾನಭಕ್ತಿ ವಿರಕ್ತಿಯಲ್ಲಿ ಸುರಸದೃಶರು. ಕ್ಷಮಾಗುಣದಲ್ಲಿ ಧರಣೀಸಮರಾದರೆ, ಕಾರುಣ್ಯಗುಣದಲ್ಲಿ ಸಾಗರೋಪಮರು. ಹಾಗಾಗಿ ಸಜ್ಜನರಿಗೆ ಸರ್ವಾನಿಷ್ಟನಿವಾರಕರು. ದಾನಶೂರತ್ವದಲ್ಲಿ ಧರ್ಮರಾಜರು. ಅದ್ವೈತಿಗಳೇ ಮೊದಲಾದ ಕುವಾದಿಗಳನ್ನು ದಂಡಿಸುವುದರಲ್ಲಿ ಸಾಕ್ಷಾತ್ ಯಮಧರ್ಮರಾಜರು. ಶಮದಮಾದಿ ಗುಣಸಂಪನ್ನತೆಯಲ್ಲಿ, ಶಾಸ್ತ್ರಪರಿಣತಿಯಲ್ಲಿ, ವಕ್ತೃತ್ವದಲ್ಲಿ, ಸುಜನವೃಂದಕ್ಕೆ ಹಿತೋಪದೇಶ ಮಾಡುವುದರಲ್ಲಿ ಆಚಾರ್ಯರನ್ನು ಮೀರಿಸುವವರು ಮತ್ತೊಬ್ಬರಿಲ್ಲ[1] ಎಂದು ಕರೆಗಳೆತ್ತಿ ಸಾರುತ್ತಾರೆ. ಅವರ ಮಂಗಳ ಸ್ವರೂಪ ಹಾಗೂ ಅಲೌಕಿಕ ಮಹಿಮೆಗಳನ್ನು ಕಂಡು–

---

1. ತುಂಬುರುರ್ನಾರದೋ ವಾಯಮಥವಾ ಮುನಿಷೂತ್ತಮಃ ।
ಸಾಮಾನ್ಯೋ ನೇತಿ ಸುಜನೈಸ್ತರ್ಕಿತಃ ಶುಶುಭೇ ಗುರುಃ ॥
ಪ್ರಭಯಾ ದೇವಸದೃಶಃ ಕ್ಷಮಯಾ ಧರಣೀಸಮಃ ।
ಕೃಪಯಾ ಸಿಂಧುಸದೃಶಃ ಸರ್ವಾನಿಷ್ಟನಿವಾರಕಃ ॥
ದಾತಾ ಧರ್ಮಸಮೋಽದ್ವೈತವಾದಿನಾಂ ದಂಡಭಾಕ್‌ಸಮಃ ।
ಶಮೇ ದಮೇ ತಿತಿಕ್ಷಾಯಾಂ ವಕ್ತೃತ್ವೇ ಹ್ಯುಪದೇಷ್ಟರಿ ॥ →

**ಗೀರ್ವಾಣೋ ವಾವತೀರ್ಣೋऽಯಂ ಗಂಧರ್ವೋ ವಾ ಮಹಾನ್ ಋಷಿಃ।**
**ಸೂರ್ಯವತ್ ತೇಜಸಾಂ ರಾಶಿಃ ಚಂದ್ರವನ್ಮೋದದಯಾಕಃ॥**

**(ದ್ವಿತೀಯಾವಲಿ 31)**

"ಸೂರ್ಯನಂತೆ ತೇಜಸ್ಸುಳ್ಳ, ಪೂರ್ಣಚಂದ್ರನಂತೆ ಮುಖಮಂಡಲವುಳ್ಳ ಈ ಮಹಾನುಭಾವರು ಯಾರೋ ಉಚ್ಚಶ್ರೇಣಿಯ ದೇವತಾ ಪುರುಷರೇ ಇರಬೇಕು; ಅಥವಾ ಗಂಧರ್ವರೋ ಅಥವಾ ಮಹಾಋಷಿಗಳೋ ಮನುಷ್ಯ ರೂಪದಲ್ಲಿ ಧರೆಗಿಳಿದಿರಬೇಕು" ಎಂದು ಗುರುಗುಣ ರತ್ನಮಾಲಾಕಾರರು ಅಭಿಪ್ರಾಯ ಪಡುತ್ತಾರೆ. ಶ್ರೀಕೋನೇರಿ ಆಚಾರ್ಯರೂ ಸಹ ತಾವು ರಚಿಸಿರುವ 'ಗುರುಸುಗುಣಚಂದ್ರಿಕಾ' ಎಂಬ ಗುರುಸ್ತೋತ್ರದಲ್ಲಿ "ವೈರಾಗ್ಯಾದಿ ಗುಣಪೂರ್ಣರಾದ ಜಂಬುಖಂಡ್ಯಾರ್ಯರು ದೇವ ಸ್ವಭಾವಿಗಳು, ಮಹೋನ್ನತ ಮತಿಗಳು, ಕೃಷ್ಣಾಪರೋಕ್ಷಿಗಳು, ಗುರುವಾದಿರಾಜರ ಚರಣಾರವಿಂದಗಳಲ್ಲಿ ಸದಾ ದುಂಬಿಯಂತೆ ವಿಹರಿಸುವವರು, ಸಜ್ಜನರಿಗೆ ಸಕಲೇಷ್ಟದಾತರು, ದುರ್ಮಾಯಿಗಳೆಂಬ ಮತ್ತಗಜಗಳಿಗೆ ಸಿಂಹಸದೃಶರು, ರಾಜರ ಋಜುತ್ವ ಪ್ರತಿಪಾದಕರ ಗುಂಪಿನಲ್ಲಿ ಎದ್ದು ಕಾಣುವ ಧೀರರು, ಅವಧೂತರು, ಮಾತ್ಸರ್ಯರಹಿತರು, ಸಾಧನಾಪರರು, ಶಾಂತರು, ದಾಂತರು, ಜ್ಞಾನವಿಜ್ಞಾನ ಸಂಪನ್ನರು, ಸಾಧುವರೇಣ್ಯರು' ಎಂದೆಲ್ಲಾ ಶ್ಲಾಘಿಸುತ್ತಾರೆ.

. ಕನ್ನಡದಲ್ಲಿ ರಚಿಸಿರುವ "ಅಂಗನಾಮಣಿ ತಂಗಿ ಕೇಳೆ ಮಹಾತ್ಮರ ಮಂಗಳ ಮಹಿಮೆ" ಎಂಬ ಕೃತಿಯಲ್ಲಿ ಆಚಾರ್ಯರನ್ನು 'ಪೊಂದಿದವರ ಹೃದಯಾಂಧಕಾರಕೆ ಶರಚ್ಚಂದ್ರರು, ಗುಣಸಾಂದ್ರರು, ಭಕ್ತಿಬೋಧಕರು, ವಿರಕ್ತಿಮುಖರು, ಸುಗುಣಯುಕ್ತರು, ಜೀವನ್ಮುಕ್ತರು, ಗುರುವಾದಿರಾಜ ಮತ್ಸರಿದುರುಳರ ಗೆದ್ದು ಮೆರೆದವರು, ತತ್ತ್ವಧಾರೆಯನ್ನು ಸುರಿದವರು, ಪಂಡಿತವರರು, ಖಳರಿಗೆ ಚಂಡರು, ದಿಟ್ಟ ಶ್ರೀಪ್ರಾಣಪತಿವಿಠಲ

---

→ **ವಿದ್ಯಾಯಾಂ ಕೋಽಪಿ ನಾಸ್ತ್ಯಸ್ಯ ಸದೃಶೋ ಮಾನವೋ ಭುವಿ।**
**ಭಾವೀರತ್ರೀವಾದಿರಾಜಪಾದಪಂಕಜಬಂಭರಃ॥**

– ಶ್ರೀಸುಧಾಕರಗುರುಗುಣರತ್ನಮಾಲಾ (ಪಂಚಮಾವಲಿ 23–26)

ಗುಣಗಣನಿಷ್ಠರು, ಸುಜನ ಶ್ರೇಷ್ಠರು' ಎಂದು ಮನವುಬ್ಬಿ ಸ್ತುತಿಸುವ ಶ್ರೀಷಟ್ಪುರಾಚಾರ್ಯರು 'ಅಂಬುಜಾಕ್ಷನ ಕೃಪೆ ಸತತ ಪಾಡೆ' ಎಂಬ ಮತ್ತೊಂದು ಕೃತಿಯಲ್ಲಿ 'ಅಂಬುಜಾಕ್ಷನ ಕೃಪೆಯನ್ನು ಪಡೆದ ಜಂಬುಖಂಡ್ಯಾರ್ಯರು ವೇದವೇದಾಂಗಚತುರರು, ಅಪ್ರತಿಮ ವಾಗ್ಮಿಗಳು, ತಮ್ಮನ್ನು ಆಶ್ರಯಿಸಿದ ಮೂಢಶಿಷ್ಯರಿಗೆ ಗೂಢ ಪ್ರಮೇಯಗಳನ್ನು ತಿಳಿಸಿ ತಿದ್ದುವ ಕಾರುಣ್ಯ ನಿಧಿಗಳು; ಗಟ್ಟಿಯಾಗಿ ಆಚಾರ್ಯರ ಅಂಘ್ರಿಕಮಲಗಳನ್ನು ನಂಬುವವರನ್ನು, ತುಷ್ಟನಾಗಿರುತಿಹ ಶ್ರೇಷ್ಠ ಶ್ರೀಪ್ರಾಣಪತಿವಿಠಲನೇ ಸಂರಕ್ಷಿಸುತ್ತಾನೆ. ಆದ್ದರಿಂದ ಜಂಬುಖಂಡ್ಯಾರ್ಯರನ್ನು ನಂಬಿ ಸನ್ಮಾರ್ಗದಲ್ಲಿ ನಡೆಯಿರಿ' ಎಂದು ಸಜ್ಜನರಿಗೆ ಆತ್ಮೀಯ ಶೈಲಿಯಲ್ಲಿ ಕರೆ ನೀಡುತ್ತಾರೆ.

ಆಚಾರ್ಯರ ನೇರ ಶಿಷ್ಯರಲ್ಲೊಬ್ಬರಾದ ಶ್ರೀಶಪ್ರಸನ್ನ ಕೇಶವ ವಿಠಲಾಂಕಿತ ವಾಳವೇಕರ್ ಶ್ರೀಭೀಮಾಚಾರ್ಯರಂತೂ ತಮ್ಮ ಗುರುಗಳನ್ನು, 'ಮಾಧ್ವಗ್ರಂಥದಿ ಶೋಭಿಪ ಬುಧವರ, ಮಧ್ವಾಬ್ಧಿಗೆ ಅಭಿವೃದ್ಧಿದ ಚಂದ್ರಮ, ಮಾಧ್ವ ಭಕ್ತಗುರುಮುಖ್ಯ, ಕಂಬುಧರನ ದಿವ್ಯನೃತ್ಯದಿ ಒಲಿಸುವ ಧೀರ, ಬಿಂಬಜ್ಞಾನದಿ ಚೇತೋಮಲಹರ, ನಂಬಿದ ಜನರಿಗೆ ಅಂಬುಜಾಕ್ಷನ ತೋರುವ ಶಂಬರಾರಿಜನಕನ ಭಕ್ತಾಗ್ರಣಿ, ರಾಜರು ಋಜುಗತರ್ಹೌದೆಂದು ಘೋಷಿಪ ಭೂಪ, ವಾಣಿಮುಖನೆ ಉದ್ಧಾರಕನೆಂದು ಬೀಜಮಂತ್ರವನ್ನು ಉಪದೇಶಿಸುವ ಸುರಪ, ರಾಜರ ಮೃತ್ತಿಕೆ ರಾಜಿತ ಫಣಿ ಬಹು ಸೋಜಿಗ ಎನಿಸುವ ಗುರೂಪ, ಅವಿರತ ಸುಧಾಭಾವಾಭಿವ್ಯಕ್ತಿ ನಿರತ, ಷಟ್ಪುರಾರ್ಯರ ಸುಕಾಮಿತ ಫಲದಾತ, ವ್ಯಾಸಮರುದ್ಗುರು ಪ್ರೋತ' ಎಂದು ಸ್ತೋತ್ರ ಮಾಡುತ್ತಾರೆ. ಆಚಾರ್ಯರ ಅಮಲಪ್ರೀತಿಗೆ ಹಾಗೂ ಗೌರವಾದರಗಳಿಗೆ ಪಾತ್ರರಾಗಿದ್ದ ಶ್ರೀಶಪ್ರಾಣೇಶವಿಠಲಾಂಕಿತ ಲಿಂಗಸೂಗೂರಿನ ಶ್ರೀರಾಮದಾಸರು ಜಂಬುಖಂಡ್ಯಾರ್ಯರ ದರ್ಶನ ಮಾತ್ರದಿಂದಲೇ ಪುಳಕಿತರಾಗುತ್ತಿದ್ದರೆಂಬುದಕ್ಕೆ ಅವರು ರಚಿಸಿರುವ 'ಕಂಡು ಧನ್ಯನಾದೆನೋ ಸಿರಿಮಂಗಳಾತ್ಮರ' ಎಂಬ ಕೀರ್ತನೆಯೇ ಸಾಕ್ಷಿಯಾಗಿದೆ. ಇದರಲ್ಲಿ ಅವರು ಆಚಾರ್ಯರನ್ನು 'ವೀಕ್ಷಣಮಾತ್ರಘತುಂಡುಗೈಸಿ ಪೊರೆಯುವ ಪುಂಡರೀಕಾಕ್ಷತೋಂಡರ ಪಾದ ಪುಂಡರೀಕ,

ಕೋವಿದಾಗ್ರಣಿ, ಭೂತದಯಾಶೀಲ, ಶಮದಮೋಪೇತ, ಪೃಥ್ವಿಯೊಳು ಶ್ರೀನಾಥನ ಒಲುಮೆಯನ್ನು ಪಡೆದ ಖ್ಯಾತ' ಎಂದು ಕೊಂಡಾಡುತ್ತಾರೆ. ಶ್ರೀಶಪ್ರಾಣೇಶಹಯಾಸ್ಯವಿಠಲರೆಂಬುವವರು 'ಏಸು ಜನ್ಮದ ಪುಣ್ಯಫಲ ದಿಂದ ಲಭ್ಯವಾಗುವ ಜಂಬುಖಂಡಿ ಆಚಾರ್ಯರಂತಹ ಸತ್ಪುರುಷರ ಸಖ್ಯಸುಖಕ್ಕಾಗಿ' ಕಾತರಿಸುತ್ತಾರೆ.

ಸಿಕ್ಕಿದ್ದಂಥಾ ದಿವ್ಯರತ್ನವನ್ನು ಕಳೆದಂತಾಯಿತು ।
ಫಕ್ಕನೆದ್ದು ಕುಳಿತು ಕಂಡಾ ಕನಸಿನಂತಾಯಿತು ।
ಎಲ್ಲಿ ಪೋಗಲಿ ಯಾರಿಗ್ಹೇಳಲಿ ಹ್ಯಾಗೆ ಸಿಗುವರು ನಮ್ಮ ಧೀರರು'

ಎಂದು ಆಚಾರ್ಯರ ದರ್ಶನ ಭಾಗ್ಯಕ್ಕಾಗಿ ತಳಮಳಿಸುವ ಪರಿ ದಾಸರು ರಚಿಸಿರುವ ಕೀರ್ತನೆಯೊಂದರಲ್ಲಿ ಹರಳು ಗಟ್ಟಿದೆ. 'ಧರೆಯೊಳು ಜಂಬುಖಂಡಿ ಪುರದಿ, ಭೂಸುರ ಶ್ರೀನಿವಾಸರೆಂಬ ಶರಧಿಯಲಿ ಜನಿಸಿದ ಸುಂದರಾಂಗ; ಕರುಣಾವಾರಿಧಿ, ಸಿರಿತುರಗಾನನ ಪ್ರಿಯ, ಭಾಗವತಶಾಸ್ತ್ರ ಪರಿಣಿತ, ಹಠವಾದಿಗಳ ಖಂಡಿಸಿ ಹರಿಗುರು ಮಹಿಮೆಗಳ ಧಾರುಣಿಯಲಿ ಬೀರಿದ ಪರಮಪಾವನ, ಶುಭಚರಿತ' ಎಂದೆಲ್ಲಾ ಹಿಗ್ಗಿ ಹೊಗಳುವ ಶ್ರೀ ಬಟು ವಿಮಲಾನಂದದಾಸರು 'ವಾದಿರಾಜಾಚಾರ್ಯರ ಸುಂದರವಾದ । ಪಾದಾ ನಂಬಿದೆ ನಿಶ್ಚಯ' ಎಂದು ನಲಿದಾಡುತ್ತಾರೆ.

ಇಂತಹ ಮಹಿಮಾನ್ವಿತ ವ್ಯಕ್ತಿತ್ವವುಳ್ಳ ಶ್ರೀಜಂಬುಖಂಡಿ ವಾದಿರಾಜಾ ಚಾರ್ಯರ ಜೀವಿತದಲ್ಲಿ ನೂರಾರು ಮಹಿಮಾನ್ವಿತ ಪ್ರಸಂಗಗಳು ನಡೆದವು. ಹರಿವಾಯು ಗುರುಗಳ ಪರಮಾನುಗ್ರಹದ ಫಲಶ್ರುತಿಗಳಾಗಿ ಹೊರಹೊಮ್ಮಿದ ಇಂತಹ ರೋಚಕ ಪ್ರಸಂಗಗಳಲ್ಲಿ ಮೇಲ್ಕಂಡ ಆಚಾರ್ಯರ ಗುಣ ಲಕ್ಷಣಗಳೆಲ್ಲವೂ ಮೇಳೈಸಿರುವುದು ಕಂಡು ಬರುತ್ತದೆ. ಆಚಾರ್ಯರು ಅಪರೋಕ್ಷೀಕೃತ ಶ್ರೀಶರೆಂಬುವ ಅಂಶವನ್ನು ಸೋದಾಹರಣ ಪೂರ್ವಕವಾಗಿ ನಿರೂಪಿಸುತ್ತವೆ[1]. ಗುರುವಾದಿರಾಜರ

1. ಸಾನಂದಸೇವಿಕುಲವಂಧಿತ ಪಾದಪದ್ಮ
ಕೃಷ್ಣಾಪರೋಕ್ಷಿಸುಜನೇಕ್ಷಣ ಚಿತ್ತಯಾತಃ ॥
– ಶ್ರೀಕೋನೇರಿ ಆಚಾರ್ಯವಿರಚಿತ 'ಗುರುಸುಗುಣಚಂದ್ರಿಕಾ'

ವಿಶೇಷಾನುಗ್ರಹದಿಂದ ಪಲ್ಲವಿಸಿದ ಪುಣ್ಯಶ್ಲೋಕರ ಪುಣ್ಯಕಥನಗಳಾಗಿ ಶರಣಾಗತರ ಪಾಪಾವಳಿಗಳನ್ನು ಪರಿಹರಿಸುತ್ತವೆ. ಇವೆಲ್ಲವೂ ಅತಿಮಾನುಷ ವೆನ್ನುವ ಲೋಕೋತ್ತರ ಚಿತ್ರವಿಚಿತ್ರ ಘಟನೆಗಳಾಗಿದ್ದು ಆಚಾರ್ಯರ ಮಹಿಮಾನ್ವಿತ ವ್ಯಕ್ತಿತ್ವಕ್ಕೆ ಯೋಗಸಾಮರ್ಥ್ಯಕ್ಕೆ ಕನ್ನಡಿ ಹಿಡಿಯುತ್ತವೆ. ಮಾದರಿಗಾಗಿ ಕೆಲವು ದೃಷ್ಟಾಂತಗಳನ್ನು ಇಲ್ಲಿ ನೋಡಬಹುದು.

## ಅಪೂರ್ವ ಯೋಗಸಿದ್ಧಿ

ಜಂಬುಖಂಡಿ ವಾದಿರಾಜಾಚಾರ್ಯರಿಗೆ ಶೂರ್ಪಾಲಿಯಲ್ಲಿ ಹಲವಾರು ಶಿಷ್ಯರಿದ್ದರು. ಶೂರ್ಪಾಲಿಯಲ್ಲಿದ್ದ ಶ್ರೀಲಕ್ಷ್ಮೀನರಸಿಂಹನನ್ನು ಸೇವಿಸಲು ಮತ್ತು ತಮ್ಮ ಶಿಷ್ಯವೃಂದಕ್ಕೆ ಮಾರ್ಗದರ್ಶನ ಮಾಡಲು ಆಚಾರ್ಯರು ಆಗಾಗ ಶೂರ್ಪಾಲಿಗೆ ಭೇಟಿ ಕೊಡುತ್ತಿದ್ದರು. ಒಮ್ಮೆ ಆಚಾರ್ಯರು ಶೂರ್ಪಾಲಿಯ ತಮ್ಮ ಶಿಷ್ಯರಲ್ಲೊಬ್ಬರಾದ ಕೃಷ್ಣಾ ಚಾರ್ಯರ ಮನೆಗೆ ಭೇಟಿಯಿತ್ತಾಗ ನಡೆದ ಪ್ರಸಂಗವೊಂದು ರೋಚಕ ವಾಗಿದೆ.

ಜಂಬುಖಂಡಿ ಆಚಾರ್ಯರು ಕೃಷ್ಣಾಚಾರ್ಯರ ಮನೆಗೆ ಬಂದಾಗ ಅವರ ಮನೆಯಲ್ಲಿ ಮಂಗಳಕಾರ್ಯವೊಂದರ ಏರ್ಪಾಟಾಗಿತ್ತು. ಮನೆಯಲ್ಲಿ ನೂರಾರು ಜನ ಅತಿಥಿ, ಅಭ್ಯಾಗತರು ಸೇರಿದ್ದರು. ಆಚಾರ್ಯರ ಶಿಷ್ಯರಲ್ಲದ ಹಲವಾರು ಪಂಡಿತರೂ ಸಹ ಆ ಗುಂಪಿನಲ್ಲಿದ್ದರು. ಆಚಾರ್ಯರು ದೂರದ ಪ್ರಯಾಣ ಮಾಡಿ ಶೂರ್ಪಾಲಿಗೆ ಬರುವ ವೇಳೆಗೆ ಮಧ್ಯಾಹ್ನವಾಗಿತ್ತು. ಮಂಗಳ ಕಾರ್ಯದ ನಿಮಿತ್ತ ಪೂಜಾ ವಿಧಿಗಳೆಲ್ಲವೂ ನಡೆದು ನಡುಮನೆಯಲ್ಲಿ ಭೋಜನಕ್ಕೆ ತಯಾರಿ ನಡೆಯುತ್ತಿತ್ತು. ವೈದಿಕ ಬ್ರಾಹ್ಮಣರೆಲ್ಲರೂ ಎಲೆಯ ಮುಂದೆ ಕುಳಿತಿದ್ದರು. ಭೋಜನಕ್ಕೆ ಕುಳಿತ ಬ್ರಾಹ್ಮಣರ ಸಮೂಹವನ್ನು ಕಾಯಿಸಬಾರದೆಂಬ ಉದ್ದೇಶದಿಂದ ಆಚಾರ್ಯರು ಬಂದವರೇ ಯಾವ ಪ್ರಾತರಾಹ್ನಿಕವನ್ನೂ ಮಾಡದೆ ತೀರ್ಥವನ್ನು ಸ್ವೀಕಾರಮಾಡಿ, ನೇರವಾಗಿ ಭೋಜನಕ್ಕೇ ಕುಳಿತುಬಿಟ್ಟರು. ಇದನ್ನು ನೋಡಿ ಎಲ್ಲರಿಗೂ

ಆಶ್ಚರ್ಯವಾಯಿತು. ಆಚಾರ್ಯರ ಬಗ್ಗೆ ಹೆಚ್ಚಿನ ತಿಳಿವಳಿಕೆ ಇಲ್ಲದವರಿಗಂತೂ ಇದು ಜಿಗುಪ್ಸೆಯ ವಿಷಯವೇ ಆಯಿತು. ಆದರೆ ದೊಡ್ಡವರಾದ ಕಾರಣ ಯಾರೂ ಅವರನ್ನು ನೇರವಾಗಿ ಪ್ರಶ್ನಿಸಲಿಲ್ಲ. ಊಟವಾಯಿತು. ಎಲ್ಲರೂ ತಾಂಬೂಲ ಸೇವನೆಯ ಕಲಾಪದಲ್ಲಿ ತೊಡಗಿದರೆ ಆಚಾರ್ಯರು ಮಾತ್ರ ಯಾವುದೋ ತುರ್ತಾದ ಕೆಲಸವಿರುವವರಂತೆ ಹೊರನಡೆದರು. ಕೆಲವು ಶಿಷ್ಯರು ಆಚಾರ್ಯರನ್ನು ಹಿಂಬಾಲಿಸಿದರು.

ಆಚಾರ್ಯರು ನೇರವಾಗಿ ಕೃಷ್ಣಾ ನದಿಯ ದಂಡೆಯಲ್ಲಿದ್ದ ಒಂದು ಕಲ್ಲು ಬಂಡೆಯ ಮೇಲೆ ಕುಳಿತು ನದಿ ನೀರಿನಿಂದ ಅದನ್ನು ಸ್ವಚ್ಛವಾಗಿ ತೊಳೆದರು. ನಂತರ ತಾವು ಭುಂಜಿಸಿದ ಸಮಸ್ತ ಆಹಾರ ಪದಾರ್ಥಗಳನ್ನೂ ಒಂದೊಂದಾಗಿ ತೆಗೆದು ಬಂಡೆಯ ಮೇಲಿಟ್ಟು ಸ್ನಾನಕ್ಕೆ ಇಳಿದರು. ಸ್ನಾನವಾದ ಮೇಲೆ ಆಹ್ನೀಕ, ದೇವತಾರ್ಚನೆಗಳನ್ನು ಪೂರೈಸಿ ಆಚಾರ್ಯರು ಆಗ ತಾನೇ ತಯಾರಿಸಿದಂತೆ ಹಬೆಯಾಡುತ್ತಿದ್ದ ಪದಾರ್ಥಗಳನ್ನು ಪುನಃ ಭುಂಜಿಸಿದರು. ಇದೆಂತಹ ಅಪೂರ್ವ ಯೋಗಸಿದ್ಧಿ ! ಮರೆಯಲ್ಲಿ ನಿಂತು ನೋಡುತ್ತಿದ್ದ ಶಿಷ್ಯರಿಗೆ ಪರಮಾಶ್ಚರ್ಯವಾಯಿತು. ಆಚಾರ್ಯರ ಅಲೌಕಿಕ ಸಾಮರ್ಥ್ಯವನ್ನು ತಿಳಿಯದೆ ಅವರ ವರ್ತನೆಯ ಬಗ್ಗೆ ಜಿಗುಪ್ಸೆ ತಾಳಿದ್ದ ಕೆಲವರಿಗಂತೂ ಇದು ತಲೆ ತಗ್ಗಿಸುವ ವಿಷಯವಾಯಿತು.

ಇಂತಹುದೇ ಒಂದು ಪ್ರಸಂಗ ದಾಸ ಶ್ರೇಷ್ಠರಾದ ಶ್ರೀಪುರಂದರದಾಸರ ಜೀವಿತದಲ್ಲಿಯೂ ಕಂಡುಬರುತ್ತದೆ :

"ಒಂದು ದ್ವಾದಶಿಯ ದಿವಸ ಗುರುಗಳಾದ ವ್ಯಾಸರಾಜರು ಪುರಂದರ ದಾಸರನ್ನು ಮಠಕ್ಕೆ ಬರಲು ಶಿಷ್ಯರ ಮೂಲಕ ಹೇಳಿಕಳುಹಿಸಿದರು. ಗುರುಗಳ ಕರೆ ಬಂದಾಗ ದಾಸರು ಇನ್ನೂ ಪ್ರಾತರಾಹ್ನೀಕಗಳನ್ನು ಪೂರೈಸಿರಲಿಲ್ಲ. ಆದರೆ ಗುರುಗಳ ಆಜ್ಞೆಗೆ ಮೊದಲ ಆದ್ಯತೆಯಿತ್ತು ದಾಸರು ತಾವು ಇದ್ದ ಸ್ಥಿತಿಯಲ್ಲಿಯೇ ಮಠಕ್ಕೆ ಹೊರಟು ಬಂದರು. ಮಠದಲ್ಲಿ ಸ್ವಾಮಿಗಳು ನಡೆಸಿದ ಮೂಲಗೋಪಾಲಕೃಷ್ಣನ ಪೂಜಾ ಕಾರ್ಯಕ್ರಮ

ದಲ್ಲಿ ಭಾಗವಹಿಸಿದರಲ್ಲದೆ ಸ್ವಾಮಿಗಳ ಆಹ್ವಾನದಂತೆ ಅಗ್ರಪಂಕ್ತಿಯಲ್ಲಿ ಭೋಜನಕ್ಕೂ ಕುಳಿತುಬಿಟ್ಟರು. ಇದನ್ನೆಲ್ಲಾ ಗಮನಿಸುತ್ತಿದ್ದ ಹಾಗೂ ದಾಸರ ಏಳಿಗೆಯ ಬಗ್ಗೆ ಅಸಹನೆಯಿದ್ದ ಕೆಲವು ಕುಹಕಕುತೂಹಲಿಗಳು ಊಟವಾದ ಮೇಲೆ ಸ್ವಾಮಿಗಳನ್ನು ಕಂಡು ದಾಸರ ವಿರುದ್ಧ ಚಾಡಿ ಹೇಳಿ, ಅವರ ಮೇಲೆ ಕ್ರಮ ತೆಗೆದುಕೊಳ್ಳುವಂತೆ ಆಗ್ರಹಿಸಿದರು. ದಾಸರ ಹಿರಿಮೆಯನ್ನು ಬಲ್ಲ ವ್ಯಾಸರಾಜರು ಅವರನ್ನು ಕುರಿತು 'ಆಯಿತು, ನೀವು ಹೇಳಿದ್ದು ಸತ್ಯವಾದರೆ ಅವರ ಮೇಲೆ ಕ್ರಮ ತೆಗೆದುಕೊಳ್ಳೋಣ. ಈಗ ದಾಸರನ್ನು ಹಿಂಬಾಲಿಸಿ ಅವರು ಏನು ಮಾಡುವರೋ ನೋಡಿ ಬನ್ನಿ' ಎಂದು ಹೇಳಿ ಕಳುಹಿಸಿದರು. ಸ್ವಾಮಿಗಳ ಆದೇಶದಂತೆ ದಾಸರ ಮೇಲೆ ಚಾಡಿ ಹೇಳಿದ ಗುಂಪು ಅವರನ್ನು ಹಿಂಬಾಲಿಸಿತು. ಪುರಂದರದಾಸರು ನೇರವಾಗಿ ತುಂಗಭದ್ರಾ ನದಿಯ ನಿರ್ಜನ ಪ್ರದೇಶದ ಬಂಡೆಯೊಂದರ ಮೇಲೆ ಕುಳಿತು ಅದನ್ನು ಸ್ವಚ್ಛಗೊಳಿಸಿದರಲ್ಲದೆ ತಾವು ಊಟ ಮಾಡಿದ್ದ ಎಲ್ಲಾ ಪದಾರ್ಥಗಳನ್ನೂ ಹಸಿ ಹಸಿಯಾಗಿ ಹಾಗೆ ತೆಗೆದಿಟ್ಟರು. ನಂತರ ಸ್ನಾನ, ಪೂಜಾದಿಗಳನ್ನು ಮುಗಿಸಿ ಪುನಃ ಅವುಗಳನ್ನು ಭುಂಜಿಸಿದರು. ಇದನ್ನೆಲ್ಲಾ ಮರೆಯಲ್ಲಿ ನಿಂತು ನೋಡುತ್ತಿದ್ದ ಆ ಕುಹಕಿಗಳಿಗೆ ಮಾತೇ ಹೊರಡದಾಯಿತು. ಅವರಿಗೆ ಮತ್ತೆ ಸ್ವಾಮಿಗಳ ಹತ್ತಿರ ಹೋಗಲು ಮುಖವಿರಲಿಲ್ಲ. ಹೀಗೆ ಯೋಗಸಿದ್ಧರ ಬದುಕಿನಲ್ಲಿ ನಡೆದ ಹಲವಾರು ಘಟನೆಗಳಲ್ಲಿ ಸಾಮ್ಯತೆಯಿರುವುದು ಸಾಮಾನ್ಯದ ವಿಷಯವೇ ಆಗಿದೆ.

ಶೂರ್ಪಾಲಿಯಲ್ಲಿದ್ದಷ್ಟು ದಿವಸವೂ ಆಚಾರ್ಯರು ಪಾಠ-ಪ್ರವಚನ ಗಳಿಂದ ಸಜ್ಜನವೃಂದದ ಜ್ಞಾನದ ಗಿಂಡಿಯನ್ನು ತುಂಬು ತ್ತಿದ್ದಂತೆಯೇ ಗಾನ, ನರ್ತನಗಳಿಂದ ಅವರ ಹೃದಯದ ಗಿಂಡಿಯನ್ನೂ ತುಂಬಿಸುತ್ತಿದ್ದರು. ಇಷ್ಟೇ ಅಲ್ಲದೆ ಅವರು ಪ್ರತಿನಿತ್ಯ ಕೃಷ್ಣಾ ನದಿಗೆ ಸ್ನಾನಕ್ಕೆ ಹೋಗುವಾಗ ಹಲವಾರು ಭಕ್ತರ ಪೂಜಾ ಗಿಂಡಿಗಳನ್ನು ತೆಗೆದುಕೊಂಡು ಹೋಗಿ ಶುದ್ಧೋದಕವನ್ನು ತುಂಬಿಸಿಕೊಂಡು ಬಂದು ಅವರ ದೇವತಾರ್ಚನೆಗೂ ನೆರವಾಗುತ್ತಿದ್ದರಂತೆ. ಹಾಗಾಗಿ ಅವರಿಗೆ "ಗಿಂಡಿ ಆಚಾರ್ಯ"ರೆಂಬ ಹೆಸರು ಬಂದಿತೆಂಬ ಹೇಳಿಕೆಯಿದೆ. ಈಗಲೂ

ಶೂರ್ಪಾಲಿ, ಜಮಖಂಡಿ ಮುಂತಾದ ಕಡೆ ಆಚಾರ್ಯರ ವಂಶೀಯರು 'ಗಿಂಡಿಯವರು' ಎಂದೇ ಪ್ರಖ್ಯಾತರಾಗಿದ್ದಾರೆ.

ಜಂಬುಖಂಡಿ ಆಚಾರ್ಯರಿಗೆ ಸರ್ವಜ್ಞರ ಸಮಸ್ತ ಗ್ರಂಥಗಳೂ ಸಹ ಮುಖೋದ್ಗತವಾಗಿದ್ದವು. ಭಾಗವತಾದಿ ಪುರಾಣಗಳಲ್ಲಂತೂ ಅವರಿಗೆ ಅಪರಿಮಿತವಾದ ಪರಿಣತಿಯಿತ್ತು. ಹಸಿವು, ತೃಷೆಗಳ ಆತಂಕವಿಲ್ಲದೆ ಅವುಗಳನ್ನು ದಿನಗಟ್ಟಲೆ, ತಿಂಗಳುಗಟ್ಟಲೆ ಪಾರಾಯಣ ಮಾಡುತ್ತಾ ಕುಳಿತುಬಿಡುತ್ತಿದ್ದರು[1]. ಶ್ರೀಮದ್ಭಾಗವತ ಗ್ರಂಥವನ್ನು ಏಕಾದಶಿ ಬೆಳಿಗ್ಗೆ ಪ್ರಾರಂಭಿಸಿದವರು ಅಖಂಡವಾಗಿ ದ್ವಾದಶಿ ಪಾರಣೆಯ ವೇಳೆಯವರೆಗೂ ಸಮಗ್ರ ದ್ವಾದಶ ಸ್ಕಂದಗಳನ್ನು ಸ್ಫುಟವಾಗಿ ಪಠಿಸುತ್ತಿದ್ದರಂತೆ. ಜಂಬುಖಂಡಿ ಹಾಗೂ ಶೂರ್ಪಾಲಿಯಲ್ಲಿ ಕೃಷ್ಣಾ ಸ್ನಾನಕ್ಕೆ ಹೋದಾಗ ಒಮ್ಮೊಮ್ಮೆ ಆಚಾರ್ಯರು ಕುತ್ತಿಗೆಯವರೆಗೂ ಬರುವಂತೆ ಮರಳಿನಲ್ಲಿ ಕುಳಿತುಕೊಂಡು ಭಾಗವತಾದಿ ಗ್ರಂಥಗಳನ್ನು ಪುಸ್ತಕದ ಸಹಾಯವಿಲ್ಲದೆ ನಿರರ್ಗಳವಾಗಿ ಪಾರಾಯಣ ಮಾಡುತ್ತಿದ್ದರಂತೆ.

ಒಮ್ಮೆ ಸೋದಾ ಕ್ಷೇತ್ರದಲ್ಲಿ ಏಕಾದಶಿಯ ಜಾಗರಣೆಯ ಸಂದರ್ಭದಲ್ಲಿ ಭಕ್ತರಿಗೆ ಅನಿರೀಕ್ಷಿತವಾಗಿ ಹಾವೊಂದು ಕಚ್ಚಿ ಅವರು ಮೃತರಾದಾಗ, ಆಚಾರ್ಯರು ಒಂದು ತುಳಸಿದಳವನ್ನು ಕೈಯಲ್ಲಿ ಹಿಡಿದು ಇಡೀ ರಾತ್ರಿ ಸಮಗ್ರ ಭಾಗವತವನ್ನು ಪಾರಾಯಣ ಮಾಡಿ ವಾದಿರಾಜರಿಗೆ ಸಮರ್ಪಿಸಿದರಂತೆ. ಆಗ ನಿದ್ರೆಯಿಂದ ಎದ್ದವನಂತೆ ಮೃತವ್ಯಕ್ತಿ ಎದ್ದು ಕುಳಿತ ರೋಚಕ ಮಹಿಮೆ ಈಗಲೂ ಅವರ ಭಕ್ತವೃಂದದಲ್ಲಿ ಜನಜನಿತವಾಗಿದೆ. ಒಂದು ಬಾರಿ ಹಾಲಿಮರಡಿ ಎಂಬ ಸ್ಥಳದಲ್ಲಿದ್ದ ವೆಂಕಪ್ಪ ಎಂಬ ಭಕ್ತರೊಬ್ಬರ ಮನೆಗೆ ಹೋಗಿದ್ದಾಗ ಹಸಿವು, ತೃಷೆಗಳ ಪರಿವೆಯಿಲ್ಲದೇ ಮೂರು ದಿವಸಗಳ ಕಾಲ ಕೊಠಡಿಯೊಂದರಲ್ಲಿ ಕುಳಿತು

---

1. ಮುಖತೋ ಮೂಲಗ್ರಂಥಸ್ಯ ಪಾರಾಯಣಪರಾಯಣಃ।
ಕದಾಪಿ ನಹಿ ತತ್ತ್ಯಾಜ್ಯ ಸಂಪ್ರಾಪ್ತಾಯಾಂ ಮಹಾಪದಿ ॥
ಪಾರಾಯಣಂ ಮುಹೂರ್ತಂ ಯತ್ಕ್ರಿಯತೇ ತೇನ ಧೀಮತಾ।
ತದ್ವೈವಾನ್ಯೈರ್ನಪಕ್ಷೇಣ ಮಾಸೇನಾಪಿ ಸಮಾಪ್ಯತೇ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ 25–26)

ಜ್ಞಾನಿಗಳಾದ ರಾಮದಾಸರೇ ಮೊದಲಾದವರೊಂದಿಗೆ ಶಾಸ್ತ್ರಾರ್ಥ ಚಿಂತನೆಯಲ್ಲಿ ಆಚಾರ್ಯರು ತಲ್ಲೀನರಾಗಿದ್ದರಂತೆ. ಪ್ರತಿವರ್ಷ ವೈಶಾಖ ಶುದ್ಧ ತೃತೀಯಾದಂದು ಕೃಷ್ಣವೇಣೀ ತೀರದ ಛಾಯಾ ಭಗವತಿ ಕ್ಷೇತ್ರಕ್ಕೆ ತೀರ್ಥಸ್ನಾನಕ್ಕಾಗಿ ಹೋಗುತ್ತಿದ್ದ ಆಚಾರ್ಯರು ಒಂದು ಸಲ ಮುಂಜಾನೆ 'ತತ್ತ್ವಪ್ರಕಾಶಿಕಾ' ಗ್ರಂಥದ ಮೊದಲ ಶ್ಲೋಕವನ್ನು ಪಠಿಸುತ್ತಾ ಕೃಷ್ಣಾ ನದಿಯಲ್ಲಿ ಮುಳುಗಿದವರು ಮರುದಿವಸ ಅದೇ ಗ್ರಂಥದ ಅಂತ್ಯ ಶ್ಲೋಕವನ್ನು ಉಚ್ಚರಿಸುತ್ತಾ ಮೇಲೆದ್ದರಂತೆ. ಬೆಳಗಾವಿಯಲ್ಲಿ ಲಿಂಗಸೂಗೂರು ರಾಮದಾಸರೊಂದಿಗಿದ್ದಾಗ ಆಚಾರ್ಯರು ಊಟಕ್ಕೆ ಕೂಡುವ ಮುನ್ನ ಕೇವಲ ಒಂದು ತುಳಸೀ ದಳವನ್ನು ಕೈಯಲ್ಲಿ ಹಿಡಿದು ಇಡೀ ಐತರೇಯ ಭಾಷ್ಯವನ್ನು ಪುಸ್ತಕದ ನೆರವಿಲ್ಲದೆ ಹೇಳಿ ಗುರುಬಿಂಬನಿಗೆ ಸಮರ್ಪಿಸಿದರಂತೆ.

'ಮಹಂತಂ ಕಾಪುರಂ ದೀಪಂ ಪ್ರತ್ಯಹಂ ಜ್ವಾಲಯನ್ ಹರೇಃ' ಎಂಬ ಶ್ರೀಸುಧಾಕರಗುರುಗುಣರತ್ನಮಾಲಾಕಾರರ ಮಾತಿನಂತೆ ಸಾಯಂ ಪೂಜೆಯ ಸಂದರ್ಭದಲ್ಲಿ ಆಚಾರ್ಯರು ನಡೆಸುತ್ತಿದ್ದ ಕರ್ಪೂರ ದಾರತಿಯೂ ಸಹ ವಿಶಿಷ್ಟವಾಗಿತ್ತು. ಹರಿದಾಸ ಹೃದಯವುಳ್ಳ ಆಚಾರ್ಯರು ದೇಹಮೋಹವನ್ನು ಬದಿಗೊತ್ತಿ ಗಂಧರ್ವರಂತೆ ಗಾನ ಮಾಡುತ್ತಾ, ನಾರದರಂತೆ ಭಕ್ತಿಪೂರ್ಣವಾಗಿ ನರ್ತಿಸುತ್ತಿದ್ದರು. ಗೋಘೃತದಲ್ಲಿ ನೆಂದ ಬತ್ತಿಗಳಷ್ಟೇ ಅಲ್ಲದೆ ಬರಿಗೈಯಲ್ಲಿ ಕರ್ಪೂರದ ಉಂಡೆಗಳನ್ನು ಹಚ್ಚಿಕೊಂಡು ಅದು ಪೂರ್ಣವಾಗಿ ಉರಿಯುವವರೆಗೂ ಯಾವುದೇ ತೆರನಾದ ಭಾವವಿಕಾರವಿಲ್ಲದೆ ಅಖಂಡವಾಗಿ ಶ್ರೀಹರಿಗೆ ಆರತಿಯನ್ನು ಮಾಡುತ್ತಿದ್ದರಂತೆ[1]. ಒಮ್ಮೆ ಬೆಳಗಾವಿಯ ಶಿಷ್ಯರಾದ

---

1. ಕದಾಚಿದ್ಗೋಘೃತಾಮತ್ರೇ ಪೂರ್ಣೇಃ ನಿಕ್ಷಿಪ್ಯ ವರ್ತಿಕಾಃ।
ಬಹ್ವೀರ್ದೇವಾಧಿಪಸ್ಯಾಗ್ರೇ ಜ್ವಾಲಯನ್ಪ್ರೀತಿಹೇತವೇ ॥
ಮಹಂತಂ ಕಾಪುರಂ ದೀಪಂ ಪ್ರತ್ಯಹಂ ಜ್ವಾಲಯನ್ ಹರೇಃ।
ಸೇವಾಸಮಾಪ್ತಿಪರ್ಯಂತಂ ಶುಶುಭೇ ಬ್ರಹ್ಮಪುತ್ರವತ್ ॥
ಗಾಯನ್ಗಂಧರ್ವರಾಜೇವ ಹರೇರ್ಗೀತಂ ಮುಹುರ್ಮುಹುಃ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ 32–34)

ವಾಳವೇಕರ್ ಭೀಮಾಚಾರ್ಯರ ಮನೆಯಲ್ಲಿ ಇಡೀ ರಾತ್ರಿ ಹೀಗೆ ಕರ್ಪೂರದಾರತಿಯ ಸೇವೆಯನ್ನು ನಡೆಸಿ, ತಮ್ಮ ಬಿಂಬಮೂರ್ತಿಗೆ ಸಮರ್ಪಿಸಿದರೆಂದು ತಿಳಿದು ಬರುತ್ತದೆ.

**'ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ।**
**ಈಶಿತ್ವಂ ಚ ವಶಿತ್ವಂ ಚ ಪ್ರಾಕಾಮ್ಯಂ ಪ್ರಾಪ್ತಿರೇವ ಚ॥'**

ಎಂಬಂತೆ ಅಣಿಮಾದಿ ಅಷ್ಟಯೋಗಸಿದ್ಧಿಗಳನ್ನು ಆಚಾರ್ಯರು ಕರಗತ ಮಾಡಿಕೊಂಡಿದ್ದರೆಂಬುದಕ್ಕೆ ಅವರ ಜೀವಿತದಲ್ಲಿ ನಡೆದ ಹಲವಾರು ಪ್ರಸಂಗಗಳನ್ನು ಉದಾಹರಿಸಬಹುದು.

## ಹಿತ್ತಲಲ್ಲೇ ತಿರುಪತಿ ಯಾತ್ರೆ

ಜ್ಞಾನಿಗಳನ್ನು ಕಂಡರೆ ಆಚಾರ್ಯರಿಗಿದ್ದ ಗೌರವವು ಅಪರಿಮಿತ ವಾದದ್ದು. ಅವರನ್ನು ಸಾಮಾನ್ಯ ಮನುಷ್ಯರೆಂದು ಭಾವಿಸದೆ ಚಲಪ್ರತಿ ಮಾತ್ವೇನ ಪೂಜಿಸಿ ಸಂತೋಷಪಡುತ್ತಿದ್ದರು. ಪ್ರಮೇಯಜ್ಞರಾಗಿದ್ದ ಶ್ರೀಶಪ್ರಾಣೇಶವಿಠಲಾಂಕಿತ ಲಿಂಗಸೂಗೂರು ರಾಮದಾಸರಲ್ಲಂತೂ ಆಚಾರ್ಯರಿಗೆ ತುಂಬಾ ಪೂಜ್ಯ ಭಾವವಿದ್ದಿತು. ಹೆಳವರಾಗಿದ್ದ ಅವರನ್ನು 'ನಮ್ಮ ದೇವರು' ಎಂದು ಹೆಗಲ ಮೇಲೇ ಹೊತ್ತುಕೊಂಡು ಯಾತ್ರೆ ಕೈಗೊಳ್ಳುತ್ತಿದ್ದರಂತೆ. ಹಲವು ಬಾರಿ ಅವರನ್ನು ಮಣೆಯ ಮೇಲೆ ಕೂರಿಸಿ ಷೋಡಶೋಪಚಾರಗೈದು ಪೂಜಿಸುತ್ತಿದ್ದರಂತೆ[1].

---

1. 'ಶ್ರೀಶಪ್ರಾಣೇಶ ವಿಠಲರು ಲಿಂಗಸೂಗುರು ಅಪರೋಕ್ಷ ಜ್ಞಾನಿಗಳನ್ನು ಆಚಾರ್ಯರು ಬಹುಪ್ರಕಾರ ಪೂಜಿಸಿ ಗೌರವಿಸುತ್ತಿದ್ದರಂತೆ. ರಾಮದಾಸರಿಗೆ ಕಾಲು ಇಲ್ಲದೆ ನಡೆಯಲಿಕ್ಕೆ ಬಾರದೆ ಇದ್ದವರನ್ನು ಆಚಾರ್ಯರು ನಮ್ಮ ದೇವರು ಬಂದರೆಂದು ಹೊತ್ತುಕೊಂಡು ತಿರುಗುತ್ತಿದ್ದರಂತೆ. ಒಂದು ಸಮಯ ಬೆಳಗಾವಿ ಶಹಾಪುರ ನಾಯಕರ ಗೃಹದಲ್ಲಿ ಉಭಯ ಜ್ಞಾನಿಗಳ ಸಮ್ಮೇಳನವಾದಾಗ್ಯೆ 'ನಾಯಕರೆ ಇಂದು ನಮ್ಮ ದೇವರಿಗೆ ಪುನಕಾಭಿಷೇಕವಾಗಬೇಕು' ಎಂದು ಎರಡು ದೊಡ್ಡ ಗಂಧದ ಎಣ್ಣೆ

→

ಒಂದು ಸಲ ಆಚಾರ್ಯರು ಬೆಳಗಾವಿ ಪ್ರಾಂತದಲ್ಲಿ ರಾಮದಾಸರನ್ನು ಹೆಗಲಮೇಲೆ ಕೂಡಿಸಿಕೊಂಡು ತಮ್ಮ ಶಿಷ್ಯರಾದ ಶ್ರೀಷಟ್ಪುರಾಚಾರ್ಯರೇ ಮೊದಲಾದವರೊಂದಿಗೆ ಸಂಚಾರ ಕೈಗೊಂಡಾಗ ಶಹಾಪುರದ ಶ್ರೀನಿವಾಸ ನಾಯಕರೆಂಬ ಸದ್ಗೃಹಸ್ಥರ ಮನೆಯಲ್ಲಿ ಬಿಡಾರ ಮಾಡಿದರು. ಅಲ್ಲಿ ಹಲವಾರು ದಿವಸಗಳಿದ್ದು ಭಾಗವತಾದಿ ಪ್ರವಚನಗಳನ್ನು ಮಾಡಿ ಮಂಗಳವನ್ನು ಮಾಡಿದ ಆಚಾರ್ಯರು ಒಂದು ಬೆಳಿಗ್ಗೆ ಹಿತ್ತಿಲಿನ ಬಾವಿಕಟ್ಟೆಯ ಹತ್ತಿರ ಸ್ನಾನಕ್ಕಾಗಿ ತುಂಡು ಪಂಚೆಯಲ್ಲಿ ಹೋದವರು ಇದ್ದಕ್ಕಿದ್ದಂತೆ ಮಾಯವಾದರು. ಎಷ್ಟು ಹೊತ್ತಾದರೂ ಬಾರದಿದ್ದಾಗ ಅಲ್ಲಿದ್ದ ಕೆಲವು ಶಿಷ್ಯರಿಗೆ ಆತಂಕವಾಯಿತು. ಗುರುಗಳು ಎಲ್ಲಿ ಹೋದರೆಂದು ಎಲ್ಲ ಕಡೆಯೂ ತಡಕಾಡಿದರು. ಆದರೆ ಆಚಾರ್ಯರ ಯೋಗ ಸಾಮರ್ಥ್ಯಗಳ ಪರಿಚಯವಿದ್ದ ಷಟ್ಪುರಾಚಾರ್ಯರೇ ಮೊದಲಾದ ಶಿಷ್ಯರು ಮಾತ್ರ ನಿರಾತಂಕದಿಂದಿದ್ದರು.

ಹೀಗೆ ಮೂರು ದಿವಸಗಳು ಕಳೆದವು. ಸಂಜೆ ನಡೆಯಬೇಕಾಗಿದ್ದ ಪ್ರವಚನದ ಸಮಯಕ್ಕೆ ಸರಿಯಾಗಿ ಆಚಾರ್ಯರು ಹಿತ್ತಲ ಬಾಗಿಲಿನಿಂದ

---

→ ಸೀಸೆಗಳನ್ನು ತರಿಸಿ, ದಾಸರನ್ನು ದೊಡ್ಡ ಬಚ್ಚಲಮನೆಯ ವೇದಿಕೆಯ ಪೀಠದಲ್ಲಿ ಕುಳ್ಳಿರಿಸಿ ದಾಸರ ತಲೆಯ ಮೇಲೆ ಎರಡು ಸೀಸೆ ಗಂಧದ ಸುಗಂಧದ ಎಣ್ಣೆ ಸುರಿವಿ, ಅದನ್ನೆಲ್ಲಾ ಮೈಯೆಲ್ಲಾ ಇಂಗುವಂತೆ ತಾವೇ ತಿಕ್ಕಿ, ನಾಲ್ಕು ಹಂಡೆ ಬಿಸಿನೀರಿನಿಂದ ಎರೆದು ಅಭಿಷೇಕ ಮಾಡಿದರು. ಅನಂತರ ದಾಸರ ಮೈಯ್ಯೆಲ್ಲಾ ವರೆಸಿ, ದೇವರ ಮನೆಯಲ್ಲಿ ಪೀಠದಲ್ಲಿ ಕುಳ್ಳಿರಿಸಿ ಆಚಮನ ಮಾಡಿಸಿ, ದ್ವಾದಶನಾಮ ಶ್ರೀಮುದ್ರೆ ತಾವೇ ದಾಸರಿಗೆ ಹಚ್ಚಿ, ಕೇಸರಿಗಂಧವನ್ನು ಮೈತುಂಬಾ ದಿಪ್ಪಾಗಿ ಪೂಸಿ, ಅಕ್ಷತೆಗಳನ್ನಿಟ್ಟು ಪೂಮಾಲೆಯನ್ನು ಹಾಕಿ ಬಿಸಿಯಾಗಿ ಕಾಯಿಸಿದ, ಕಾಲ್ಪಿ ಕಲ್ಲುಸಕ್ಕರೆ ದ್ರಾಕ್ಷಿ ಹಾಕಿದ ಹಾಲನ್ನು ದೊಡ್ಡ ಬೆಳ್ಳಿಯ ಪಾತ್ರೆಯಲ್ಲಿ 'ದೇವರೇ ನೈವೇದ್ಯವಾಗಲಿ' ಎಂದು ಗಂಭೀರ ಸ್ವರದಿಂದ ಹೇಳಿ ಹಾಲು ಕುಡಿಸಿದರಂತೆ. ಚಲಪ್ರತಿಮೆಗಳನ್ನು ಅರ್ಚಿಸುವ ಕೃತಯುಗ ಧರ್ಮ ತೋರ್ದರೆಂದು ಕಣ್ಣಾರೆ ನೋಡಿದ ಶಿಷ್ಯರು ಹೇಳಿದ್ದನ್ನು ಮಹಾ ಔತ್ಸುಕ್ಯದಿಂದ ಶಹಾಪುರ ನಾಯಕರಲ್ಲಿ ಕೇಳಿದ್ದೇನೆ"

– ಶ್ರೀಗುರುಗೋವಿಂದದಾಸರು 'ಹರಿಭಕ್ತವಿಜಯ ಭಾಗ–1 ರಲ್ಲಿ'

ಹಠಾತ್ತನೆ ಆಗಮಿಸಿದರು. ಅಲ್ಲಿದ್ದವರಿಗೆಲ್ಲಾ ಆಚಾರ್ಯರನ್ನು ನೋಡಿ ಆನಂದಾಶ್ಚರ್ಯಗಳು ಏಕಕಾಲದಲ್ಲಿ ಉಂಟಾದವು. ಮೂರು ದಿವಸಗಳ ಹಿಂದೆ ಮಡಿಪಂಚೆಯಲ್ಲಿ ಹಿತ್ತಲಿಗೆ ಸ್ನಾನಕ್ಕಾಗಿ ಹೋದವರು ಈಗ ಬೆಲೆಬಾಳುವ ರೇಷ್ಮೆಯ ಮಡಿವಸ್ತ್ರ ಧರಿಸಿ ಒಮ್ಮೆಲೆ ಪ್ರತ್ಯಕ್ಷರಾಗಿದ್ದಾರೆ. ಮೈಮೇಲೆ ಮೃತ್ತಿಕಾಲೇಪಿತ ದ್ವಾದಶನಾಮಗಳು. ಹಣೆಯಲ್ಲಿ ಅಂಗಾರಾಕ್ಷತೆ ವಿರಾಜಿಸುತ್ತಿದೆ. ಪ್ರಸನ್ನವದನರಾಗಿ ಕೈಯಲ್ಲಿ ತೀರ್ಥದ ಗಿಂಡಿ ಮತ್ತು ಸ್ವಾಮಿಯ ಪ್ರಸಾದವನ್ನು ಹಿಡಿದು 'ತಿರುಪತಿಗೆ ಹೋಗಿ ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು, ಶ್ರೀನಿವಾಸನ ದರ್ಶನವನ್ನು ಪಡೆದು ಈಗಷ್ಟೇ ಬರುತ್ತಿದ್ದೇನೆ. ಇದೋ ಹಿಡಿಯಿರಿ. ನಿಮಗಾಗಿ ಸ್ವಾಮಿ ಪುಷ್ಕರಿಣಿಯ ಪವಿತ್ರ ತೀರ್ಥ ಹಾಗೂ ತಿರುಮಲೇಶನ ಪ್ರಸಾದವನ್ನು ತಂದಿದ್ದೇನೆ' ಎಂದು ಎಲ್ಲರಿಗೂ ಕೊಡುತ್ತಿದ್ದಾರೆ. ಆಚಾರ್ಯರ ಭವ್ಯನಿಲುವಿನಲ್ಲಿಯೇ ಎಲ್ಲರಿಗೂ ಶ್ರೀನಿವಾಸನ ಮಂಗಳ ರೂಪದ ದರ್ಶನವಾಯಿತೆಂದು ತೋರುತ್ತದೆ. ಆಗಷ್ಟೇ ತಯಾರಿಸಿದಂತೆ ಕಂಡ ಕೇಸರಿ ಪಚ್ಚಕರ್ಪೂರಯುಕ್ತವಾಗಿ ಘಮಘಮಿಸುತ್ತಿದ್ದ ಪ್ರಸಾದ ಹಾಗೂ ಪವಿತ್ರ ತೀರ್ಥವನ್ನು ಸೇವಿಸಿ ಅಲ್ಲಿದ್ದ ಭಕ್ತವೃಂದ ಕೃತಾರ್ಥ ಭಾವನೆಯನ್ನುಹೊಂದಿತು.

ಹೀಗೆ ತಾವು ಸಂಕಲ್ಪಿಸಿದ ಸ್ಥಳಗಳಿಗೆ ವಾಯು ವೇಗದಲ್ಲಿ ಹೋಗಿ ಬರುತ್ತಿದ್ದ ಆಚಾರ್ಯರು ಒಂದು ವೈಶಾಖ ಮಾಸದ ಪೌರ್ಣಿಮೆಯ ದಿವಸ ಪ್ರಾತಃಕಾಲ ಬೆಳಗಾವಿಯಲ್ಲಿದ್ದವರು ಮಧ್ಯಾಹ್ನದ ಹೊತ್ತಿಗೆ ತಮ್ಮ ಮಿತ್ರರಾದ ಲಿಂಗಸೂಗೂರಿನ ರಾಮದಾಸರನ್ನು ಹೆಗಲ ಮೇಲೆ ಕೂಡಿಸಿಕೊಂಡು ಮುಗಟಖಾನ ಹುಬ್ಬಳ್ಳಿಯಲ್ಲಿರುವ ಶ್ರೀಅಶ್ವತ್ಥನರಸಿಂಹ ಕ್ಷೇತ್ರದ ರಥೋತ್ಸವದ ಸಮಯಕ್ಕೆ ಸರಿಯಾಗಿ ಹಾಜರಾಗಿದ್ದಾರೆ. ಮತ್ತೊಮ್ಮೆ ಬೆಳಗಾವಿಯಿಂದ ಹದಿನಾಲ್ಕು ಮೈಲು ದೂರವಿರುವ ನಂದಿಹಳ್ಳಿಗೆ ರಾಮದಾಸರನ್ನು ಹೊತ್ತುಕೊಂಡು ಅಲ್ಲಿದ್ದ ಗಲಗಲಿ ಮನೆತನದ ಶ್ರೀನರಸಿಂಹಾಚಾರ್ಯರೆಂಬ ಜ್ಞಾನಿಗಳೊಬ್ಬರ ಮನೆಯ ಆತಿಥ್ಯವನ್ನು ಸ್ವೀಕರಿಸಿ, ಅವರನ್ನು ಸಂತೋಷಪಡಿಸಿ ಹಿಂದಿರುಗಿದ್ದಾರೆ.

ಒಂದು ಕಾರ್ತಿಕ ಮಾಸದಲ್ಲಿ ಜಂಬುಖಂಡಿಯಲ್ಲಿ ಆಚಾರ್ಯರೇ ಸ್ಥಾಪಿಸಿದ್ದ ಶ್ರೀಪಾಂಡುರಂಗವಿಠಲನ ರಥೋತ್ಸವಕ್ಕೆ ಬಂದವರು ಅದೇ ಬೆಳಿಗ್ಗೆ ಅನಿರೀಕ್ಷಿತವಾಗಿ ಮಾಯವಾಗಿ ಪಂಢರಪುರಕ್ಕೆ ಹೋಗಿ ಸ್ವಾಮಿಯ ದರ್ಶನ ಪಡೆದುಕೊಂಡು ಮಧ್ಯಾಹ್ನ ನಡೆಯುವ ಉತ್ಸವದ ಹೊತ್ತಿಗೆ ಸರಿಯಾಗಿ ಜಂಬುಖಂಡಿಯಲ್ಲಿ ವಿಠಲನ ಪ್ರಸಾದದೊಂದಿಗೆ ಪ್ರತ್ಯಕ್ಷ ರಾಗಿದ್ದಾರೆ. ಆ ಸಂದರ್ಭದಲ್ಲಿ ಆಚಾರ್ಯರನ್ನು ಪಂಢರಾಪುರದಲ್ಲಿ ಭೇಟಿಯಾದ ಕೆಲವು ಜಂಬುಖಂಡಿ ವಾಸಿಗಳು ಊರಿಗೆ ಮರಳಿದ ನಂತರ ಈ ವಿಷಯವನ್ನು ತಿಳಿಸಿದಾಗ ಭಕ್ತವೃಂದಕ್ಕಾದ ಆಶ್ಚರ್ಯ ಅಷ್ಟಿಷ್ಟಲ್ಲ. ಇದೇ ತರಹ ಇನ್ನೊಮ್ಮೆ ಶ್ರೀವಿಜಯದಾಸರ ಆರಾಧನೆಯ ದಿವಸ ಬಳ್ಳಾರಿಯ ಭಕ್ತರೊಬ್ಬರ ಮನೆಯಲ್ಲಿ ಬಿಡಾರ ಮಾಡಿದ್ದವರು ಮುಹೂರ್ತ ಮಾತ್ರದಲ್ಲಿ ಚಿಪ್ಪಗಿರಿಗೆ ಹೋಗಿ ಅಲ್ಲಿನ ಉತ್ಸವಾದಿಗಳಲ್ಲಿ ಪಾಲ್ಗೊಂಡು ಮರಳಿದ್ದಾರೆ. ಒಂದು ಸಲ ಬೆಳಿಗ್ಗೆ ಎಂಟು ಗಂಟೆಯ ಹೊತ್ತಿಗೆ ಬಳ್ಳಾರಿಯಲ್ಲಿದ್ದ ಆಚಾರ್ಯರು ಪಾದಚಾರಿಗಳಾಗಿ ಕೇವಲ ಒಂದೇ ಗಂಟೆಯ ಒಳಗೆ ಹತ್ತಿಬೆಳಗಲ್ ತಲುಪಿ ಅಲ್ಲಿ ತಮ್ಮ ಶಿಷ್ಯರಾದ ಶ್ರೀ ಅರಳಿಕಟ್ಟೆ ನರಸಿಂಹಾಚಾರ್ಯರು ನಡೆಸುತ್ತಿದ್ದ ಸುಧಾಮಂಗಳ ಕಾರ್ಯಕ್ರಮದಲ್ಲಿ ಭಾಗವಹಿಸಿ ಅಲ್ಲಿನ ವಿದ್ವಾಂಸರನ್ನು ತಮ್ಮ ಪ್ರೌಢ, ಪ್ರಮೇಯಭರಿತ ವ್ಯಾಖ್ಯಾನದಿಂದ ದಂಗು ಬಡಿಸಿದ್ದಾರೆ. ಶಿವಮೊಗ್ಗ ಜಿಲ್ಲೆಯ ನ್ಯಾಮತಿ ಎಂಬ ಸ್ಥಳದಲ್ಲಿದ್ದ ರಂಗಪ್ಪ ಎಂಬ ಸದ್ಗೃಹಸ್ಥರೊಬ್ಬರ ಮನೆಯಲ್ಲಿ ಪಿತೃಕಾರ್ಯವಿದ್ದಾಗ ಅಭ್ಯಾಗತರಾಗಿ ಅಲ್ಲಿಗೆ ಹೋಗಿ ಕೇವಲ ಹಾಲನ್ನು ಮಾತ್ರ ಸ್ವೀಕರಿಸಿ ಅವರ ಪಿತೃದೇವತೆಗಳನ್ನು ತೃಪ್ತಿಪಡಿಸಿದ್ದಾರೆ. ಇದೇ ತರಹ ತಮ್ಮಿಂದಾಗಿ ಶ್ರೀಮಠದಿಂದ ಬಹಿಷ್ಕೃತಗೊಂಡಿದ್ದ ತಮ್ಮ ಪರಮಾಪ್ತಶಿಷ್ಯ ಶ್ರೀವಾಳವೇಕರ್ ಭೀಮಾಚಾರ್ಯರ ಮಾತೋಶ್ರೀ ಯವರ ಶ್ರಾದ್ಧಾದಿ ಕ್ರಿಯೆಗಳಿಗೆ ಆ ಊರಿನ ವಿಪ್ರರು ಸಹಕರಿಸದಿದ್ದಾಗ ಜಂಬುಖಂಡ್ಯಾರ್ಯರು ಎಲ್ಲಿಂದಲೋ ಆಕಸ್ಮಿಕವಾಗಿ ಆಗಮಿಸಿ ಶಿಷ್ಯರಿಗೆ ಸಾಂತ್ವನವಿತ್ತು ಸಮಸ್ತ ಕಾರ್ಯಗಳಿಗೆ ನೆರವಾದರಲ್ಲದೆ ಪೂರ್ವಭುಕ್ತಕ್ಕೆ ತಾವೇ ಕುಳಿತು ಅವರನ್ನು ಸಂತೃಪ್ತಿಪಡಿಸಿದ್ದಾರೆ.

ಮನಸ್ಸಿಗೆ ಬಂದಾಗ ತಮಗೆ ಅತಿಪ್ರಿಯವಾಗಿದ್ದ ಸೋದಾ ಕ್ಷೇತ್ರಕ್ಕೂ ಸಹ ಆಚಾರ್ಯರು ಈ ರೀತಿ ಹಲವಾರು ಬಾರಿ ಹೋಗಿ ಬಂದಿದ್ದಾರೆ. ಬೆಳಿಗ್ಗೆ ಧಾರವಾಡ ಜಿಲ್ಲೆಯ ಕುಂದಗೋಳ ಬಳಿಯ ಕಳಸ ಎಂಬ ಗ್ರಾಮದಲ್ಲಿದ್ದವರು ಪ್ರಾತಃಸ್ನಾನಹ್ನಿಕಗಳನ್ನು ಸೋದೆಯಲ್ಲಿ ತೀರಿಸಿಕೊಂಡು ಅಪರಾಹ್ನಕ್ಕೆ ಸರಿಯಾಗಿ ಕಳಸಕ್ಕೆ ಹಿಂದಿರುಗುತ್ತಿದ್ದರಂತೆ. ಆ ಸಂದರ್ಭದಲ್ಲಿ ಅವರ ಮೈಗಾಳಿ ತಗುಲಿ ಪಿಶಾಚಾದಿಗಳು ಕುಣಿಯಲಾರಂಭಿಸಿದಾಗ ಕರುಣೆಯಿಂದ ಅವುಗಳಿಗೆ ಸೋದಾ ಕ್ಷೇತ್ರದ ದರ್ಶನ ಮಾಡಿಸಿ ಬಿಡುಗಡೆಯ ಹಾದಿಯನ್ನು ತೋರಿಸುತ್ತಿದ್ದ ಸಂದರ್ಭಗಳೂ ಹಲವಾರಿವೆ. ಬದರೀ ಯಾತ್ರೆಯ ಸಂದರ್ಭದಲ್ಲಿಯೂ ಸಹ ಆಚಾರ್ಯರು ಇದೇ ಮಾದರಿಯಲ್ಲಿ ಕೆಲವೊಮ್ಮೆ ಪ್ರಯಾಣ ಬೆಳೆಸಿರುವುದು ಕಂಡುಬರುತ್ತದೆ. ಬಿಂಬಾನುಸಂಧಾನ ನಿಪುಣರಾದ ಆಚಾರ್ಯರು ಇದನ್ನು ತಮ್ಮ ಪ್ರತಿಷ್ಠೆಯ ಪ್ರತೀಕವಾಗಿ ತಿಳಿಯದೆ ತಮ್ಮ ಬಿಂಬರೂಪಿ ಹರಿಯ ಆಂದೋಲನ ಸೇವೆಯೆಂಬುದಾಗಿ ಭಾವಿಸಿ ಸಮಸ್ತವನ್ನೂ ಸಮರ್ಪಿಸಿ ಸಂತೋಷಪಡುತ್ತಿದ್ದರು[1]. ವಾಹನ ಸೌಕರ್ಯಗಳು ಈಗಿನಷ್ಟು ಸಮರ್ಪಕವಾಗಿರದಿದ್ದ ಆ ಸಂದರ್ಭದಲ್ಲಿ ಆಚಾರ್ಯರ ಈ ವಾಯುಗಮನ ಹಾಗೂ ವಿಶಿಷ್ಟ ಪಾದಯಾತ್ರೆ ವಿಸ್ಮಯವೆನ್ನಿಸಿದರೂ ಅಪೂರ್ವ ಯೋಗ ಸಿದ್ಧಿಯನ್ನು ಗಳಿಸಿದ್ದ ಭಾವಿಸಮೀರರ ಭಟರಿಗೆ ಇದು ಆಟಿಕೆಯ ವಿಷಯವೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು.

ಆಚಾರ್ಯರು ಬದರೀ ಯಾತ್ರೆಯನ್ನು ಕೈಗೊಂಡಿದ್ದಾಗ ಅವರ ಯೋಗ ಸಾಮರ್ಥ್ಯವನ್ನು ಹೊರಗೆಡುಹಿದ ಮತ್ತೊಂದು ರೋಚಕ ಪ್ರಸಂಗ:

---

1. ಸಂಚಾರಕಾಲೇ ದೇಹಸ್ಥಹರೇರಾನಂದೋಲನಂ ತ್ವಿತಿ ॥
ಸ್ವದೇಹಂ ಮನ್ಯಮಾನೋಽಯಂ ಸ್ವವೇಗಜಿತಪಕ್ಷಿರಾಟ್ ।
ಬಹ್ವತಿಕ್ರಾಂತಪಂಥಾನಂ ನಾವಿದದ್ವಿಜಪುಂಗವಃ ॥
ಏಕೈಕಸ್ಮಿನ್ ದಿನೇ ಪಂಚಷಟ್ ಸಪ್ತದಶವಿಂಶತಿಃ ।
ಯೋಜನಾನ್ಯಪಿ ಗತ್ವಾ ತದ್ಧರೌ ಭಕ್ತ್ಯಾ ಸಮಪರ್ಯನ್ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ 22–24)

ಆಚಾರ್ಯರೊಂದಿಗೆ ವೆಂಕಣ್ಣಾಚಾರ್ಯರ ಮಾತೋಶ್ರೀಯವರೂ ಸೇರಿದಂತೆ ಅಭಿಮಾನೀ ಶಿಷ್ಯರ ದೊಡ್ಡ ಗುಂಪೇ ಇದ್ದಿತು. ವೆಂಕಣ್ಣಾಚಾರ್ಯರ ಮಾತೋಶ್ರೀಯವರೇ ಅಡುಗೆಯ ಉಸ್ತುವಾರಿ ವಹಿಸಿದ್ದರು. ಬದರಿಯ ಮಾರ್ಗದ ದುರ್ಗಮ ಪ್ರದೇಶವೊಂದರಲ್ಲಿ ಅವರು ಅಡುಗೆ ಮಾಡುವಾಗ ಮೆಣಸಿನಕಾಯಿ ಮುಗಿದು ಹೋಗಿತ್ತು. ಹಿಮಾಚ್ಛಾದಿತ ಆ ಗಿರಿವಲಯದಲ್ಲಿ ಎಷ್ಟೇ ಪ್ರಯತ್ನಪಟ್ಟರೂ ಅದು ಸಿಗುವಂತಿರಲಿಲ್ಲ. ಈ ವಿಷಯವನ್ನು ತಿಳಿದ ಆಚಾರ್ಯರು ಕೆಲವು ಕಲ್ಲಿನ ಹರಳುಗಳನ್ನು ಆರಿಸಿ ತರುವಂತೆ ಶಿಷ್ಯರಿಗೆ ಸೂಚಿಸಿದರು. ಶಿಷ್ಯರು ಒಂದು ಪಾತ್ರೆಯ ತುಂಬಾ ಹರಳುಗಳನ್ನು ಹೆಕ್ಕಿ ತಂದರು. ಆಚಾರ್ಯರು ಅದನ್ನು ಮುಟ್ಟುತ್ತಿದ್ದಂತೆಯೇ ಏನಾಶ್ಚರ್ಯ ! ಕಲ್ಲಿನ ಹರಳುಗಳೆಲ್ಲವೂ ಮೆಣಸಿನ ಕಾಯಿಗಳಾಗಿ ಪರಿವರ್ತಿತಗೊಂಡವು. ಅಡುಗೆಯಾದ ಮೇಲೆ ಕೆಲವು ಮೆಣಸಿನಕಾಯಿಗಳು ಉಳಿದಿದ್ದವು. ನಾಳೆಗೆ ಒದಗಬಹುದೆಂದು ಭಾವಿಸಿ ಮಾತೋಶ್ರೀಯವರು ಅವುಗಳನ್ನು ಪಾತ್ರೆಯಲ್ಲಿ ಹಾಗೇ ತೆಗೆದಿಟ್ಟರು. ಮರುದಿನ ನೋಡಿದರೆ ಪಾತ್ರೆಯಲ್ಲಿದ್ದ ಮೆಣಸಿನ ಕಾಯಿಗಳು ಮತ್ತೆ ಕಲ್ಲಿನ ಹರಳುಗಳಾಗಿದ್ದವು.

## ದಿಕ್ಕು ತೋರಿದ ದರ್ಶನ

ಜಂಬುಖಂಡಿ ಆಚಾರ್ಯರು ಸಂಚಾರತ್ವೇನ ಮೈಸೂರಿಗೆ ಬಂದಿದ್ದಾಗ ವಿಶಿಷ್ಟ ಘಟನೆಯೊಂದು ನಡೆಯಿತು. ಆ ಸಂದರ್ಭದಲ್ಲಿ ಶ್ರೀಯುತ ಆರ್.ಬಿ. ವಿಜಯೀಂದ್ರರಾವ್ ಎನ್ನುವವರು ಮೈಸೂರು ಸರ್ಕಾರದ ಮುಖ್ಯ ಕಾರ್ಯದರ್ಶಿಯ ಉನ್ನತ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ವೈಷ್ಣವ ಕುಲೋತ್ಪನ್ನರಾದರೂ ವಿಜಯೀಂದ್ರರಾಯರು ಆಚಾರಶೀಲರಾಗಿರಲಿಲ್ಲ. ಅಧಿಕಾರದ ಅಮಲು, ದುಷ್ಟಜನರ ಸಹವಾಸ, ಸಿರಿತನ ಮತ್ತು ತಾರುಣ್ಯದ ಮದ ಅವರನ್ನು ಹಾದಿ ತಪ್ಪಿಸಿದ್ದವು. ಇದರೊಂದಿಗೆ ಪಾಶ್ಚಾತ್ಯರ ಅನುಕರಣೆಯೂ ಸೇರಿ ಹಲವಾರು ದುರಭ್ಯಾಸಗಳ ದಾಸರೇ ಆದರು. ಸತ್ಕುಲಸಂಜಾತರಾಗಿದ್ದರಿಂದ

ರಾಯರಿಗೆ ಒಮ್ಮೊಮ್ಮೆ ತಮ್ಮ ದುಷ್ಟ ಚಟಗಳನ್ನು ಕಂಡು ಹೇಸಿಗೆಯುಂಟಾಗುತ್ತಿತ್ತು. ಆದರೂ ಅಭ್ಯಾಸ ಬಲ ಅವರನ್ನು ದುರ್ಮಾರ್ಗದಲ್ಲಿಯೇ ಮುಂದುವರೆಯುವಂತೆ ಮಾಡಿತ್ತು. ಹೀಗಿದ್ದಾಗ ರಾಯರು ತಮ್ಮ ಮನೆಯ ಉಪ್ಪರಿಗೆಯ ಮೇಲೆ ಒಮ್ಮೆ ನಿಂತಿದ್ದರು. ಆಗ ಅವರ ಭಾಗ್ಯೋದಯದ ಬಾಗಿಲು ತೆರೆದಂತೆ ಜಂಬುಖಂಡಿ ಆಚಾರ್ಯರು ರಾಯರ ಮನೆಯ ಮುಂದೆ ಬೀದಿಯಲ್ಲಿ ಶಿಷ್ಯವೃಂದದೊಂದಿಗೆ ನಡೆದುಕೊಂಡು ಬರುತ್ತಿದ್ದರು. ಅಂಗಾರಾಕ್ಷತೆ ಮುಂತಾದ ವೀರವೈಷ್ಣವ ದೀಕ್ಷೆಯಿಂದ ಕಂಗೊಳಿಸುತ್ತಿದ್ದ ಆಚಾರ್ಯರ ತೇಜಃಪುಂಜವಾದ ಮುಖಮಂಡಲ; ನೋಡಿದವರ ಅಂತರಾಳವನ್ನು ಕ್ಷಣಾರ್ಧದಲ್ಲಿ ಶೋಧಿಸಿ ಅಳೆಯಬಲ್ಲ ಪ್ರಖರ ಕಣ್ಣುಗಳು, ಮುದ ನೀಡುವ ಮಂದಹಾಸ, ಎಂತಹವರ ಮನಸ್ಸನ್ನೂ ಸೆಳೆಯುವ ಅಜಾನುಬಾಹು ನಿಲುವು ಮುಂತಾದವುಗಳು ರಾಯರನ್ನು ಆಕರ್ಷಿಸಿ ಅವರನ್ನು ಮತ್ತೆ ಮತ್ತೆ ನೋಡುವಂತೆ ಮಾಡಿದ್ದವು. ಕಾಕತಾಳೀಯವೆಂಬಂತೆ ಆಚಾರ್ಯರ ದೃಷ್ಟಿಯೂ ರಾಯರ ಮೇಲೆ ಬಿದ್ದಿತು. ರಾಯರ ಹೃದಯದಲ್ಲಿ ಒಮ್ಮೆಗೇ ನೂರಾರು ಮಿಂಚುಗಳು ಮಿಂಚಿದ ಅನುಭವವಾಗಿ ಅವರು ತತ್ತರಿಸಿ ಹೋದರು! ಅವರ ಅಂತರಾಳದಲ್ಲಿ ಕಂಡರಿಯದ ಸಾತ್ವಿಕಭಾವದ ಬುಗ್ಗೆಯೊಂದು ಚಿಮ್ಮಿ ವಿಚಿತ್ರ ಅನುಭವವುಂಟಾಯಿತು. ಇಷ್ಟು ದಿವಸಗಳ ಕಾಲ ತಾವು ನಡೆಸಿದ ದುಷ್ಟ ಬಾಳುವೆಯ ಬಗ್ಗೆ ಅವರಿಗೆ ತೀವ್ರ ಪಶ್ಚಾತ್ತಾಪವುಂಟಾಗಿ ಕಣ್ಣಾಲಿಗಳಲ್ಲಿ ನೀರು ತುಂಬಿದವು. ಆಚಾರ್ಯರ ದರ್ಶನ ಮಾತ್ರದಿಂದಲೇ ರಾಯರಿಗೆ ತಮ್ಮ ಬದುಕಿನ ಹೊಸದಿಕ್ಕು ಗೋಚರಿಸಿತು. ಕೂಡಲೇ ರಾಯರು ಉಪ್ಪರಿಗೆಯಿಂದಿಳಿದು ಬಂದು ಆಚಾರ್ಯರಿಗೆ ರಸ್ತೆಯಲ್ಲಿಯೇ ದೀರ್ಘದಂಡ ಪ್ರಣಾಮ ಮಾಡಿದರು. ಕಂಬನಿಯಿಂದಲೇ ಅವರ ಕಾಲುಗಳನ್ನು ತೊಳೆದಂತಾಯಿತು. ರಾಯರ ಮನಸ್ಸಿನಲ್ಲಿದ್ದ ಎಲ್ಲಾ ಕಲ್ಮಶವೂ ಮಹಾತ್ಮರ ದರ್ಶನ ಹಾಗೂ ಪಾದಸ್ಪರ್ಶದಿಂದ ತೊಳೆದುಹೋಯಿತು. ರಾಯರು ಆಚಾರ್ಯರನ್ನು ತಮ್ಮ ಮನೆಗೆ ಸ್ವಾಗತಿಸಿದರಲ್ಲದೆ ತಮ್ಮ ವೃತ್ತಾಂತವನ್ನೆಲ್ಲಾ ಸಾದ್ಯಂತವಾಗಿ ನಿವೇದಿಸಿಕೊಂಡು ಕೃಪೆಯಿಟ್ಟು ಉದ್ಧರಿಸಬೇಕೆಂದು ಪ್ರಾರ್ಥಿಸಿದರು.

ಪಶ್ಚಾತ್ತಾಪದಿಂದ ಪರಿಶುದ್ಧರಾಗಿರುವ ರಾಯರನ್ನು ಸಚ್ಚೇತನರೆಂದು ತಮ್ಮ ದಿವ್ಯದೃಷ್ಟಿಯಿಂದ ಅರಿತ ಆಚಾರ್ಯರು ಅವರನ್ನು ಕ್ಷಮಿಸಿ, ಸನ್ಮಾರ್ಗದರ್ಶನ ಮಾಡಿದರು. ರಾಯರ ಪ್ರಾರ್ಥನೆಯಂತೆ ಅಂದು ಅವರ ಮನೆಯಲ್ಲಿಯೇ ದೇವತಾರ್ಚನೆಯನ್ನು ನೆರವೇರಿಸಿ ಪರಮಾನುಗ್ರಹ ಮಾಡಿದರು. ಅಂದಿನಿಂದ ರಾಯರು ತಮ್ಮ ಎಲ್ಲಾ ದುಶ್ಚಟಗಳನ್ನು ತ್ಯಜಿಸಿ ಹೊಸ ಮನುಷ್ಯರಾದರು. ಸಾಧನಾಪರರಾಗಿ ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಂಡರಲ್ಲದೇ ಆಚಾರ್ಯರ ಅಚ್ಚಿನ್ನ ಭಕ್ತರಾಗಿ ಅವರ ಜೀವಿತದ ಕಡೆಯವರೆಗೂ ಗುರುಗಳನ್ನು ಸೇವಿಸಿದರು. ಆಚಾರ್ಯರು ತಮ್ಮ ಜೀವನದ ಘಟನೆಗಳನ್ನು ಕುರಿತು ದಾಖಲಿಸಿರುವ "An Exposition" ನಲ್ಲಿ "My disciple R.B. Vejandrarao (Chief Secy, to the Mysore Government), came of his own accord to give evidence on my behalf and proved to the satisfaction of every body" ಎಂದೆಲ್ಲಾ ಹೇಳಿಕೊಂಡಿರುವುದನ್ನು ನೋಡಿದರೆ ರಾಯರು ಆಚಾರ್ಯರಿಗೆ 'ರಾಜರ ಋಜುತ್ವ ಪ್ರತಿಪಾದನೆ' ಯಲ್ಲಿ ಎದುರಾದ ಹಲವಾರು ಕಾನೂನು ಸಂಬಂಧ ತೊಡಕುಗಳನ್ನು ನಿವಾರಿಸಲು ಸಹಕರಿಸಿದಂತೆ ತೋರುತ್ತದೆ.

'ರಾಜಾನೋ ರಾಜಪುರುಷಾ ಬಹುಮಾನರತಾಃಸದಾ' ಎಂಬ ಶ್ರೀಸುಧಾಕರಗುರುಗುಣರತ್ನಮಾಲಾಕಾರರ ವಚನದಂತೆ ಜಂಬುಖಂಡಿ ಆಚಾರ್ಯರ ಪ್ರಭಾವಪೂರ್ಣವಾದ ವ್ಯಕ್ತಿತ್ವಕ್ಕೆ ವಶವಾಗಿ ಅನೇಕ ರಾಜ, ಮಹಾರಾಜರು ಅವರನ್ನು ಸತ್ಕರಿಸಿ, ಸನ್ಮಾನಿಸುತ್ತಿದ್ದರು. ಒಮ್ಮೆ ಅವರು ಮೈಸೂರಿಗೆ ಬಂದಿದ್ದಾಗ ಅವರ ಕೀರ್ತಿಯನ್ನು ಕೇಳಿದ್ದ ಮೈಸೂರು ಮಹಾರಾಜರು ಆಚಾರ್ಯರನ್ನು ಸತ್ಕರಿಸಿ ಕನಕಾಭಿಷೇಕವನ್ನು ಮಾಡಿದರಂತೆ. ಈ ವಿಷಯವಾಗಿ ಡಾ. ನಿಪ್ಪಾಣಿ ಗುರುರಾಜಾಚಾರ್ಯರು ಸ್ವಾರಸ್ಯಕರ ವೃತ್ತಾಂತವೊಂದನ್ನು ತಾವು ಸಂಪಾದಿಸಿದ 'ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಮಹಾತ್ಮ್ಯೆ'ಯ ಅಡಿ ಟಿಪ್ಪಣಿಯಲ್ಲಿ ಹೀಗೆ ಸಾದರ ಪಡಿಸುತ್ತಾರೆ : "ಆಚಾರ್ಯರು ಸಂಚಾರಕ್ರಮೇಣ ಮೈಸೂರಿಗೆ ಬಂದರು. ಆಗಿನ ಮೈಸೂರು ಮಹಾರಾಜರು ಇವರ ಮಹತ್ವವನ್ನು ಕೇಳಿ ಆಗಲೇ

ತಿಳಿದವರು. ಆಚಾರ್ಯರಿಗೆ ಕನಕಾಭಿಷೇಕವನ್ನು ಮಾಡುವ ಮನಸ್ಸಾಯಿತು. ಅವರಿಗೆ ಆದರದ ಆಮಂತ್ರಣ ಕೊಟ್ಟಾಯಿತು. ರಾಜನ ಯೋಗ್ಯತೆ ಮತ್ತು ಮನಸ್ಸು ಒಳ್ಳೆಯದೇ ಇದ್ದುದರಿಂದ ಆಮಂತ್ರಣಕ್ಕೆ ಸಮ್ಮತಿಸಿದರು. ವೈಭವದಿಂದ ಕನಕಾಭಿಷೇಕವನ್ನು ಮಾಡಿ ಕೃತಾರ್ಥ ರಾದರು ರಾಜರು. ಆಚಾರ್ಯರು ಬಂದುದೆಲ್ಲವನ್ನೂ ಶಿಷ್ಯರಿಗೆ ಮತ್ತು ಅಲ್ಲಿರುವ ಸದ್ಬ್ರಾಹ್ಮಣರಿಗೆ ದಾನ ಮಾಡಿಬಿಟ್ಟರು. ಆದರೂ ಅಷ್ಟರಲ್ಲಿಯೇ ಶಿಷ್ಯನೊಬ್ಬ ಕೆಲವು ಸುವರ್ಣ ನಾಣ್ಯಗಳನ್ನು ದೇವರ ಪೆಟ್ಟಿಗೆಯಲ್ಲಿ ಹಾಕಿದ್ದ. ಮಾರ್ಗ ಮಧ್ಯದಲ್ಲಿ ಪೆಟ್ಟಿಗೆ ಕಳುವಾಯಿತು. ಶಿಷ್ಯನ ವಿಚಾರ ತಿಳಿಯಿತು. ನೇರವಾಗಿ ಹತ್ತಿ ಬೆಳಗಲ್ಲಿಗೆ ಬಂದರು. ಅಲ್ಲಿಯ ಜ್ಞಾನಿಗಳಾದ ಶ್ರೀನರಸಿಂಹಾಚಾರ್ಯರಿಗೆ ವಿಷಯವನ್ನು ಅರುಹಿದರು. ಅಜ್ಞಾತ ವಾದರೂ ವಿಷಯಗಳು ಪರೋಕ್ಷವಾಗಿ ಪ್ರಭಾವವನ್ನು ಬೀರುತ್ತವೆ. ಹೋದುದೆಲ್ಲವೂ ಕೃಷ್ಣಾರ್ಪಣವೆಂದರು. ಹೃದಯದಲ್ಲಿಯೇ ಹರಿಯನ್ನು ಧ್ಯಾನಿಸಿ ಕಾಂಬುವವರಿಗೆ ಪೆಟ್ಟಿಗೆಯು ಹೋದದ್ದು ಕ್ಲೇಶ ಒಡ್ಡಲಿಲ್ಲ. ಶಿಷ್ಯನ ಪ್ರಮಾದವಿದ್ದರೂ ತಮಗೆ ಸಂಬಂಧಪಟ್ಟಂತೆ ಅದರ ಪರಿಹಾರಕ್ಕಾಗಿ ಶ್ರೀಮದ್ಭಾಗವತವನ್ನು ಪೂರ್ಣವಾಗಿ ಪಠಿಸಿ ಶ್ರೀಹರಿಗರ್ಪಿಸಿದರು. ಆಚಾರ್ಯರು ಸುವರ್ಣವನ್ನು ಇಟ್ಟುಕೊಳ್ಳಬಹುದಾಗಿತ್ತು. ಆದರೆ, ಈ ಸ್ವೊತ್ತು ಅಭಿಮಾನವನ್ನು ಹುಟ್ಟಿಸಿ ಕ್ರಮೇಣ ಕಾಮಾದಿ ಷಡ್ವೈರಿಗಳಿಗೆ ಆಸ್ಪದ ಕೊಡುತ್ತದೆ ಎಂದು ಬಗೆದು ದಾನ ಮಾಡಿದರು".

## ಗಜವನ್ನು ಗುದ್ದಿದ ಗಟ್ಟಿಗ

ಆಚಾರ್ಯರ ಧೀಶಕ್ತಿ ಹಾಗೂ ದೀಕ್ಷೆ ಎಷ್ಟು ಪ್ರಖರವೋ ಅವರ ಶಾರೀರಿಕ ಸಾಮರ್ಥ್ಯವೂ ಸಹ ಅದಕ್ಕೆ ಪೂರಕವಾಗಿದ್ದಿತು. ಇದಕ್ಕೆ ಉದಾಹರಣೆಯಾಗಿ ಕ್ರಿ.ಶ. 1863ರಲ್ಲಿ ಕೊಯಮತ್ತೂರಿನಲ್ಲಿ ನಡೆದ ಪುಟ್ಟದಾದರೂ ರೋಮಾಂಚಕರ ಘಟನೆಯೊಂದರನ್ನು ಉಲ್ಲೇಖಿಸ ಬಹುದು. ಆಗ ಆಚಾರ್ಯರಿಗೆ ಇಪ್ಪತ್ತೊಂದರ ತಾರುಣ್ಯ. ವೃಂದಾವನಾ ಚಾರ್ಯರೆಂದು ಪ್ರಸಿದ್ಧರಾದ ಸೋದಾ ಮಠಾಧಿಪತಿ ಶ್ರೀವಿಶ್ವಪ್ರಿಯ

ತೀರ್ಥರಿಗೆ ವೃದ್ಧಾಪ್ಯ. ಶ್ರೀಗಳವರು ಕೊಚ್ಚಿ ಮೊದಲಾದ ದಕ್ಷಿಣ ಪ್ರಾಂತದಲ್ಲಿ ದಿಗ್ವಿಜಯ ಯಾತ್ರೆ ಕೈಗೊಂಡು ದ್ವೈತದುಂದುಭಿಯನ್ನು ಮೊಳಗಿಸಿ ಮರಳಿ ಬರುವಾಗ ಕೊಚ್ಚಿ ರಂಗಪ್ಪಾಚಾರ್ಯರ[1] ಪ್ರಾರ್ಥನೆಯನ್ನು ಮನ್ನಿಸಿ ಕೊಯಮತ್ತೂರಿಗೆ ಭೇಟಿಯಿತ್ತರು. ಆಗ ಶ್ರೀಗಳವರ ಜೊತೆಗೆ ಅವರ ಶಿಷ್ಯವೃಂದದೊಡನೆ ಯುವಕರಾದ ಆಚಾರ್ಯರೂ ಇದ್ದರು. ಕೊಚ್ಚಿ ರಂಗಪ್ಪಾಚಾರ್ಯರ ಮನೆಯಲ್ಲಿಯೇ ಇಳಿದುಕೊಂಡಿದ್ದ ಶ್ರೀಗಳವರು ಕೆಲವು ದಿವಸಗಳ ಕಾಲ ಕೊಯಮತ್ತೂರಿನಲ್ಲಿ ತಂಗಿದ್ದು ತಮ್ಮ ಉಪದೇಶಾಮೃತದಿಂದ ಸಜ್ಜನ ವೃಂದವನ್ನು ಸಂತೋಷಪಡಿಸುತ್ತಿದ್ದರು.

ಹೀಗಿದ್ದಾಗ ಒಮ್ಮೆ ನಗರದ ರಾಜಬೀದಿಯಲ್ಲಿದ್ದ ಸಭಾಂಗಣದಲ್ಲಿ ಶ್ರೀಗಳವರ ಪ್ರವಚನ ಕಾರ್ಯಕ್ರಮ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ಶ್ರೀಸತ್ಯಪರಾಯಣತೀರ್ಥರೂ ಸಹ ಕೊಯಮತ್ತೂರಿಗೆ ಬಂದಿದ್ದು, ಭಕ್ತಾದಿಗಳಿಂದ ಅವರನ್ನು ಆನೆಯ ಮೇಲೆ ಕೂಡಿಸಿ ಮೆರವಣಿಗೆಯಲ್ಲಿ ಪುರಪ್ರವೇಶ ಮಾಡಿಸುವ ಏರ್ಪಾಟಾಯಿತು. ಮೆರವಣಿಗೆ ರಾಜಬೀದಿಯ ಮಾರ್ಗವಾಗಿ ಬಂದಾಗ ಕೆಲವರು ಶ್ರೀಗಳವರಿಗೆ 'ಜ್ಞಾನವೃದ್ಧರೂ ವಯೋವೃದ್ಧರೂ ಆದ ವಿಶ್ವಪ್ರಿಯತೀರ್ಥರು ಇಲ್ಲಿಯೇ ಬಿಡಾರ ಮಾಡಿದ್ದು ಸಚ್ಛಾಸ್ತ್ರ ಪ್ರವಚನ ಮಾಡುತ್ತಿದ್ದಾರೆ' ಎಂದು ಬಿನ್ನೈಸಿದರು. ಪ್ರಾಜ್ಞರೂ, ಗುಣಗ್ರಾಹಿಗಳೂ ಆದ ಶ್ರೀಗಳವರಿಗೆ ಆನೆಯ ಮೇಲಿಂದ

---

1. "My own great grandfather Cochi Rangappacharya was Raja-Guru and Chief Asthana pandita of the former Cochin State and a Vidyashishya of Sri Vishwapriya Tirtha himself and was always with him during his Guru's frequent visits to Cochin state whose rulers at the time had been converted to the Madhwa-Sampradaya at the time of Vishwapriya's own Guru. Needless to say that Sri Vishwapriya Tirtha actually stayed in our house in Raja Street (Coimbatore) during some of his visits to this part of the country.

**- Dr. B.N.K. Sharma**

('ಶ್ರೀಜಂಬುಖಂಡಿವಾದಿರಾಜಾಚಾರ್ಯರ ಮಹಾತ್ಮ್ಯೆ'ಯ ಮುನ್ನುಡಿಯಲ್ಲಿ)

ಇಳಿದು ಸ್ವಲ್ಪದೂರ ನಡೆದು ಹೋಗಬೇಕೆಂಬ ಅಪೇಕ್ಷೆ ಇದ್ದಿತು. ಆದರೆ ಮೆರವಣಿಗೆಯನ್ನು ಸಂಯೋಜಿಸಿದ್ದ ಕೆಲವು ವ್ಯವಸ್ಥಾಪಕರು ಇದಕ್ಕೆ ಅವಕಾಶ ಕೊಡಲಿಲ್ಲ. 'ಆನೆಯ ಮೇಲಿನಿಂದ ಇಳಿದರೆ ನಮ್ಮ ಪ್ರತಿಷ್ಠೆಗೆ ಕುಂದು' ಎಂಬಂತೆ ಅವರು ಹಠ ಸಾಧಿಸಿದರು. ಆಗ ಅಲ್ಲಿಯೇ ಇದ್ದ ಜಂಬುಖಂಡಿ ವಾದಿರಾಜಾಚಾರ್ಯರಿಗೆ ಆ ವ್ಯವಸ್ಥಾಪಕರ ದುರಾಗ್ರಹ ಸರಿಯೆನ್ನಿಸಲಿಲ್ಲ. ಅವರು ಎಷ್ಟು ಹೇಳಿದರೂ ಕೇಳದಿದ್ದಾಗ ಆಚಾರ್ಯ ರಿಗೆ ಏನು ತೋರಿತೋ, ಭೂತರಾಜರೇ ಅವರಲ್ಲಿ ಆವಿಷ್ಟರಾದರೋ ಎಂಬಂತೆ ರೋಷದಿಂದ ತಮ್ಮ ಮುಷ್ಟಿಯಿಂದ ಆನೆಗೆ ಒಂದು ಗುದ್ದಿದರು. ಆನೆಯನ್ನು ಮಣಿಸುವ ಶಕ್ತಿಯಿರುವುದು ಸಿಂಹಕ್ಕೆ ತಾನೆ! ಜಂಬುಖಂಡಿ ಎಂಬ ಸಿಂಹದ ವಜ್ರಸದೃಶ ಮುಷ್ಟಿ ಪ್ರಹಾರಕ್ಕೆ ತತ್ತರಿಸಿದ ಆನೆ ಘೀಳಿಡತೊಡಗಿತು. ಆಗ ಹೆದರಿದ ವ್ಯವಸ್ಥಾಪಕರು ಅನಿವಾರ್ಯವಾಗಿ ಶ್ರೀಗಳವರನ್ನು ಕೆಳಗಿಳಿಸಬೇಕಾಯಿತು. ಶ್ರೀಗಳವರು ಕೆಳಗಿಳಿದು ಹಸನ್ಮುಖರಾಗಿ ನಡೆದುಕೊಂಡೇ ಹೋದರು.

"ಭಾವಿಪ್ರಾಣಪದಾಬ್ಜಧೂಲ್ಯರಿಮಹಾಮತ್ತೇಭಗಂಡಸ್ಥಲೀ–
ಮೂಲೋತ್ಪಾಟನಪಂಚವಕ್ತ್ರಸದೃಶೋ ಭೂಯಾದ್ಗುರುರ್ಭೂತಯೇ"

"ಋಜುಮಹಿಮೆಗಳನ್ನು ಗೌರವಿಸದ ಮದ್ದಾನೆಗಳ ಕುಂಭ ಸ್ಥಳವನ್ನು ಸೀಳುವ ಸಿಂಹವೇ ಜಂಬುಖಂಡಿ ಆಚಾರ್ಯರು" ಎಂಬ ಶ್ರೀಸುಧಾಕರ ಗುರುಗುಣರತ್ನಮಾಲಾಕಾರರ ಈ ಘೋಷಣೆ ಎಷ್ಟು ಸತ್ಯವಲ್ಲವೇ!

ಆಚಾರ್ಯರು ಗಜವನ್ನು ಗುದ್ದಿದ ಗಟ್ಟಿಗರಾದರೂ ಗಡಿಯಾರ ದಂತಹ ಸೂಕ್ಷ್ಮ ಯಂತ್ರವನ್ನು ನಿಯಂತ್ರಿಸುವ ಶಕ್ತಿಯೂ ಅವರಲ್ಲಿದ್ದಿ ತೆಂಬುದಕ್ಕೆ ಒಂದು ಪುಟ್ಟ ಪ್ರಸಂಗ : ಒಂದು ಬಾರಿ ಆಚಾರ್ಯರು ರೈಲಿನ ಟಿಕೆಟ್ಟನ್ನು ಖರೀದಿಸಲು ನಿಂತಿದ್ದಾಗ ನೂಕು ನುಗ್ಗಲು ಉಂಟಾಯಿತು. ಕೆಲವರು ಆಚಾರ್ಯರನ್ನು ಒತ್ತರಿಸಲು ನೋಡಿದರು. ಆದರೆ ಆಚಾರ್ಯರು ತಮ್ಮ ಕೈಯ್ಯನ್ನು ತಡೆಯಾಗಿ ಒಡ್ಡಿದ್ದರಿಂದ ಎಲ್ಲರೂ ಆಯತಪ್ಪಿ ಬೀಳುವಂತಾಯಿತು. ಆಗ ಕೆಳಗೆ ಬಿದ್ದ ಒಬ್ಬನ ಗಡಿಯಾರ ಮುರಿದು ಹೋಯಿತು. ಆತ ಕೋಪದಿಂದ ಆಚಾರ್ಯರ ಮೇಲೆ

ಜಗಳಕ್ಕೇ ಬಂದ. ಕೆಟ್ಟು ಹೋದ ಗಡಿಯಾರಕ್ಕೆ ಪರಿಹಾರ ಕೊಡುವಂತೆ ಜೋರು ಮಾಡಿದ. ಆಗ ಆಚಾರ್ಯರು ಮರು ಮಾತನಾಡದೆ ಕೆಟ್ಟು ಹೋದ ಅವನ ಗಡಿಯಾರವನ್ನು ಪಡೆದು ತಮ್ಮ ಕೈಯ್ಯಲ್ಲಿ ಕ್ಷಣಕಾಲ ಹಿಡಿದುಕೊಂಡರು. ಏನಾಶ್ಚರ್ಯ! ಆಚಾರ್ಯರ ಸ್ಪರ್ಶಮಾತ್ರದಿಂದ ನಿಂತು ಹೋಗಿದ್ದ ಗಡಿಯಾರದ ಮುಳ್ಳು ಮತ್ತೆ ಚಲಿಸಲಾರಂಭಿಸಿತು. ಮತ್ತೆ ಮೊದಲಿನಂತಾದ ಗಡಿಯಾರವನ್ನು ಅವನಿಗೆ ಕೊಟ್ಟರು. ಜಗಳಕ್ಕೆ ಬಂದಿದ್ದ ವ್ಯಕ್ತಿ ನಗುಮುಖದಿಂದ ಆಚಾರ್ಯರಿಗೆ ವಂದನೆಗಳನ್ನು ಸಲ್ಲಿಸಿ ಸ್ನೇಹಿತನಾದ.

ಇದೇ ತರಹ ಉಡುಪಿಯಲ್ಲಿ ನಡೆದ ಮತ್ತೊಂದು ಸಣ್ಣ ಘಟನೆ. ಆದರೆ ಬೀರಿದ ಪರಿಣಾಮ ಮಾತ್ರ ದೊಡ್ಡದು. ರೌಪ್ಯಪೀಠಾಧಿಪನನ್ನು ಮತ್ತು ತಮ್ಮ ವಿದ್ಯಾಗುರುಗಳಾದ ಶ್ರೀವಿದ್ಯಾಧೀಶರನ್ನು ಸಂದರ್ಶಿಸಲು ಆಚಾರ್ಯರು ಆಗಾಗ ಉಡುಪಿಗೆ ಭೇಟಿ ನೀಡುತ್ತಿದ್ದರಷ್ಟೇ. ಒಂದು ಸಲ ಆಚಾರ್ಯರು ಉಡುಪಿಗೆ ಹೋಗಿದ್ದರು. ಆಗ ಸಂಕ್ರಮಣವಾದ್ದರಿಂದ ರಥೋತ್ಸವದ ಸಂದರ್ಭದಲ್ಲಿ ವಿಶೇಷ ಜನಸಂದಣಿಯಿತ್ತು. ಜನರ ಉತ್ಸಾಹ ಮೇರೆ ಮೀರಿತ್ತು. ಹಲವಾರು ಜಾನಪದ ತಂಡಗಳ ನೃತ್ಯ, ಸಿಡಿಮದ್ದುಗಳ ಸಿಡಿತ, ಜನರ ಜಯಘೋಷ ಮೆರವಣಿಗೆ ವಿಶೇಷ ಕಳೆಯನ್ನೇ ಉಂಟುಮಾಡಿದ್ದವು. ಪರ್ಯಾಯ ಪೀಠಾಧಿಪತಿಗಳ ನೇತೃತ್ವದಲ್ಲಿ ರಥೋತ್ಸವಕ್ಕೆ ಚಾಲನೆ ದೊರಕಿತು. ಆಚಾರ್ಯರು ಉತ್ಸಾಹದಿಂದ ರಥೋತ್ಸವದ ಮೆರವಣಿಗೆಯಲ್ಲಿ ಪಾಲ್ಗೊಂಡು, ಪಾರಾಯಣ ಮಾಡುತ್ತಾ ಸಾಗಿದರು. ಆಗ ತಾಂಬೂಲವನ್ನು ಹಾಕಿಕೊಂಡಿದ್ದ ದಕ್ಷಿಣ ಕನ್ನಡ ಜಿಲ್ಲೆಯ ವಿಪ್ರರೊಬ್ಬರು ಆಚಾರ್ಯರ ಪಕ್ಕದಲ್ಲಿಯೇ ಬರುತ್ತಿದ್ದರು. ಬಾಯಲ್ಲಿ ತಾಂಬೂಲವಿದ್ದರೂ ಅವರು ವಾಯು ಸ್ತುತಿಯನ್ನು ರಾಗಬದ್ಧವಾಗಿ ಪಠಿಸುತ್ತಿದ್ದರು. ಒಮ್ಮೊಮ್ಮೆ ಅವರ ಮುಖದಿಂದ ತಾಂಬೂಲದ ಎಂಜಲು ಹನಿಗಳು ಆಚಾರ್ಯರ ಮೇಲೆ ಬೀಳುತ್ತಿದ್ದವು. ಇದನ್ನು ಗಮನಿಸಿದ ಆತ ಸಂಕೋಚದಿಂದ ಹಿಂದೆ ಸರಿದನಲ್ಲದೆ, ಎಂಜಲು ಸಿಡಿಸಿದ್ದಕ್ಕೆ ಆಚಾರ್ಯರ ಕ್ಷಮೆ ಯಾಚಿಸಿದ.

ಆದರೆ ಆಚಾರ್ಯರು ಮಾತ್ರ ಅವನ ಮೇಲೆ ಒಂದಿಷ್ಟೂ ಕೋಪಗೊಳ್ಳದೆ 'ವಾಯುಸ್ತುತಿಯ ಪಠಣದಿಂದ ಹೊರಬರುತ್ತಿರುವುದು ಅಮೃತ ಸೇಚನವೇ ಹೊರತು ಎಂಜಲಲ್ಲ' ಎಂದು ಹಸನ್ಮುಖರಾಗಿ ಉತ್ತರಿಸಿದರು. ಈ ಮಾತುಗಳು ಆ ವಿಪ್ರನ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಆತ ಆಚಾರ್ಯರ ಕರಗಳನ್ನು ಹಿಡಿದು "ತಮ್ಮಿಂದ ಇಂದು ನನಗೆ ಜ್ಞಾನೋದಯವಾಯಿತು. ಇನ್ನು ಮುಂದೆ ನಾನು ಎಲೆ ಅಡಿಕೆಯನ್ನು ಹಾಕುವುದಿಲ್ಲ" ಎಂಬ ದೃಢ ಪ್ರತಿಜ್ಞೆಯನ್ನೇ ಅವನು ಮಾಡಿ ಆಚಾರ್ಯರಿಗೆ ನಮಸ್ಕರಿಸಿದ. ಆಗ ಆಚಾರ್ಯರು 'ಇದರಲ್ಲಿ ನನ್ನ ಹೆಗ್ಗಳಿಕೆ ಏನಿಲ್ಲ. ಇದೆಲ್ಲವೂ ಪರಮ ಪವಿತ್ರವಾದ ಹರಿವಾಯುಸ್ತುತಿಯ ಮಹಿಮೆ' ಎಂದು ಅವನನ್ನು ಸಂತೈಸಿ ಆಶೀರ್ವದಿಸಿದರು.

ಹೀಗೆ ಉಡುಪಿಗೆ ಬಂದಾಗಲೆಲ್ಲಾ ಆಚಾರ್ಯರು ತಮ್ಮ ಆಪ್ತಮಿತ್ರರೂ, ವಾದಿರಾಜರ ನಿಸ್ಸೀಮಭಕ್ತರೂ ಆದ ಶ್ರೀಅಣ್ಣೈಯ್ಯಾಚಾರ್ಯರನ್ನು ಭೇಟಿಯಾಗಲು ಉದ್ಯಾವರವೆಂಬ[1] ಪುಟ್ಟ ಹಳ್ಳಿಗೆ ಹೋಗುತ್ತಿದ್ದರು. ಇಬ್ಬರು ಜ್ಞಾನಿಗಳೂ ಸಂಧಿಸಿದಾಗ ಹಲವಾರು ಅಧ್ಯಾತ್ಮಿಕ ಗೂಢ ತತ್ತ್ವಗಳನ್ನು ಚಿಂತಿಸುತ್ತಾ ಬಹು ಹೊತ್ತು ಕಳೆಯುತ್ತಿದ್ದರು. ಅಣ್ಣೈಯ್ಯಾಚಾರ್ಯರು ಅಲ್ಲಿನ ಸುತ್ತಮುತ್ತಲೂ ಪ್ರಖ್ಯಾತರಾಗಿದ್ದ ಕಾರಣ ಆ ಸ್ಥಳಕ್ಕೆ 'ಅಣ್ಣೈಯ್ಯಾಚಾರ್ಯರ ಮಠ' ಎಂಬ ಹೆಸರು ಈಗಲೂ ಇದೆ. ಒಮ್ಮೆ ಉದ್ಯಾವರಕ್ಕೆ ಆಚಾರ್ಯರು ಬಂದಿದ್ದಾಗ ನಡೆದ ಪ್ರಸಂಗ. ಆಚಾರ್ಯರು ಅಣ್ಣೈಯ್ಯಾಚಾರ್ಯರ ಮಠವನ್ನು ಪ್ರವೇಶಿಸುತ್ತಿದ್ದಾಗ ಅಲ್ಲಿ ಮಠದ ಜೀರ್ಣೋದ್ಧಾರದ ಕೆಲಸ ಭರದಿಂದ ಸಾಗಿತ್ತು. ಮೂಲ

---

1. ಉದ್ಯಾವರದಲ್ಲಿ ಶ್ರೀವೃಂದಾವನಾಚಾರ್ಯರ ಸನ್ಯಾಸಿ ಶಿಷ್ಯರಾಗಿದ್ದ ಶ್ರೀವರಾಹ ತೀರ್ಥರಿಂದ ಸ್ಥಾಪಿತಗೊಂಡಿರುವ ಮಠವಲ್ಲದೇ, ಶ್ರೀಸೋದಾ ಮಠಾಧೀಶರಾಗಿದ್ದ ಶ್ರೀವಿಶ್ವೇಂದ್ರ ತೀರ್ಥರ ಮೂಲವೃಂದಾವನವೂ ಇದೆ. ಈ ಪವಿತ್ರ ಗ್ರಾಮವೇ ಇತ್ತೀಚೆಗಷ್ಟೇ ಹರಿಪದವನ್ನೈದಿದ ಸೋದಾಮಠದ ಯತಿಶ್ರೇಷ್ಠ ಶ್ರೀವಿಶ್ವೋತ್ತಮ ತೀರ್ಥರ ಜನ್ಮ ಸ್ಥಳವೆಂಬುದು ಸಹ ಗಮನಾರ್ಹ.

ದ್ವಾರಕ್ಕೆ ದೊಡ್ಡ ಚೌಕಟ್ಟನ್ನು ಕೂಡಿಸುವ ಕಾರ್ಯದಲ್ಲಿ ಹಲವಾರು ಜನರು ಮಗ್ನರಾಗಿದ್ದರು. ಆದರೆ ಅವರು ಎಷ್ಟು ಪ್ರಯತ್ನಪಟ್ಟರೂ ತುಂಬಾ ಭಾರವಾಗಿದ್ದ ಆ ಮರದ ಚೌಕಟ್ಟನ್ನು ಅವರಿಂದ ಜರುಗಿಸಲೂ ಆಗುತ್ತಿರಲಿಲ್ಲ. ಇದನ್ನು ಗಮನಿಸುತ್ತಿದ್ದ ಆಚಾರ್ಯರು ಕೂಡಲೇ ಮುಂದೆ ಬಂದು, ಆ ಜನರನ್ನೆಲ್ಲಾ ಹಿಂದೆ ಸರಿಯುವಂತೆ ಹೇಳಿ, ತಾವೊಬ್ಬರೇ ಆ ಗಜಗಾತ್ರದ ಚೌಕಟ್ಟನ್ನು ಅನಾಯಾಸವಾಗಿ ಎತ್ತಿಟ್ಟು ಸರಿಯಾದ ಸ್ಥಳದಲ್ಲಿ ಕೂಡಿಸಿದರು. ಇದನ್ನು ನೋಡಿ ಅಲ್ಲಿರುವವರಿಗಾದ ವಿಸ್ಮಯ ಅಷ್ಟಿಷ್ಟಲ್ಲ. ಆದರೆ ಹರಿವಾಯುಗಳ ವಿಶೇಷಾನುಗ್ರಹಕ್ಕೆ ಪಾತ್ರರಾದ ಯೋಗಸಿದ್ಧರಿಗೆ ಇಂಥ ಕಾರ್ಯಗಳೆಲ್ಲವೂ ಸಹಜ ಕ್ರಿಯೆಯೇ ಆಗಿದೆ.

## ಅಸೀಮ ಗುರುಭಕ್ತಿ

ಶ್ರೀಜಂಬುಖಂಡಿ ವಾದಿರಾಜಾಚಾರ್ಯರಿಗೆ ತಮ್ಮ ವಿದ್ಯಾಗುರುಗಳಾದ ಶ್ರೀಕೃಷ್ಣಾಪುರಮಠಾಧೀಶರಲ್ಲಿದ್ದ ಶ್ರದ್ಧಾಭಕ್ತಿಗಳು ಅಸೀಮವಾದವು. ಶ್ರೀವಿದ್ಯಾಧೀಶರಿಗೂ ಸಹ ಶಿಷ್ಯರಲ್ಲಿ ಅಪಾರವಾದ ವಾತ್ಸಲ್ಯವಿದ್ದಿತು. ಇವೆರಡನ್ನೂ ಬಿಂಬಿಸುವ ರೋಚಕ ಪ್ರಸಂಗವೊಂದು ಹೀಗಿದೆ : ಆಚಾರ್ಯರು ತಮ್ಮ ಭಕ್ತರಾದ ಶ್ರೀರಾಘವೇಂದ್ರಾಚಾರ್ಯರ ಪ್ರಾರ್ಥನೆಯಂತೆ ಒಮ್ಮೆ ಶಿವಮೊಗ್ಗಗೆ ಆಗಮಿಸಿದ್ದರು. ಶಿವಮೊಗ್ಗೆಯಲ್ಲಿ ಹಲವಾರು ದಿವಸಗಳಿದ್ದ ಆಚಾರ್ಯರು ಅಲ್ಲಿ ವಾದಿರಾಜರ ಋಜುತ್ವದ ಕುರಿತಾಗಿ ಪರಿಣಾಮಕಾರಿಯಾದ ಪ್ರವಚನಗಳನ್ನು ನೀಡಿದರು. ಇದರಿಂದ ಪ್ರಭಾವಿತರಾದ ಹಲವಾರು ಸುಜೀವಿಗಳು ಈ ವಿಷಯದಲ್ಲಿ ವಿಶ್ವಾಸ ಹೊಂದಿದರಲ್ಲದೆ ದಾರ್ಢ್ಯದಿಂದ ರಾಜರ ಮೃತ್ತಿಕಾ ಧಾರಣೆಯನ್ನು ಮಾಡುತ್ತಾ ಸಾಧನಾಪರರಾದರು. ಇದನ್ನು ನೋಡಿ ಅಲ್ಲಿದ್ದ ಕೆಲವು ಕುಹಕಿಗಳಿಗೆ ಸಹನವಾಗಲಿಲ್ಲ. ಅವರೆಲ್ಲರೂ ಒಗ್ಗೂಡಿ ಸಮಾಲೋಚನೆ ನಡೆಸಿದರಲ್ಲದೇ, ಹೇಗಾದರೂ ಮಾಡಿ ಅಚಾರ್ಯರನ್ನು ಊರು ಬಿಡಿಸಬೇಕೆಂದು ನಿರ್ಧರಿಸಿ ಒಂದು ಕುಯುಕ್ತಿಯನ್ನೇ ಹುಡುಕಿದರು. 'ಉಡುಪಿ ಕೃಷ್ಣಾಪುರ ಮಠಾಧೀಶರು

ಪರಲೋಕ ಯಾತ್ರೆ ಮಾಡಿದರು' ಎಂಬ ಸುದ್ದಿಯನ್ನು ಅವರ ಪರಮಾಪ್ತರ ಮೂಲಕ ಆಚಾರ್ಯರಿಗೆ ಮುಟ್ಟಿಸಿದರು. ಆಚಾರ್ಯರಿಗೆ ಈ ಸುದ್ದಿಯನ್ನು ಕೇಳಿ ಆಘಾತವಾಯಿತು. ಸ್ವಲ್ಪ ದಿವಸಗಳ ಹಿಂದೆ ಉಡುಪಿಗೆ ಬಂದಿದ್ದಾಗ ಅವರು ಗುರುಗಳನ್ನು ಸಂದರ್ಶಿಸಿದ್ದರು. ಆಗ ಸ್ವಸ್ಥರಾಗಿದ್ದ ಶ್ರೀಗಳವರು ಇಷ್ಟು ಬೇಗ ಪರಂಧಾಮವನ್ನೈದಿದರೆಂಬ ಸುದ್ದಿಯಲ್ಲಿ ಅವರಿಗೆ ನಂಬಿಕೆ ಬರಲಿಲ್ಲ. ಇದೆಲ್ಲವೂ ಮೃದ್ವೇಷಿಗಳ ಕುತಂತ್ರವಿರಬೇಕೆಂದು ಅವರಿಗೆ ಅರ್ಥವಾಯಿತು. ಆದರೂ ಈ ಸಂದರ್ಭದಲ್ಲಿ ತಾವು ಗುರುಸನ್ನಿಧಿಗೆ ಹೋಗುವುದು ಹರಿಯಿಚ್ಛೆಯಿದ್ದ ಹಾಗೆ ತೋರುತ್ತದೆ ಎಂದು ವಿಚಾರ ಮಾಡಿ ಕೂಡಲೇ ಉಡುಪಿಗೆ ಪ್ರಯಾಣ ಕೈಗೊಂಡರು.

ಆ ಕಾಲದಲ್ಲಿ ಈಗಿನಂತೆ ವಾಹನ ಸೌಕರ್ಯಗಳು ಸಮರ್ಪಕವಾಗಿರದಿದ್ದ ಕಾರಣ ಅವರು ನಡೆದುಕೊಂಡೇ ಹೊರಟರು. ಮನಸ್ಸಿನಲ್ಲಿ ಗುರುಗಳ ಗುಣರೂಪಗಳನ್ನೇ ಚಿಂತಿಸುತ್ತಾ, ಎಂದು ಗುರುದರ್ಶನವಾದೀತೆಂದು ತಳಮಳಿಸುತ್ತಾ ದುಃಖಾತಿರೇಕದಿಂದ ಕಣ್ಣೀರಧಾರೆಯನ್ನೇ ಸುರಿಸುತ್ತಾ, ಕಾಡು ಮೇಡುಗಳನ್ನಲೆದು, ಕ್ಷಿಪ್ರ ಕಾಲದಲ್ಲಿಯೇ ಉಡುಪಿಯನ್ನು ಸೇರಿದರು. 'ಗುರುರಾಜರ ವಿರಹದಿಂದ ಸಂತಪ್ತರಾಗಿ ಗುರುಗುಣಗಾನ ಮಾಡುತ್ತಾ ತುಂಬಿದ ತುಂಗಭದ್ರೆಯನ್ನು ದಾಟಿದ ಬಿಚ್ಚಾಲೆಯ ಶ್ರೀಅಪ್ಪಣ್ಣಾಚಾರ್ಯರಂತಾಗಿತ್ತು ಆಚಾರ್ಯರ ಸ್ಥಿತಿ. ಕೃಷ್ಣಾಪುರ ಮಠವನ್ನು ಪ್ರವೇಶಿಸುತ್ತಿದ್ದಂತೆಯೇ ಆಚಾರ್ಯರಿಗೆ ತಾವು ಕೇಳಿದ ಸುದ್ದಿ ಸುಳ್ಳು ಎಂದು ತಿಳಿದು ಬಂದಿತು. ಆರೋಗ್ಯ ಪೂರ್ಣವಾಗಿರುವ ಗುರುಗಳನ್ನು ಸಂದರ್ಶಿಸುತ್ತಿದ್ದಂತೆಯೇ, ಕೊರಳುಬ್ಬಿ ಬಂದು ಕಣ್ಣಾಲಿಗಳು ತೇವಗೊಂಡವು. ಚರಣಗಳಿಗೆರಗಿದ ತಮ್ಮ ಪಟ್ಟ ಶಿಷ್ಯರನ್ನು ಕಂಡು ಗುರುಗಳಿಗೂ ಪರಮಾನಂದವಾಯಿತು. ನಂತರ ಅವರಿಂದ ಸಮಸ್ತ ವಿಷಯಗಳನ್ನೂ ತಿಳಿದ ಕೃಷ್ಣಾಪುರ ಮಠಾಧೀಶರು ಆಚಾರ್ಯರ ಗುರುಭಕ್ತಿಗೆ ಮೂಕವಿಸ್ಮಿತರಾದರು. ತಮ್ಮ ದರ್ಶನಕ್ಕಾಗಿ ದಟ್ಟ ಕಾಡುಗಳನ್ನು ಹೊಕ್ಕು ಆಯಾಸಪಟ್ಟು ಬಂದ ಶಿಷ್ಯೋತ್ತಮರ ದೇಹ

ಕ್ಲೇಶ ನಿವಾರಣೆಗಾಗಿ ಮಠದಲ್ಲಿ ಅವರಿಗೆ ಅಭ್ಯಂಜನಕ್ಕೆ ಏರ್ಪಾಟು ಮಾಡಿದರು. ತಾವೇ ಸ್ವತಃ ಶಿಷ್ಯರ ನೆತ್ತಿ ಹಾಗೂ ಮೈಗೆಲ್ಲಾ ಸುಗಂಧ ಮಿಶ್ರಿತ ತೈಲವನ್ನು ಲೇಪಿಸಿ, ಹಿತವೆನ್ನಿಸುವಂತೆ ತಿಕ್ಕಿದರು. ನಂತರ ಸುಡುತ್ತಿದ್ದ ಎರಡು ಕೊಪ್ಪರಿಗೆ ಬಿಸಿ ನೀರಿನಿಂದ ಅಭ್ಯಂಜನ ಸ್ನಾನ ಮಾಡಿಸಿದರು. ಗುರುಗಳ ಹಸ್ತಸ್ಪರ್ಶದಿಂದ ಆಚಾರ್ಯರಿಗಾದ ಆನಂದ ಅಷ್ಟಿಷ್ಟಲ್ಲ. ಅಭ್ಯಂಜನದ ಮೂಲಕ ತಮ್ಮ ಇಡೀ ಶರೀರಕ್ಕೆ ಕಾರುಣ್ಯದ ಶ್ರೀರಕ್ಷೆಯನ್ನು ಗುರುಗಳು ತೊಡಿಸಿದ ಅನುಭವ ಅವರಿಗಾಯಿತು. ಸಂಸ್ಥಾನ ಪೂಜೆಯ ನಂತರ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾದರು. ಈ ಭಾಗ್ಯ ಕರುಣಿಸಿದ ಶ್ರೀಹರಿವಾಯುಗುರುಗಳಿಗೆ ಕೃತಜ್ಞತೆಯನ್ನು ಸಲ್ಲಿಸಿದ ಆಚಾರ್ಯರು ಉಡುಪಿಯಲ್ಲಿ ರೌಪ್ಯ ಪೀಠಾಧಿಪನನ್ನು ಸೇವಿಸುತ್ತಾ ಕೆಲವು ದಿವಸಗಳ ಕಾಲ ವಾಸ ಮಾಡಿದರು[1].

## ಒಲಿದು ಬಂದ ಹನುಮ

ಜಂಬುಖಂಡಿ ಅಚಾರ್ಯರ ದೇವತಾರ್ಚನೆಯ ಕ್ರಮವೂ ವೈಶಿಷ್ಟ್ಯಪೂರ್ಣವಾಗಿದ್ದಿತು. ಒಮ್ಮೊಮ್ಮೆ ಕ್ಷಿಪ್ರದಲ್ಲಿ ಮುಗಿಯುತ್ತಿದ್ದ ಪೂಜೆ ಕೆಲವು ಬಾರಿ ಹಲವಾರು ತಾಸುಗಳಾದರೂ ಮುಂದುವರೆಯುತ್ತಿತ್ತು. ಆಚಾರ್ಯರು ತಾವು ಪೂಜಿಸುವ ದೇವತಾ ವಿಗ್ರಹಗಳನ್ನು ಜಡಪ್ರತಿಮೆ ಗಳೆಂದು ಎಂದೂ ಭಾವಿಸಿದವರಲ್ಲ. ಪೂಜಿಸುವಾಗ ಅದರೊಂದಿಗೆ ಸಂಭಾಷಿಸುವವರಂತೆ ವರ್ತಿಸುತ್ತಿದ್ದರು. ನೈವೇದ್ಯ ಅರ್ಪಿಸುವಾಗಲಂತೂ ತಾಯಿ ತನ್ನ ಮಗುವಿಗೆ ತಿನ್ನಿಸುತ್ತಿರುವಂತೆ ಆತ್ಮೀಯವಾಗಿ ನೀಡುತ್ತಿದ್ದರು.

---

1. ಬಹುಶಃ ಈ ಸಂದರ್ಭದಲ್ಲಿಯೇ ಶ್ರೀವಿದ್ಯಾಧೀಶರು ತಮ್ಮ ಮಠದ ಅರ್ಚಾಮೂರ್ತಿಯಾದ ಕಾಲೀಯಮರ್ದನ ಶ್ರೀಕೃಷ್ಣನನ್ನೇ ಹೋಲುವ ಮತ್ತೊಂದು ಪ್ರತಿಮೆಯನ್ನು ಜಂಬುಖಂಡಿ ಆಚಾರ್ಯರಿಗೆ ಅನುಗ್ರಹಿಸಿದರೆಂದು ತೋರುತ್ತದೆ. ಕೃಷ್ಣಾಪುರ ಮಠಾಧೀಶರು ಕರುಣಿಸಿದ ಆ ಸುಂದರ ಕೃಷ್ಣ ಪ್ರತಿಮೆ ಈ ಹೊತ್ತಿಗೂ ಬಳ್ಳಾರಿಯಲ್ಲಿರುವ ಆಚಾರ್ಯರ ವಂಶೀಕರ ಮನೆಯಲ್ಲಿ ನಿತ್ಯ ಪೂಜೆಗೊಳ್ಳುತ್ತಿದೆ.

ಹಾಗಾಗಿ ಅವರಿಂದ ಪೂಜೆಗೊಂಡ ಎಲ್ಲ ಪ್ರತಿಮೆಗಳೂ ಅವರಿಗೆ ಒಲಿದು ಬಂದಿದ್ದವು.

**ಯದ್ಧಸ್ತಸ್ಪರ್ಶಮಾತ್ರಾತ್ ಹಯವದನಹರೇಃ ಶ್ರೀಹನೂಮತ್ಪ್ರತೀಕೇ**
**ಯಸ್ಮಿನ್‌ಕಸ್ಮಿಂಶ್ಚಿದೇವಂ ನಿಖಿಲಭಯಹರಂ ರಾಜತೇ ಸನ್ನಿಧಾನಮ್ ।**

– ಶ್ರೀಸುಧಾಕರಗುರುಗುಣರತ್ನಮಾಲಾ (ದ್ವಿತೀಯಾವಲಿ 35)

ಎಂಬಂತೆ ಅವರು ಮುಟ್ಟಿದ ಪ್ರತಿಯೊಂದು ಪ್ರತಿಮೆಗಳೂ ಸಹ ಆಯಾ ದೇವತೆಗಳ ಸನ್ನಿಧಾನಯುಕ್ತವಾಗಿ ಜೀವ ಕಳೆಯಿಂದ ಪ್ರಕಾಶಿಸುತ್ತಿದ್ದವು. ಇದಕ್ಕೆ ಅವರಲ್ಲಿದ್ದ ಹಯಗ್ರೀವ, ಭೂವರಾಹ, ಶ್ರೀಭೂಸಮೇತ ಶ್ರೀನಿವಾಸ, ವಿಠಲ, ಗೋಪಾಲಕೃಷ್ಣ, ಕಾಲೀಯಮರ್ದನ ಕೃಷ್ಣ, ಮುಖ್ಯಪ್ರಾಣ ಮುಂತಾದ ಹಲವಾರು ಪ್ರತಿಮೆಗಳೇ ಸಾಕ್ಷಿ.

ಇವಲ್ಲದೇ ಆಚಾರ್ಯರು ಒಮ್ಮೆ ಬದರಿ ಮಾರ್ಗವಾಗಿ ಕಾಶಿಗೆ ಹೋಗಿದ್ದಾಗ ಅಲ್ಲಿಂದ ಅಮೃತಶಿಲೆಯ ವೀಣಾಪಾಣಿ ಪ್ರಾಣದೇವರ ಮುದ್ದಾದ ವಿಗ್ರಹವೊಂದನ್ನು ತಂದಿದ್ದರು. ಸದಾ ಅದನ್ನು ಕೊರಳಿಗೆ ಮಾಲೆಯಂತೆ ತೂಗು ಹಾಕಿಕೊಂಡು ಸಂಚರಿಸುತ್ತಿದ್ದ ಆಚಾರ್ಯರು ಆ ಪ್ರತಿಮೆಯನ್ನು ನಿರ್ಜೀವ ವಸ್ತುವೆಂದು ತಿಳಿಯದೆ "ನನ್ನ ಕೂಸು" ಎಂದು ಕರೆದುಕೊಳ್ಳುತ್ತಿದ್ದರು. ಬಸ್ಸು, ರೈಲು ಮುಂತಾದ ವಾಹನಗಳಲ್ಲಿ ಸಂಚರಿಸುವಾಗ ಅದಕ್ಕೂ ಪ್ರತ್ಯೇಕ ಟಿಕೆಟ್ಟನ್ನು ಆಚಾರ್ಯರು ತೆಗೆದುಕೊಳ್ಳುತ್ತಿದ್ದರಂತೆ. ಹೆಜ್ಜೆ ಹೆಜ್ಜೆಗೂ ವೀಣಾಪಾಣಿ ಮಾರುತಿಯ ಆದೇಶದಂತೆ ನಡೆಯುತ್ತಿದ್ದ ಆಚಾರ್ಯರು ತಮಗೆ ಬಹಿಷ್ಕಾರವಿದ್ದ ಅವಧಿಯಲ್ಲಿ ಪ್ರಾಣಪತಿಯ ಸೂಚನೆಯಂತೆ ತಮ್ಮ ಮುಂದಿನ ಮ್ಲೇಚ್ಛಜನ್ಮದ ಉಪಮರ್ದನಕ್ಕಾಗಿ ಒಂದು ವರ್ಷಕಾಲ ತುರುಷ್ಕರಂತೆ ವೇಷಭೂಷಣಗಳನ್ನು ಧರಿಸಿ ಸಂಚರಿಸುತ್ತಿದ್ದರು. ಆ ಸಂದರ್ಭದಲ್ಲಿ ಆಚಾರ್ಯರು ಎಲ್ಲಿಯೇ ಹೋಗಲಿ, ಭೋಜನ ಮಾಡುವ ಮೊದಲು ತಮಗೆ ಒಲಿದು ಬಂದಿದ್ದ ಮಾರುತಿಯ ಮೂರ್ತಿಯನ್ನು ಎಲೆಯ ಮಧ್ಯದಲ್ಲಿಟ್ಟು ಸಮಸ್ತವನ್ನೂ ಪ್ರಾಣಪತಿಗೆ ಅರ್ಪಿಸಿ ನಂತರ ತಾವು ಸ್ವೀಕರಿಸುತ್ತಿದ್ದರು. ಪುಣ್ಯಫಲಿಸಿದವರ ಕಣ್ಣಿಗೆ ಅದು ಕೆಲವೊಮ್ಮೆ ಜೀವಂತ

ಕಪಿಯಂತೆ ಕಾಣಿಸಿಕೊಳ್ಳುತ್ತಿತ್ತಂತೆ. ಆಚಾರ್ಯರ ಅನುಸಂಧಾನದ ಹಿರಿಮೆಯನ್ನರಿಯದ ಕೆಲವರು ಈ ಕುರಿತು ಆಕ್ಷೇಪ ವ್ಯಕ್ತಪಡಿಸುತ್ತಿದ್ದದ್ದೂ ಉಂಟು. ಅಂತಹ ಒಂದು ಸಂದರ್ಭದಲ್ಲಿ ಆಚಾರ್ಯರು ತಾವು ಎಲೆಯ ಮಧ್ಯದಲ್ಲಿಟ್ಟಿದ್ದ ಮಾರುತಿಯ ಮೂರುತಿಯನ್ನು ಹೊರಗೆ ತೆಗೆದಿಡಲು ಅವರಿಗೇ ಆದೇಶಿಸಿದರಂತೆ. ಆದರೆ ಆಕ್ಷೇಪಕಾರರು ಎಷ್ಟೇ ಪ್ರಯತ್ನಪಟ್ಟರೂ ಆ ಸಣ್ಣ ಪ್ರತಿಮೆಯನ್ನು ಅಲುಗಾಡಿಸಲೂ ಅವರಿಂದಾಗಲಿಲ್ಲ. ಕಡೆಗೆ ಅವರೆಲ್ಲರೂ ಆಚಾರ್ಯರ ಮಹಿಮೆಯನ್ನರಿತು ಕ್ಷಮೆಯಾಚಿಸಿದರು. ಇಂತಹ ಹಲವಾರು ರೋಚಕ ಪ್ರಸಂಗಗಳು ಆಚಾರ್ಯರ ಜೀವಿತದಲ್ಲಿ ನಡೆದಿವೆ.

ಒಮ್ಮೆ ಆಚಾರ್ಯರು ಹುನಗುಂದಕ್ಕೆ ಬಂದಿದ್ದಾಗ ನಡೆದ ಪ್ರಸಂಗ. ಆಗ ಆಚಾರ್ಯರಿಗೆ ಮಠದ ಬಹಿಷ್ಕಾರವಿದ್ದುದ್ದರಿಂದ ಯಾರೂ ಅವರನ್ನು ತಮ್ಮ ಮನೆಗೆ ಆಹ್ವಾನಿಸಲಿಲ್ಲ. ಆಚಾರ್ಯರು ಮಾತ್ರ ಯಾರ ಕರೆಗೂ ಕಾಯದೇ ನೇರವಾಗಿ ಪ್ರಾಜ್ಞರೂ, ಸಾತ್ತ್ವಿಕರೂ ಆಗಿದ್ದ ಜಾಲೀಹಾಳ ಗುಂಡಾಚಾರ್ಯರ ಮನೆಯನ್ನು ಹೊಕ್ಕರು. ಆ ಸಂದರ್ಭದಲ್ಲಿ ಗುಂಡಾಚಾರ್ಯರು ದೇವರ ಕಟ್ಟೆಯ ಮೇಲೆ ಕುಳಿತು ಪೂಜಾ ನಿರತರಾಗಿದ್ದರು. ವೀಣಾಪಾಣಿ ಪ್ರಾಣಪತಿಯನ್ನು ಕೊರಳಿನಲ್ಲಿ ಮಾಲೆಯಂತೆ ಧರಿಸಿ, ತುರುಷ್ಕ ವೇಷದಲ್ಲಿದ್ದ ಆಜಾನುಬಾಹು ನಿಲುವಿನ ಆಚಾರ್ಯರನ್ನು ಕಂಡಕೂಡಲೇ ಗುಂಡಾಚಾರ್ಯರು ಮಡಿಯಲ್ಲಿದ್ದರೂ ಎದ್ದು ಬಂದು ಅವರ ಪಾದಮುಟ್ಟಿ ನಮಸ್ಕರಿಸಿದರು. ಅನಾಯಾಸವಾಗಿ ಮನೆಗೆ ದಯಮಾಡಿಸಿದ ಆಚಾರ್ಯರಿಗೆ ಹಸ್ತಲಾಘವವಿತ್ತು ಸ್ವಾಗತಿಸಿದರಲ್ಲದೇ ನಿರ್ವಿಕಾರಭಾವದಿಂದ ಅವರನ್ನು ದೇವರಕಟ್ಟೆಯ ಮೇಲೆ ಕೂಡಿಸಿ ತಾವು ಪೂಜಿಸುತ್ತಿದ್ದ ಪ್ರತಿಮೆಗಳ ಸ್ಪರ್ಶವನ್ನೂ ಆ ಮಹಾನುಭಾವರಿಂದ ಮಾಡಿಸಿದರು. ಜಂಬುಖಂಡ್ಯಾರ್ಯರ ಹಸ್ತಸ್ಪರ್ಶದಿಂದ ಪ್ರತಿಮಾದಿಗಳಲ್ಲಿ ಪೂರ್ಣ ಸನ್ನಿಧಾನವುಂಟಾಗುವುದೆಂಬ ದೃಢ ನಂಬಿಕೆ ಆಚಾರ್ಯರದು! ನಂತರ ಅದೇ ಸ್ಥಿತಿಯಲ್ಲಿಯೇ ಗುಂಡಾಚಾರ್ಯರು ತಮ್ಮ ಪೂಜೆಯನ್ನು

ಮುಂದುವರೆಸಿದರು. ಚಲಪ್ರತಿಮಾರ್ಚನೆಯ ಮಹತ್ವವನ್ನು ತಿಳಿದಿದ್ದ ಗುಂಡಾಚಾರ್ಯರು, ಅಚಲ ಪ್ರತಿಮೆಯ ಪೂಜಾದಿಗಳನ್ನು ಸಂಕ್ಷಿಪ್ತದಲ್ಲಿ ಪೂರ್ಣಗೊಳಿಸಿ ಮನೆಗೆ ಬಂದ ಚಲಪ್ರತಿಮೆಯಾದ ಆಚಾರ್ಯರನ್ನು ಮಣೆಯ ಮೇಲೆ ಕೂಡಿಸಿ ಪೂಜಿಸಿದರಲ್ಲದೆ ಅವರನ್ನು ಪರಿಪರಿಯಾಗಿ ಉಪಚರಿಸಿ ಸತ್ಕರಿಸಿದರು. ಊಟದ ಸಮಯದಲ್ಲಿ ಎಂದಿನಂತೆ ಜಂಬುಖಂಡಿ ಆಚಾರ್ಯರು ತಮ್ಮ ಮುದ್ದಿನ ಕೂಸಾದ ವೀಣಾಪಾಣಿ ಮಾರುತಿಯ ಪ್ರತಿಮೆಯನ್ನು ಎಲೆಯ ನಡುವಿಟ್ಟು ಸಮಸ್ತವನ್ನೂ ಅದಕ್ಕೆ ನಿವೇದಿಸಿದರು. ನಂತರ ಮೃಷ್ಟಾನ್ನ ಭೋಜನವೇ ಆಯಿತು. ಬಹುಭೋಕ್ತೃಗಳಾದ ಆಚಾರ್ಯರು ಇದರಿಂದ ಪರಮ ಸಂತುಷ್ಟ ರಾದರು. ಭೋಜನಾನಂತರ ಫಲತಾಂಬೂಲ ದಕ್ಷಿಣೆಗಳನ್ನು ಸಮರ್ಪಿಸಿದ ಗುಂಡಾಚಾರ್ಯರ ನಯ, ವಿನಯಾದಿ ಗುಣಗಳನ್ನು ಕಂಡು ಆಚಾರ್ಯರು ಪ್ರಸನ್ನರಾದರು. 'ಗುಂಡಾಚಾರ್ಯರೇ ನಿಮ್ಮ ಸತ್ಕಾರದಿಂದ ಬಿಂಬರೂಪೀ ಶ್ರೀಹರಿ ಸುಪ್ರೀತನಾಗಿದ್ದಾನೆ. ಮುಂದೆ ನಿಮ್ಮ ವಂಶದಲ್ಲಿ ಚತುಃಶಾಸ್ತ್ರಪರಿಣಿತನೂ, ಮಹಾಮೇಧಾವಿಯೂ ಆದ ಜ್ಞಾನಿಯೊಬ್ಬನು ಹುಟ್ಟುತ್ತಾನೆ. ಕುಲದೀಪಕನಾದ ಆತ ನಿಮ್ಮ ವಂಶಕ್ಕೆ ಅಖಂಡ ಕೀರ್ತಿಯನ್ನು ತರುತ್ತಾನೆ' ಎಂದು ತುಂಬು ಹೃದಯದಿಂದ ಅವರನ್ನು ಅಶೀರ್ವದಿಸಿ ಮುಂದೆ ಪ್ರಯಾಣ ಬೆಳೆಸಿದರು. ತ್ರಿಕಾಲಜ್ಞರಾದ ಜಂಬುಖಂಡ್ಯಾಚಾರ್ಯರ ಮಾತು ಎಂದಾದರೂ ಸುಳ್ಳಾದೀತೇ! ಮುಂದೆ ಗುಂಡಾಚಾರ್ಯರ ಸದ್ವಂಶದಲ್ಲಿ ವಿದ್ವನ್ಮಣಿಯೊಬ್ಬರು ಉದಿಸಿ ಕೀರ್ತಿವಂತರಾಗಿ ಬೆಳಗಿದರು[1].

---

1. "ಅವರೇ ಜಾಲೀಹಾಳ ಶ್ರೀನಿವಾಸಾಚಾರ್ಯರು. ವ್ಯಾಸದಾಸ ಸಾಹಿತ್ಯದಲ್ಲಿ ಅಪ್ರತಿಮ ಪಂಡಿತರೆನ್ನಿಸಿ, ಮಹಾ ಮೇಧಾವಿಗಳಾಗಿ ಶ್ರೇಷ್ಠ ಗ್ರಂಥಕರ್ತೃಗಳಾಗಿ ಮತ್ತು ಶ್ರೀರಾಜರ ಋಜುತ್ವ ಮಹಿಮಾಶ್ರದ್ಧಾಳುಗಳಾಗಿ ಇತ್ತೀಚಿನವರೆಗೆ ಇದ್ದುದನ್ನು ಎಲ್ಲರೂ ತಿಳಿದಿರಲು ಸಾಕು. ಆಚಾರ್ಯರು ಆ ರೀತಿ ಅನುಗ್ರಹಿಸಿ ಅಲ್ಲಿಂದ ಹೊರಟು ಹೋದ ಮೇಲೆ ಹಿಂದಿನಿಂದಲೇ ಗುಂಡಾಚಾರ್ಯರಿಗೆ ಬಹಿಷ್ಕಾರ ಒದಗಿತು. ಶ್ರೀಗಳವರಿದ್ದಲ್ಲಿ ಹೋಗಿ ಏಳು

→

ಇಂತಹ ಮಹಿಮಾನ್ವಿತ ವ್ಯಕ್ತಿತ್ವವನ್ನು ಹೊಂದಿದ್ದ ಜಂಬುಖಂಡಿ ಆಚಾರ್ಯರನ್ನು ಗೌರವ ಭಾವದಿಂದ ಕಂಡು ಅವರ ಉಪದೇಶಾಮೃತ ವನ್ನು ಶ್ರದ್ಧೆಯಿಂದ ಸ್ವೀಕರಿಸಿದ ನೂರಾರು ಸುಜೀವಿಗಳು ಉದ್ಧೃತ ರಾದಂತೆ ಅವರಲ್ಲಿ ತಾತ್ಸಾರ ಮಾಡಿದವರು ತೀವ್ರ ತೊಂದರೆಗೆ ಒಳಗಾಗಿರುವುದೂ ಉಂಟು. ಮಹಾತ್ಮರಾದ ಆಚಾರ್ಯರ ಮಾತು ಗಳನ್ನು ಉದಾಸೀನ ಮಾಡಿ ಹಾಗೂ ಬ್ರಾಹ್ಮಣೋತ್ತಮರನ್ನು ಅಧಿಕಾರದ ಅಮಲಿನಿಂದ ಕಡೆಗಣಿಸಿದ ಅಪರಾಧಕ್ಕೆ ಬುದ್ಧಿಕೋಟಿ ಅಮಲ್ದಾರರ ವಂಶವೇ ಮುರುಟಿಹೋದ ಪ್ರಸಂಗವೊಂದನ್ನು ಹಾಲಗೀಮರ್ಡಿ ಮನೆತನದ ಶ್ರೀ ಎನ್.ವಿ. ಕುಲಕರ್ಣಿ ಎಂಬುವರು ಬೆಳಗಾವಿಯ 'ಶ್ರೀಹಂಸವಾಹನ ಪ್ರಕಾಶನ' ಪ್ರಕಟಿಸಿರುವ ಶ್ರೀಗುರುಗೋವಿಂದ

---

→ ದಿನಗಳವರೆಗೆ ಬಹಿಷ್ಕೃತರಾಗಿಯೇ ಇದ್ದು, ನಂತರ ಕ್ಷಮಾಪಣೆ ಕೇಳಿ ಬಹಿಷ್ಕಾರದಿಂದ ಮುಕ್ತರಾದರು. ಊರಿಗೆ ಬಂದ ಮೇಲೆ ಜನ ಸುಮ್ಮನಿರುತ್ತಾರೆಯೆ! ಗುಂಡಾಚಾರ್ಯರನ್ನು ಕೇಳಿಯೇ ಬಿಟ್ಟರು. ಆಚಾರ್ಯರಿಗೆ ಬಹಿಷ್ಕಾರವಿತ್ತೆಂಬ ವಿಷಯ ತಿಳಿದಿದ್ದರೂ ಅವರನ್ನು ಬರಮಾಡಿಕೊಂಡು ಸತ್ಕರಿಸಿದ್ದೇಕೆ? ನಂತರ ಶ್ರೀಮಠಕ್ಕೆ ಹೋಗಿ ಕ್ಷಮಾಪಣೆ ಯಾಚಿಸಿದ್ದೇಕೆ? ಇದಕ್ಕೆಲ್ಲಾ ಗುಂಡಾಚಾರ್ಯರು ಒಳ್ಳೆಯ ಮಾರ್ಮಿಕ ಉತ್ತರವನ್ನೇ ಇತ್ತರು. ಶ್ರೀಮಠದ ಬಹಿಷ್ಕಾರದ ಅವಧಿ ಒಂದು ಸಪ್ತಾಹ ಅಥವಾ ಮಿತಿಯುಳ್ಳದ್ದು. ಮೇಲಾಗಿ ಶಿಷ್ಯ ವಾತ್ಸಲ್ಯವುಳ್ಳ ಗುರುಗಳು ಕ್ಷಮೆ ಯಾಚಿಸಿದ ಶಿಷ್ಯರನ್ನು ಬಹಿಷ್ಕಾರದಿಂದ ಮುಕ್ತರನ್ನಾಗಿ ಮಾಡಿ ತಪ್ಪದೇ ಅನುಗ್ರಹಿಸುತ್ತಾರೆ. ಆದರೆ ಮನೆಗೆ ಬಂದ ಜ್ಞಾನಿಗಳಿಗೆ ತಿರಸ್ಕಾರ ಮಾಡಿದ್ದರೆ ಸಾಕ್ಷಾತ್ ಭಗವಂತನೇ ಏಳೇಳು ಜನ್ಮಕ್ಕೂ ಅಥವಾ ಅದಕ್ಕೂ ಹೆಚ್ಚು ಬಹಿಷ್ಕಾರ ಹಾಕಿ ಸತ್ಸಂಗದಿಂದ ದೂರಮಾಡಿ ತತ್ವಜ್ಞಾನ ವಿಮುಖರನ್ನಾಗಿ ಮಾಡುತ್ತಿದ್ದ. ಸಾಧನ ಮಾರ್ಗದಿಂದ ಚ್ಯುತರಾಗಿ ಅನಿಷ್ಟ ಪರಂಪರೆಗೆ ಗುರಿಯಾಗಬೇಕಾಗುತ್ತಿತ್ತು. ಭಯಂಕರವಾದ ಈ ಬಹಿಷ್ಕಾರಕ್ಕಿಂತ ಅಲ್ಪಾವಧಿ ಬಹಿಷ್ಕಾರಕ್ಕೆ ಒಳಪಟ್ಟು ಅದರಿಂದ ಮುಕ್ತರಾಗುವುದೇ ಲೇಸು. ಒಟ್ಟಿನಲ್ಲಿ ಭಗವದ್ಭಕ್ತರ ಸೇವೆ, ಅವರ ಅನುಗ್ರಹವೇ ಶ್ರೀಹರಿ ಪ್ರೀತಿಗೆ ಮುಖ್ಯ ಕಾರಣ"

– ಶ್ರೀಜಂಬುಖಂಡೀ ವಾದಿರಾಜಾಚಾರ್ಯರ ಮಹಾತ್ಮ್ಯೆ – ಪುಟ 91ರ ಅಡಿಟಿಪ್ಪಣಿ
(ಸಂ. ಡಾ. ನಿಪ್ಪಾಣಿ ಗುರುರಾಜಾಚಾರ್ಯರು)

ವಿಠಲದಾಸರಿಂದ ರಚಿತವಾದ ಪುಸ್ತಕದ ಮರುಮುದ್ರಣದಲ್ಲಿ ಹೀಗೆ ಉಲ್ಲೇಖಿಸುತ್ತಾರೆ :

"ಬುದ್ಧಿಕೋಟಿ ಮದ್ದೂರಾಯರ ತಂದೆಯವರು ಅಮಲ್ದಾರರಾಗಿದ್ದರು. (ಮಾಮಲೇದಾರ – ತಹಶೀಲದಾರ) ಇವರು ಜಂಬುಖಂಡಿ ಆಚಾರ್ಯರ ಸಮಕಾಲೀನರು. ಆಚಾರ್ಯರಿಗೂ ಬುದ್ಧಿಕೋಟಿಯವರಿಗೂ ಸಂಪರ್ಕವಿತ್ತು. ಬುದ್ಧಿಕೋಟಿಯವರೂ ಆಚಾರ್ಯರ ಶಿಷ್ಯರಲ್ಲಿ ಒಬ್ಬರು. ಅವರ ಮನೆಗೆ ಆಚಾರ್ಯರು ಭೇಟಿಕೊಡುತ್ತಿದ್ದರು.

ಒಂದೊಮ್ಮೆ ಆಚಾರ್ಯರು ಅವತ್ತಿನ ಭೋಜನ ತೀರಿಸಿ ಕೈತೊಳೆಯಲು ಹೊರಜಗಲಿಗೆ ಬಂದಿದ್ದಾರೆ. ಕೈತೊಳೆಯುತ್ತಿದ್ದಾರೆ. ಮಧ್ಯಾಹ್ನ ಎರಡು ಗಂಟೆಯ ಸಮಯ. ಆಗ ಅಲ್ಲಿಗೆ ಅಂಚಿನ ಧೋತರ, ಶರ್ಟು, ಕೋಟು ಧರಿಸಿ ಮೇಲೆ ರುಮಾಲು ಸುತ್ತಿಕೊಂಡು ಭವ್ಯವಾದ ಅಂಗಾರಕ್ಷತಾದಿಗಳಿಂದ ಶೋಭಿಸುವ ಬ್ರಾಹ್ಮಣ ತನ್ನ ಕೈಯಲ್ಲಿ ಒಂದು ಕಾಗದ ಪತ್ರಗಳ ಗಂಟನ್ನು ಹಿಡಿದುಕೊಂಡು ಬುದ್ಧಿಕೋಟಿಯವರ ಮನೆಗೆ ಪ್ರಾಪ್ತನಾಗಿದ್ದಾನೆ. ಆಚಾರ್ಯರು ಅವನನ್ನು ನೋಡಿ "ಯಾರು ನೀವು? ಯಾರು ಬೇಕಾಗಿತ್ತು?" ಎಂದು ವಿಚಾರಿಸಿದಾಗ, ತನ್ನ ಪರಿಚಯ ಮಾಡಿಕೊಟ್ಟು ನಮಸ್ಕರಿಸಿದ್ದಾನೆ. ಆಚಾರ್ಯರು ಆ ವ್ಯಕ್ತಿಯ ಭವ್ಯತೆಯನ್ನರಿತು, ಇವನೊಬ್ಬ ಶ್ರೇಷ್ಠ ಭಕ್ತ ಎಂದು ತಿಳಿದುಕೊಂಡವರಾಗಿ ಒಳಗೆ ಕುಳ್ಳಿರಲು ತಿಳಿಸಿ, ತಾವು ಒಳಕ್ಕೆ ಹೋಗಿ ಬುದ್ಧಿಕೋಟಿ ರಾಯರಿಗೆ 'ಅದ್ಯಾವುದೋ ಹಾಲಗೀಮರ್ಡಿ ಯಂಕಪ್ಪನವರಂತೆ, ಕಾಗದ ಪತ್ರ ತರಹೇಳಿದ್ದರಿಂದ ತಂದಿದ್ದಾರಂತೆ, ಹೋಗಿ ವಿಚಾರಿಸು' ಎಂದು ಹೇಳಿದರು. ಆಗ ಬುದ್ಧಿಕೋಟೀ ಅಮಲ್ದಾರರು ತಮ್ಮ ಅಮಲಿನಲ್ಲಿಯೇ 'ಅವನೇ, ಹಾಲಗೀ ಮರ್ಡೀ ಕುಲಕರ್ಣಿ ವೆಂಕಪ್ಪನೇ, ಕೆಲವು ಮಹತ್ವದ ತಪಾಸಣೆಯ ಕಾಗದ ಪತ್ರ ತರಲು ಹೇಳಿದ್ದೆ. ತಂದಿರಬೇಕು.' ಎಂದು ಹೇಳಿ ಆತನಿಗೆ ಒಳಗೆ ಕುಳಿತುಕೊಳ್ಳಲೂ ತಿಳಿಸದೆ ತನ್ನ ಕಾರ್ಯದಲ್ಲಿ ಮಗ್ನರಾದರು. ಈ ನಿರ್ಲಕ್ಷ್ಯವನ್ನು ಕಂಡು ಆಚಾರ್ಯರಿಗೆ ಸಹಿಸ

ಲಾಗಲಿಲ್ಲ. ಮನೆಗೆ ಬಂದ ಒಬ್ಬ ವ್ಯಕ್ತಿ, ಅದರಲ್ಲೂ ಒಬ್ಬ ಪರಮ ಭಾಗವತ, ಆತ ಕೆಳಗಿನ ಅಧಿಕಾರಿಯೇ ಆಗಿದ್ದರೂ ಕುಳಿತುಕೊಳ್ಳಲು ಹೇಳುವಷ್ಟು ಸೌಜನ್ಯವಿಲ್ಲದುದು ಆಚಾರ್ಯರಿಗೆ ತುಸು ಕೋಪವನ್ನೇ ತರಿಸಿತು. 'ಏ ಬುದ್ಧಿಕೋಟಿ! ಅವನಾರೆಂದು ತಿಳಿದಿರುವಿ. ಅವನೇನು ಸಾಮಾನ್ಯನಲ್ಲ. ಆತನಲ್ಲಿ ತೋರಿದ ಈ ನಿನ್ನ ತಿರಸ್ಕಾರ ನಿನ್ನ ವಂಶ ನಿರ್ವಂಶಕ್ಕೆ ಕಾರಣವಾದೀತು' ಎಂದು ಎಚ್ಚರಿಸಿದರು. ಆದರೂ ಆ ಅಮಲ್ದಾರರು ತೋರಿದ ನಿರ್ಲಕ್ಷತೆ ಆಚಾರ್ಯರ ಬಾಯಿಂದ ಬಂದ ಮಾತುಗಳೇ ಸಾಕಾಗಿ ಮುಂದೆ ಮದ್ದೂರಾಯರು ಸಂತಾನ ಪ್ರಾಪ್ತಿಗಾಗಿ ಯಾಗ-ಯಜ್ಞಾದಿಗಳನ್ನು ಮಾಡಿದರೂ, (ಇವರೂ ತಹಶೀಲದಾರ ಹುದ್ದೆಯಲ್ಲಿಯೇ ಕೆಲಸ ನಿರ್ವಹಿಸಿದವರು) ಫಲಿಸದೇ ಸಂತಾನವಿಲ್ಲದೆ ದಂಪತಿಗಳೀರ್ವರೂ ಇಹಲೋಕ ತ್ಯಜಿಸಿದವರಾಗಿದ್ದಾರೆ. ಈ ಸಂಗತಿಯನ್ನು ಇತ್ತೀಚಿನವರೆಲ್ಲಾ ಬಲ್ಲವರಾಗಿದ್ದಾರೆ. ಆಚಾರ್ಯರು ಸಹಜವಾಗಿ ಆಡಿದ ಮಾತಿಗೇ ಇಂತಹ ಶಕ್ತಿಯಿರಬೇಕಾದರೆ, ಅವರಲ್ಲಿನ ತಪಸ್ಸಿನ ಸಾಮರ್ಥ್ಯವೆಷ್ಟಿರಬಹುದು ಎಂಬುದನ್ನು ಊಹಿಸಬಹುದಾಗಿದೆ. ಅವರೊಬ್ಬ ಸಿದ್ಧಪುರುಷರಾಗಿದ್ದರು."

ಶಿರಗುಪ್ಪೆಯಲ್ಲಿ ಹೆಚ್ಚು ಕಾಲ ವಾಸಿಸುತ್ತಿದ್ದ ಆಚಾರ್ಯರು ಅಲ್ಲಿ ತಮ್ಮ ಆರಾಧ್ಯ ಗುರುಗಳಾದ ಶ್ರೀವಾದಿರಾಜ ಪ್ರಭುಗಳ ಸುಂದರ ಮಠವನ್ನು ಕಟ್ಟಿಸಿದ್ದಾರೆ. ಚಿಕ್ಕದಾದರೂ ಬಲು ಚೊಕ್ಕವಾಗಿರುವ ಈ ಮಠದಲ್ಲಿ ಆಚಾರ್ಯರು ಸಮಸ್ಥಾನದಲ್ಲಿ ಶ್ರೀಮುಖ್ಯ ಪ್ರಾಣದೇವರನ್ನು ಹಾಗೂ ಶ್ರೀವಾದಿರಾಜರ ಪಂಚವೃಂದಾವನಗಳನ್ನು ಪ್ರತಿಷ್ಠಾಪಿಸಿರುತ್ತಾರೆ. ಪಂಚವೃಂದಾವನದ ಮುಂದೆ ಆಚಾರ್ಯರ ಕಿರಿಯ ಪುತ್ರರಾದ ಶ್ರೀನಿವಾಸಾಚಾರ್ಯರಿಂದ ಸ್ಥಾಪಿತವಾದ ಮತ್ತೊಂದು ವೃಂದಾವನವೂ ಸಹ ತುಂಬಾ ಮುದ್ದಾಗಿದೆ. ಪಕ್ಕದಲ್ಲಿಯೇ ಜಂಬುಖಂಡಿ ಆಚಾರ್ಯರಿಂದಲೇ ಸ್ಥಾಪಿತವಾದ ಶ್ರೀಭೂತರಾಜರ ಸನ್ನಿಧಾನವಿದ್ದು ಅದು ತುಂಬಾ ಜಾಗ್ರತವಾಗಿದೆ. ಅದರ ಹಿಂಬದಿಯಲ್ಲಿ ಆಚಾರ್ಯರಿಂದಲೇ ಪ್ರತಿಷ್ಠಾಪಿಸಲ್ಪಟ್ಟ

ಮಹರುದ್ರ ದೇವರ ಲಿಂಗರೂಪ ಹಾಗೂ ಶ್ರೀವಿದ್ಯಾಧೀಶತೀರ್ಥರ ಮೃತ್ತಿಕಾ ವೃಂದಾವನವೂ ಸಹ ನಿತ್ಯ ಪೂಜೆಗೊಳ್ಳುತ್ತಿವೆ. ದೇವಾಲಯದ ಕೆಳ ಭಾಗದಲ್ಲಿ ಒಂದು ವಿಶಿಷ್ಟವಾದ ನೆಲಮಾಳಿಗೆಯಿದ್ದು, ಅಲ್ಲಿ ಜಂಬುಖಂಡಿ ಆಚಾರ್ಯರು ತಪೋನಿರತರಾಗಿರುತ್ತಿದ್ದರೆಂದು ಅವರ ವಂಶೀಕರು ಅಭಿಪ್ರಾಯಪಡುತ್ತಾರೆ. ಶಿಥಿಲವಾಗಿದ್ದ ಶಿರಗುಪ್ಪೆಯ ಶ್ರೀವಾದಿರಾಜರ ಮಠ ಈಗ ಭಕ್ತವೃಂದದ ಸಹಕಾರದಿಂದಾಗಿ ನವೀಕರಣಗೊಂಡಿದೆ.

ಸದಾ ತಮ್ಮ ಮನೆಯ ದೇವರ ಕೋಣೆಯಂತೆ ಭಾವಿಸಿ ಭೇಟಿ ನೀಡುತ್ತಿದ್ದ ಸೋದಾ ಕ್ಷೇತ್ರದಲ್ಲಿಯೂ ಸಹ ಆಚಾರ್ಯರು ಶ್ವೇತ ಶಿಲೆಯ ಮುಖ್ಯಪ್ರಾಣ ದೇವರನ್ನು ಪ್ರತಿಷ್ಠಾಪಿಸಿರುತ್ತಾರೆ. ಈ ಹೊತ್ತಿಗೂ ಆಚಾರ್ಯರು ಪ್ರತಿಷ್ಠಾಪಿಸಿದ ಮಾರುತಿಯ ಆ ಪುಟ್ಟ ವಿಗ್ರಹ ಗಂಗಾ ಸಾನ್ನಿಧ್ಯವಿರುವ ಧವಳಗಂಗಾ ತಟದಲ್ಲಿರುವುದನ್ನು ನೋಡಬಹುದು.

ತಮ್ಮ ಪೂರ್ವೀಕರ ಸ್ಥಳವಾದ ಜಮಖಂಡಿಯಲ್ಲಿಯೂ ಅಚಾರ್ಯರು ರುಕ್ಮಿಣೀ ಸತ್ಯಭಾಮಾ ಸಮೇತ ಪಾಂಡುರಂಗವಿಠಲ ಮತ್ತು ಆಂಜನೇಯನ ವಿಗ್ರಹಗಳನ್ನು ಪ್ರತಿಷ್ಠಾಪಿಸಿರುತ್ತಾರೆ. ಈ ಹೊತ್ತಿಗೂ ಅಲ್ಲಿ 'ಗಿಂಡಿ ಮನೆತನದವರು' ಎಂದು ಹೆಸರಾದ ಆಚಾರ್ಯರ ವಂಶೀಕರು ಜಂಬುಖಂಡ್ಯಾರ್ಯ ಪ್ರತಿಷ್ಠಿತ ಮೂರ್ತಿಗಳನ್ನು ಪೂಜಿಸುತ್ತಿದ್ದಾರೆ.

ತಮ್ಮ ಶಿಷ್ಯಕೋಟಿಪ್ರವಿಷ್ಟರಾದ ಶ್ರೀಷಟ್ಪುರಾಚಾರ್ಯರಿಗೆ ಆಚಾರ್ಯರು ಅನುಗ್ರಹಿಸಿ ನೀಡಿದ ಚಂದ್ರಮಂಡಲ ಮಧ್ಯದಲ್ಲಿರುವ ಹಯಗ್ರೀವ ಪ್ರತಿಮೆ ಮತ್ತು ಅವತಾರತ್ರಯ ಮುಖ್ಯ ಪ್ರಾಣದೇವರ ಪ್ರತಿಮೆಗಳ ಬೆಳಗಾವಿಯ ಶಹಾಪುರದಲ್ಲಿ ಈಗಲೂ ವಿರಾಜಿಸುತ್ತಿವೆ. ಇಲ್ಲಿ ಶ್ರೀಷಟ್ಪುರಾಚಾರ್ಯರು ವಾದಿರಾಜ ಪ್ರಭುಗಳ ಪಂಚವೃಂದಾವನ ಮತ್ತು ಶ್ರೀಭೂತರಾಜರ ಸನ್ನಿಧಾನವನ್ನೂ ಸ್ಥಾಪಿಸಿದ್ದಾರೆ. ಇತ್ತೀಚೆಗೆ ಇಲ್ಲಿ ಶ್ರೀರಾಘವೇಂದ್ರ ಗುರುಸಾರ್ವಭೌಮರ ಮೃತ್ತಿಕಾ ವೃಂದಾವನವೂ ಸಹ ಪ್ರತಿಷ್ಠಾಪಿಸಲ್ಪಟ್ಟಿದೆ.

ಶ್ರೀಷಟ್ಪುರಾಚಾರ್ಯರ ವಂಶೀಕರಿಂದ ಪೂಜಿಸಲ್ಪಡುತ್ತಿರುವ ಈ ಸನ್ನಿಧಾನವು ಆಚಾರ್ಯರ ಮಂತ್ರ ಸಿದ್ಧಿಗೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಈಗಲೂ ಸಹ ಬಳ್ಳಾರಿಯಲ್ಲಿರುವ ಆಚಾರ್ಯರ ವಂಶೀಕರಲ್ಲಿ ಅವರು ಪೂಜಿಸುತ್ತಿದ್ದ ಪ್ರತಿಮೆಗಳನ್ನು ನೋಡಬಹುದು. ವೃಂದಾವನಾಚಾರ್ಯರಿಂದ ಆಚಾರ್ಯರ ತಂದೆಯವರಿಗೆ ಅನುಗ್ರಹವಾಗಿ ನೀಡಲ್ಪಟ್ಟ ರಾಜರ ಬಂಗಾರದ ವೃಂದಾವನ, ಆಚಾರ್ಯರು ಪೂಜಿಸುತ್ತಿದ್ದ ರಜತಮಯ ಪಂಚವೃಂದಾವನಗಳು, ರಾಜರ ಹಂಸವಾಹನ ಪ್ರತಿಮೆ, ಸರ್ವಜ್ಞರ ಪ್ರತಿಮೆಗಳಲ್ಲದೇ ಶ್ರೀವಿದ್ಯಾಧೀಶರು ಆಚಾರ್ಯರಿಗೆ ಅನುಗ್ರಹಿಸಿದ ಕಾಲಿಯಮರ್ದನ ಕೃಷ್ಣ ಹಾಗೂ ಶ್ರೀಹರಿಯ ವಿವಿಧ ರೂಪಗಳ ಹತ್ತಾರು ವಿಗ್ರಹಗಳು ಅವರಲ್ಲಿವೆ. ಇವುಗಳೊಂದಿಗೆ ಆಚಾರ್ಯರಿಂದಲೇ ಸ್ಥಾಪಿತವಾಗಿರುವ ಭೂತರಾಜರ ಸನ್ನಿಧಾನ ಈ ಹೊತ್ತಿಗೂ ಜಾಗೃತವಾಗಿದ್ದು ಭಕ್ತಾದಿಗಳ ಪಾಲಿಗೆ 'ಬಳ್ಳಾರಿ ಮತ್ತೊಂದು ಸೋದಾ ಕ್ಷೇತ್ರ'ವಾಗಿದೆ. ತಮ್ಮ ಗುರುಗಳಿಂದ ಅನುಗ್ರಹ ಪೂರ್ವಕವಾಗಿ ಸಂಪಾದಿಸಿದ ಶ್ರೀವಿದ್ಯಾಧೀಶರ ಭವ್ಯಪಾದುಕೆಗಳೂ ಸಹ ಅಲ್ಲಿ ಆಚಾರ್ಯರ ಗುರುಭಕ್ತಿಯ ಪ್ರತೀಕವಾಗಿ ಕಂಗೊಳಿಸುತ್ತಿವೆ.

ಇವಲ್ಲದೇ ಉತ್ತರ ಕರ್ನಾಟಕದಲ್ಲಿ ಇನ್ನೂ ಮೂರು ಕಡೆ – ಹರಪನಹಳ್ಳಿ, ಸವಣೂರು ಮತ್ತು ಹಾವನೂರುಗಳಲ್ಲಿ ಶ್ರೀವಾದಿರಾಜ ಸ್ವಾಮಿಗಳ ವೃಂದಾವನಗಳು ಭಕ್ತಾಭೀಷ್ಟಪ್ರದವಾಗಿ ಪೂಜೆಗೊಳ್ಳುತ್ತಿರುವುದು ಕಂಡು ಬರುತ್ತವೆ. ಹರಪನಹಳ್ಳಿಯಲ್ಲಿರುವ ವೃಂದಾವನವನ್ನು ತಾಮ್ರಪರ್ಣಿ ಮನೆತನದವರು ಪ್ರತಿಷ್ಠಾಪಿಸಿದ್ದರೆ, ಸವಣೂರಿನ ವೃಂದಾವನ ಶ್ರೀಸತ್ಯಬೋಧರ ಕಾಲಕ್ಕಿಂತಲೂ ಪೂರ್ವದಲ್ಲೇ ಸ್ಥಾಪಿತವಾಗಿದ್ದೆಂದು ತಿಳಿದುಬರುತ್ತದೆ. ಹಾವನೂರಿನಲ್ಲಿರುವ ರಾಜರ ವೃಂದಾವನ ಶ್ರೀಜಂಬುಖಂಡಿ ಆಚಾರ್ಯರಿಂದ ಪ್ರತಿಷ್ಠಾಪಿತಗೊಂಡಿರಬಹುದೆಂಬ ಅಭಿಪ್ರಾಯವಿದೆ. ಆದರೆ ಇದಕ್ಕೆ ಸೂಕ್ತ ಆಧಾರಗಳು ಲಭ್ಯವಿರುವುದಿಲ್ಲ.

# ಆಚಾರ್ಯರ ಶಿಷ್ಯ ಸಂತತಿ

ಜಂಬುಖಂಡಿ ವಾದಿರಾಜಾಚಾರ್ಯರ ಶಿಷ್ಯ ಸಂಪತ್ತು ಅಗಾಧವಾದದ್ದು. ಹಾಗೇ ತಮ್ಮ ಶಿಷ್ಯರಲ್ಲಿ ಅವರಿಗಿದ್ದ ವಾತ್ಸಲ್ಯವೂ ಸಹ. ಕರ್ನಾಟಕವಷ್ಟೇ ಅಲ್ಲದೆ ಮಹಾರಾಷ್ಟ್ರ, ತಮಿಳುನಾಡು ಮುಂತಾದ ಸ್ಥಳಗಳಲ್ಲಿಯೂ ಸಹ ಆಚಾರ್ಯರಿಗೆ ಹಲವಾರು ಮಂದಿ ಶಿಷ್ಯರಿದ್ದರೆಂದು ತಿಳಿದುಬರುತ್ತದೆ. ಅವರ ಪ್ರಮುಖ ಶಿಷ್ಯರಲ್ಲಿ ಮೊದಲು ಎಣಿಸಲ್ಪಡುವವರೆಂದರೆ ನಿಪ್ಪಾಣಿ ಮೂಲದ ಶ್ರೀ ವಾಸುದೇವಾಚಾರ್ಯರು. ಇವರೇ ಷಟ್ಪುರಾಚಾರ್ಯರು ಅಥವಾ ಶಹಾಪುರಾಚಾರ್ಯರು. ಪ್ರಾರಂಭದಲ್ಲಿ ಗಲಗಲಿ ಬಾಬಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ನಡೆಸಿದ ಷಟ್ಪುರಾಚಾರ್ಯರು ನಂತರ ಜಂಬುಖಂಡಿ ವಾದಿರಾಜಾಚಾರ್ಯರಲ್ಲಿ ಪ್ರೌಢ ಗ್ರಂಥಗಳನ್ನು ಅಭ್ಯಸಿಸಿದರು. ಆಚಾರ್ಯರ ಪಟ್ಟಶಿಷ್ಯರಾಗಿದ್ದ ಷಟ್ಪುರಾಚಾರ್ಯರು ಸಂಸ್ಕೃತದಲ್ಲಿ ಶ್ರೀಸುಧಾಕರ ಗುರುಗುಣರತ್ನಮಾಲಾ (ಪ್ರಥಮಾವಲಿ), ಗಲಗಲಿ ಬಾಬಾಚಾರ್ಯ ಮಾಹಾತ್ಮ್ಯಮ್, ಶ್ರೀಜಗನ್ನಾಥ ದಾಸ ಮಾಹಾತ್ಮ್ಯಮ್, ಶ್ರೀಗೋಪಾಲದಾಸ ಮಾಹಾತ್ಮ್ಯಮ್, ಶ್ರೀವಿಜಯ ದಾಸ ಮಾಹಾತ್ಮ್ಯಮ್, ಶ್ರೀಪುರಂದರದಾಸ ಮಾಹಾತ್ಮ್ಯಮ್, ಶ್ರೀವಿಷ್ಣು ತೀರ್ಥ ಮಾಹಾತ್ಮ್ಯಮ್, ಶ್ರೀಸತ್ಯಧರ್ಮತೀರ್ಥ ಗುಣದರ್ಪಣಮ್, ಶ್ರೀಭೂತರಾಜ ಸ್ತೋತ್ರಮ್, ಶ್ರೀವಾದಿರಾಜ ಗುಣರತ್ನಮಾಲಾ, ಶ್ರೀವಾದಿರಾಜಾಷ್ಟಕಮ್, ಶ್ರೀಗುರುಮಧ್ವ ಮಹಿಮಾ, ಶ್ರೀಯಲಗೂರೇಶ ಸ್ತುತಿಃ, ಶ್ರೀಬನಶಂಕರೀ ಸ್ತೋತ್ರಮ್ ಮತ್ತು ಲಯಕ್ರಮವಿಚಾರಃ ಎಂಬ ಸಂಸ್ಕೃತ ಗ್ರಂಥಗಳನ್ನಲ್ಲದೇ 'ಪ್ರಾಣಪತಿವಿಠಲ' ಎಂಬ ಅಂಕಿತದಿಂದ ಕೆಲವು ಕನ್ನಡ ಕೃತಿಗಳನ್ನು ಸಹ ರಚಿಸಿರುತ್ತಾರೆ. ಮಧುಕರಿ ವೃತ್ತಿಯಿಂದಲೇ ತಮ್ಮ ಜೀವಿತವನ್ನು ನಿರ್ವಹಿಸಿದ ಆಚಾರ್ಯರು ಬಿಂಬೋಪಾಸನೆಯಲ್ಲಿ ನಿಷ್ಣಾತರಾಗಿದ್ದು ಯಂತ್ರ, ಮಂತ್ರಗಳಲ್ಲಿಯೂ ಅಪೂರ್ವ ಸಿದ್ಧಿಯನ್ನು ಗಳಿಸಿದ್ದರೆಂದು ತಿಳಿದುಬರುತ್ತದೆ. ಆಚಾರ್ಯರ ವಂಶಸ್ಥರಿಂದ ಪೂಜೆಗೊಳ್ಳುತ್ತಿರುವ ಅವರ ಕರಾರ್ಚಿತ ಮೂರ್ತಿಗಳನ್ನು ಈಗಲೂ ಬೆಳಗಾವಿಯ ಶಹಾಪುರದಲ್ಲಿ ನೋಡಬಹುದಾಗಿದೆ.

ಮತ್ತೊಬ್ಬ ಶಿಷ್ಯರೆಂದರೆ ವಾಳವೇಕರ್ ಶ್ರೀಭೀಮಾಚಾರ್ಯರು. ಇವರು ಮಹಾರಾಷ್ಟ್ರ ವ್ಯಾಪ್ತಿಯಲ್ಲಿ ಬರುವ ವಾಳೆ ಎಂಬ ಸ್ಥಳದವರು. ಷಟ್ಪುರಾಚಾರ್ಯ ಮತ್ತು ಜಂಬುಖಂಡಿ ವಾದಿರಾಜಾಚಾರ್ಯ - ಇಬ್ಬರಲ್ಲಿಯೂ ಅಧ್ಯಯನವನ್ನು ನಡೆಸಿದ ಭೀಮಾಚಾರ್ಯರು ಉದ್ದಾಮ ಪಂಡಿತರು. ಶ್ರೀಮದ್ಭಾಗವತಾದಿ ಗ್ರಂಥಗಳಲ್ಲಿ ಆಚಾರ್ಯರಿಗೆ ಅಪರಿಮಿತವಾದ ಪ್ರಭುತ್ವವಿದ್ದಿತು. ಉತ್ತಮ ಪ್ರವಚನಪಟುಗಳೂ ಆಗಿದ್ದ ಆಚಾರ್ಯರು ತಮ್ಮ ಅಸ್ಖಲಿತ ವಾಣಿಯಿಂದ ಅಪಾರ ಅಭಿಮಾನಿ ವೃಂದವನ್ನು ಸಂಪಾದಿಸಿದ್ದರು. ಗುರುಗಳಂತೆಯೇ ಹರಿದಾಸ ದೀಕ್ಷೆ ಯನ್ನು ಪಡೆದಿದ್ದ ಆಚಾರ್ಯರು 'ಶ್ರೀಶಪ್ರಸನ್ನಕೇಶವವಿಠಲ' ಎಂಬ ಮುದ್ರಿಕೆಯಿಂದ ಅನೇಕ ಕನ್ನಡ ಕೃತಿಗಳನ್ನು ರಚಿಸಿರುತ್ತಾರೆ. ರಾಜರ ಋಜುತ್ವದಲ್ಲಿ ಆಚಾರ್ಯರಿಗಿದ್ದ ದೀಕ್ಷೆ ಅಸ್ಖಲಿತವಾದದ್ದು. ಹಾಗೇ ಇವರ ಗುರುಭಕ್ತಿಯೂ ಸಹ. ಗುರುನಿಂದೆಯನ್ನು ಇವರು ಸರ್ವಥಾ ಸಹಿಸುತ್ತಿರಲಿಲ್ಲ. ಹಾಗೂ ಗುರುದ್ರೋಹ ಮಾಡಿದವರ ಮುಖಾವಲೋಕ ವನ್ನೂ ಸಹ ಮಾಡುತ್ತಿರಲಿಲ್ಲವೆಂಬುದಕ್ಕೆ ನಿಪ್ಪಾಣಿಯವರು ರೋಚಕ ವೃತ್ತಾಂತವೊಂದನ್ನು ಹೀಗೆ ಉಲ್ಲೇಖಿಸುತ್ತಾರೆ :

"ಆಗೊಮ್ಮೆ ಜಂಬುಖಂಡಿ ಆಚಾರ್ಯರು ಶ್ರೀಸೋದಾ ಕ್ಷೇತ್ರದಿಂದ ವಾಪಸ್ಸು ಬರುವಾಗ ಶಿರಸಿಯನ್ನು ಮುಟ್ಟುವುದೇ ತಡವಾಯಿತು. ಕತ್ತಲಾದ್ದರಿಂದ ಅಲ್ಲಿಯೇ ಇದ್ದು ಮರುದಿನ ಹೊರಡಲು ನಿಶ್ಚಯಿಸಿದರು. ಅಲ್ಲಿಯೇ ಒಬ್ಬ ಗೃಹಸ್ಥ. ಹೆಸರು ಶ್ರೀನಿವಾಸರಾಯರು ಎಂದು. ಸ್ವಂತ ಊರು ಬೆಳಗಾವಿ. ಕಂದಾಯ ಇಲಾಖೆಯಲ್ಲಿ ಅಧಿಕಾರಿಯಾಗಿ ಶಿರಸಿಯಲ್ಲಿ ಕೆಲಸ. ರಾತ್ರಿ ವಾಸ್ತವ್ಯಕ್ಕಾಗಿ ಅವನನ್ನೇ ಕಂಡರು. ಪೂಜ್ಯ ಆಚಾರ್ಯರನ್ನು ಮೊದಲಿನಿಂದಲೂ ಬಲ್ಲವ. ಆದರೆ ಅವರ ಋಜುತ್ವ ಸಂಬಂಧಿಯಾದ ವಿಚಾರ ಆಚಾರಗಳ ಬಗ್ಗೆ ಎಳ್ಳಷ್ಟೂ ಗೌರವವಿಲ್ಲದವ. ಇದನ್ನು ಬಹಿರಂಗಗೊಳಿಸದೇ ಸಹಾಯ ಮಾಡುವ ನೆಪದಲ್ಲಿ (ಒಳ್ಳೆಯ ಕೊಠಡಿಗಳು ಇದ್ದರೂ) ಶೌಚಾಲಯದ ಸಮೀಪವಾದ ಕೊಠಡಿಯನ್ನು ತಂಗಲು ಕೊಟ್ಟ. ಅಂತೂ ರಾತ್ರಿ ಅಲ್ಲಿಯೇ ಇದ್ದು. ಮರುದಿನ

ಮುಂದುವರೆಯಿತು ಆಚಾರ್ಯರ ಪ್ರಯಾಣ. ನಂತರ ಈ ವಿಷಯ ಶ್ರೀಭೀಮಾಚಾರ್ಯರಿಗೆ ತಿಳಿಯಿತು. ಕೆಲವು ದಿನಗಳಾದ ಮೇಲೆ ಆ ಗೃಹಸ್ಥನು ಬೆಳಗಾವಿಗೆ ವರ್ಗವಾಗಿ ಬಂದ. ಶ್ರೀಭೀಮಾಚಾರ್ಯರು ಅಲ್ಲಿಯ ಶಹಾಪುರದಲ್ಲಿಯ ಶ್ರೀರಾಧಾಕೃಷ್ಣ ಮಂದಿರದಲ್ಲಿ ಪ್ರತಿನಿತ್ಯ ಸಾಯಂಕಾಲ ಶ್ರೀಮದ್ಭಾಗವತ ಪುರಾಣವನ್ನು ಹೇಳುತ್ತಿದ್ದರು. ಆಚಾರ್ಯರ ಪುರಾಣವೆಂದ ಮೇಲೆ ಕೇಳಬೇಕೇ! ನೂರಾರು ಜನ. ಒಂದು ದಿನ, ಆಚಾರ್ಯರು ವ್ಯಾಸಪೀಠದ ಮುಂಭಾಗದಲ್ಲಿ ಪುರಾಣ ಅನುವಾದಕ್ಕಾಗಿ ಮಂಡಿಸಿದ್ದಾರೆ. ಎದುರಿನಲ್ಲಿ ಶ್ರೋತೃಗಳೆಲ್ಲರೂ ಉತ್ಸುಕರಾಗಿ ಕುಳಿತಿದ್ದಾರೆ. ಇನ್ನೇನು ಪುರಾಣ ಆರಂಭ. 'ಶ್ರೀಗುರುಭ್ಯೋ ನಮಃ' ಇತ್ಯಾದಿ ಹೇಳಿದ್ದಾಯಿತು. 'ಜನ್ಮಾದ್ಯಸ್ಯ ಯತೋನ್ವಯಾತ್....' ಎಂಬುದಾಗಿ ಪ್ರಥಮ ಮಂಗಳ ಶ್ಲೋಕದ ವಾಣಿಯು ಆಚಾರ್ಯರ ಮುಖಕಮಲದಿಂದ ಹೊರಹೊಮ್ಮಿತು. ಸುಸ್ವರ ವಚನರೂಪ ಸುರನದಿಯಲ್ಲಿ ಅವಗಾಹನ ಮಾಡುವೋಪಾದಿಯಲ್ಲಿ ಎಲ್ಲರೂ ಬಹು ಶ್ರದ್ಧೆಯಿಂದ, ಆನಂದದಿಂದ ಶ್ರವಣ ಮಾಡಲು ಕುಳಿತಿರುವಾಗ ಒಮ್ಮೆಲೇ ಆ ಗೃಹಸ್ಥನ ಪ್ರವೇಶ. ಇಲಾಖೆಯ ಕಾರ್ಯವನ್ನು ಮುಗಿಸಿಕೊಂಡು ಪುರಾಣ ಶ್ರವಣಕ್ಕೆಂದು ಬಂದಿದ್ದ. ಆ ವ್ಯಕ್ತಿಯನ್ನು ಕಂಡ ಕ್ಷಣದಲ್ಲಿಯೇ ಆಚಾರ್ಯರು 'ಶ್ರೀಕೃಷ್ಣಾರ್ಪಣಮಸ್ತು; ಉತ್ತರ ಶ್ಲೋಕದಿಂದ ಹೇಳುತ್ತೇವೆ' ಎಂದು ಉಚ್ಚರಿಸಿ ಅನುವಾದವನ್ನು ನಿಲ್ಲಿಸಿಯೇ ಬಿಟ್ಟರು. ನೆರೆದ ಶ್ರೋತೃವೊಬ್ಬ ಕೇಳಿಯೇಬಿಟ್ಟ. ಅದಕ್ಕೆ ಆಚಾರ್ಯರು ದಿಟ್ಟವಾಗಿಯೇ ಉತ್ತರಕೊಟ್ಟರು. 'ಗುರುರಾಜರ ಮತ್ತು ಅವರ ಭಕ್ತರಾದ ಗುರುಗಳ (ಜಂಬುಖಂಡಿ ಆಚಾರ್ಯರ) ದ್ರೋಹಿಗಳ ಎದುರಿನಲ್ಲಿ ಶ್ರೀಮದ್ಭಾಗವತಾದಿ ಶಾಸ್ತ್ರಗಳ ಅನುವಾದವು ಹರಿಪ್ರೀತಿಕರವೂ ಅಲ್ಲ. ಪುಣ್ಯಪ್ರದವೂ ಅಲ್ಲ' ಎಂದು. ಈ ತೆರನಾದ ಋಜುತ್ವದೀಕ್ಷೆ ಮತ್ತು ಗುರುಭಕ್ತಿಯನ್ನು ಕಾಣುವುದು ವಿರಳವೆಂದರೂ ತಪ್ಪಾಗದು."

ವಾಳವೇಕರ್ ಭೀಮಾಚಾರ್ಯರ ತಮ್ಮಂದಿರಾದ ಶ್ರೀವೆಂಕಣ್ಣಾಚಾರ್ಯರೂ ಸಹ ಆಚಾರ್ಯರ ಅವಿಚ್ಛಿನ್ನ ಶಿಷ್ಯರು. ತಮ್ಮ ಸೋದರ

ರಾದ ಭೀಮಾಚಾರ್ಯರಲ್ಲಿ ಮತ್ತು ಷಟ್ಪುರಾಚಾರ್ಯರಲ್ಲಿ ಶಾಸ್ತ್ರ ವ್ಯಾಸಂಗವನ್ನು ಮಾಡಿದ ವೆಂಕಣ್ಣಾಚಾರ್ಯರು ಜಂಬುಖಂಡಿ ಆಚಾರ್ಯರಲ್ಲಿಯೂ ಸಹ ಕೆಲವು ಪ್ರೌಢ ಗ್ರಂಥಗಳ ಪಾಠವನ್ನು ಶ್ರವಣ ಮಾಡಿರುತ್ತಾರೆ. ಆಚಾರ್ಯರ ಜೊತೆಯಲ್ಲಿ ಬದರಿ ಮುಂತಾದ ಪುಣ್ಯಕ್ಷೇತ್ರ ಯಾತ್ರೆಯಲ್ಲಿ ಭಾಗವಹಿಸಿದ ಇವರು ಗುರುಗಳಂತೆಯೇ ರಾಜರ ಋಜುತ್ವ ಪ್ರತಿಪಾದನೆಗಾಗಿ ಹಾಗೂ ಆಖ್ಯಾನೋಕ್ತ ಮಹಿಮೆಗಳ ಪ್ರಸರಣ ಕಾರ್ಯಕ್ಕಾಗಿ ತಮ್ಮ ಜೀವಿತವನ್ನೇ ಮುಡಿಪಿಟ್ಟಿದ್ದರು. ಪ್ರಮೇಯಭರಿತವಾದ ಆಖ್ಯಾನದ ತಿರುಳನ್ನು ಕನ್ನಡದಲ್ಲಿ ಪ್ರತಿಮಾಡಿಸಿ, ಪ್ರಸಿದ್ಧಿಸಿದ ಹೆಗ್ಗಳಿಕೆ ಇವರದು. ಸೋದಾ ಕ್ಷೇತ್ರಯಾತ್ರೆಯನ್ನು ಒಂದು ಪವಿತ್ರ ದೀಕ್ಷೆಯಂತೆ ಕೈಗೊಳ್ಳುತ್ತಿದ್ದ ಆಚಾರ್ಯರು ಅಲ್ಲಿ ಹಲವಾರು ಜ್ಞಾನಸತ್ರಗಳನ್ನು ನಡೆಸಿದರಲ್ಲದೇ ಶ್ರೀಕ್ಷೇತ್ರದ ಅಭಿವೃದ್ಧಿಗಾಗಿ ಅನೇಕ ಜೀರ್ಣೋದ್ಧಾರ ಕಾರ್ಯಗಳನ್ನೂ ಸಹ ಕೈಗೊಂಡು ರಾಜರ ಕೃಪೆಗೆ ಪಾತ್ರರಾಗಿದ್ದಾರೆ. ಬೆಳಗಾವಿಯಲ್ಲಿ ಇವರು ವೀಣಾಪಾಣಿ ಮಾರುತಿ ಮಂದಿರವನ್ನು ಸ್ಥಾಪಿಸಿದ್ದಾರೆ.

ಶ್ರೀಭೀಮಾಚಾರ್ಯರ ಮತ್ತೊಬ್ಬ ತಮ್ಮಂದಿರಾದ ವಾಳವೇಕರ್ ಶ್ರೀಮಧ್ವಾಚಾರ್ಯರೂ ಸಹ ಜಂಬುಖಂಡಿ ಆಚಾರ್ಯರ ಶಿಷ್ಯ ವೃಂದದಲ್ಲಿ ಹೆಸರಾದವರು. ತಮ್ಮ ಅಣ್ಣಂದಿರಲ್ಲಿ ಮತ್ತು ಷಟ್ಪುರಾಚಾರ್ಯರಲ್ಲಿ ಅಧ್ಯಯನ ನಿರತರಾಗಿದ್ದ ವಾಳವೇಕರ್ ಮಧ್ವಾಚಾರ್ಯರು ಪ್ರಾರಂಭದಲ್ಲಿ ಸರ್ಕಾರಿ ಉದ್ಯೋಗದಲ್ಲಿದ್ದವರು. ಆದರೂ ಸದಾಚಾರ ಸಂಪನ್ನರಾಗಿ ವೈದಿಕ ಮಾರ್ಗಾವಲಂಬಿಗಳಾದರು. ಬೆಳಗಾವಿ ಕಡೆಗೆ ಜಂಬುಖಂಡ್ಯಾರ್ಯರು ಬಂದಾಗಲೆಲ್ಲಾ ದಾಶರಥಿಯನ್ನು ಸೇವಿಸುತ್ತಿದ್ದ ಮಾರುತಿಯಂತೆ ಗುರುಗಳ ಚರಣ ಕೈಂಕರ್ಯವನ್ನು ಎಡೆಬಿಡದೆ ನಡೆಸಿದ ಪುಣ್ಯ ಪುರುಷರು ಮಧ್ವಾಚಾರ್ಯರು.

ಜಂಬುಖಂಡಿ ಆಚಾರ್ಯರ ಮತ್ತೊಬ್ಬ ಪ್ರಮುಖ ಶಿಷ್ಯರಾದ ಅರಳೀಕಟ್ಟೆ ನರಸಿಂಹಾಚಾರ್ಯರು ಹತ್ತಿಬೆಳಗಲ್ ಎಂಬ ಸ್ಥಳದಲ್ಲಿದ್ದವರು. ಮಹಾಜ್ಞಾನಿಗಳೆಂದು ಪ್ರಸಿದ್ಧರಾದ ನರಸಿಂಹಾಚಾರ್ಯರು ತಮ್ಮ

ಊರಿನ ಹೊರಭಾಗದಲ್ಲಿದ್ದ ಸೋಮೇಶ್ವರ ದೇವಸ್ಥಾನದ ಬಳಿಯಿರುವ ಗುಹೆಯಲ್ಲಿ ಅನವರತ ಶಾಸ್ತ್ರ ಚಿಂತನೆಯಲ್ಲಿ ತೊಡಗಿರುತ್ತಿದ್ದರು. ಜಂಬುಖಂಡಿ ಆಚಾರ್ಯರು ತಮ್ಮ ಶಿಷ್ಯರಿಗಾಗಿ ಆಗಾಗ ಹತ್ತಿಬೆಳಗಲಿಗೆ ಬರುತ್ತಿದ್ದು ಒಮ್ಮೆ ಹಾಗೆ ಬಂದಾಗ ಅಲ್ಲಿನ ಗುಹೆಯಲ್ಲಿ ಆರು ತಿಂಗಳು ವಾಸ್ತವ್ಯ ಹೂಡಿ ಶಿಷ್ಯರಿಗೆ ಹಲವಾರು ಆಧ್ಯಾತ್ಮಿಕ ರಹಸ್ಯಗಳನ್ನು ಉಪದೇಶಿಸಿದರಂತೆ. ಶ್ರೀಮನ್ನ್ಯಾಯಸುಧಾದಿ ಗ್ರಂಥಗಳಲ್ಲಿ ಉತ್ತಮ ಪರಿಶ್ರಮವನ್ನು ಹೊಂದಿದ್ದ ಆಚಾರ್ಯರು ಮಹಾನ್ ಸಾಧಕರೂ ಸಹ. ತಮ್ಮ ಜೀವಿತದಲ್ಲಿ ಪ್ರಾಣದೇವರ ಉಪಾಸನೆಯನ್ನು ಅಖಂಡವಾಗಿ ಮಾಡಿದ ಹಿರಿಮೆ ಇವರದು. ಪ್ರಾಣಪತಿಯ ಆದೇಶಾನುಸಾರ ಹಲವಾರು ಕಠಿಣ ಅನುಷ್ಠಾನಗಳನ್ನು ಕೈಗೊಳ್ಳುತ್ತಿದ್ದ ಆಚಾರ್ಯರು ಒಮ್ಮೆ ನಲವತ್ತು ದಿವಸಗಳ ಕಾಲ ಉಪವಾಸವಿದ್ದು ಗುರುಬಿಂಬನಿಗೆ ಅರ್ಪಣೆ ಮಡಿದ್ದಾರೆ. ಗುರುಗಳಂತೆಯೇ ಇವರೂ ಸಹ ಬದುಕಿನಲ್ಲಿ ಸರ್ವಸ್ವದಾನ ಮಾಡಿರುತ್ತಾರೆಂದು ತಿಳಿದು ಬರುತ್ತದೆ. ಇವರ ಶಿಷ್ಯಸಂತತಿ ಅಗಾಧವಾಗಿದೆ. ಬಿಲ್ವಪತ್ರಿ ಆಚಾರ್ಯರು, ಮುತ್ತಿಗೆ ಶ್ರೀನಿವಾಸಾಚಾರ್ಯರು ಮುಂತಾದವರು ಅವರಲ್ಲಿ ಪ್ರಮುಖರು. ಈ ಬಿಲ್ವಪತ್ರಿ ಆಚಾರ್ಯರ ಪುತ್ರಿಯನ್ನು ಮುಂದೆ ಜಂಬುಖಂಡಿ ವಾದಿರಾಜಾಚಾರ್ಯರ ತೃತೀಯ ಪುತ್ರರಾದ ಶ್ರೀನಿವಾಸಾಚಾರ್ಯರು ವಿವಾಹವಾದರು. ಹಾಗಾಗಿ ಅವರು ಹತ್ತಿಬೆಳಗಲಿಗೆ ಹಲವಾರು ಬಾರಿ ಹೋಗಬೇಕಾಗಿ ಬಂದಿತು. ಹಾಗೆ ಹೋದಾಗಲೆಲ್ಲಾ ಶ್ರೀನಿವಾಸಾಚಾರ್ಯರು ತಮ್ಮ ತಂದೆಗಳು ನರಸಿಂಹಾಚಾರ್ಯರಿಗೆ ಉಪದೇಶ ಮಾಡಿದ ಅಲ್ಲಿನ ಸೋಮೇಶ್ವರ ಗುಡಿಯ ಗುಹೆಯಲ್ಲಿಯೇ ಕುಳಿತು ಸರ್ವಮೂಲಾದಿ ಗ್ರಂಥಾವಲೋಕನವನ್ನು ಮಾಡುತ್ತಿದ್ದರಂತೆ. ಯಾವುದಾದರೂ ಹಂತದಲ್ಲಿ ಅವರಿಗೆ ಸಂಶಯ ಒದಗಿದಾಗ ಗುಹೆಯೇ ಮಾರ್ದನಿಸುವಂತೆ ಆಚಾರ್ಯರ ವಾಣಿ ಕೇಳಿಬಂದು ಅದಕ್ಕೆ ಪರಿಹಾರ ಸಿಕ್ಕುತ್ತಿತ್ತಂತೆ. ಹೀಗೆ ಜಂಬುಖಂಡಿ ಆಚಾರ್ಯರು ತಾವು ಅದೃಶ್ಯರಾಗಿದ್ದಾಗಲೂ ಶಿಷ್ಯರಿಗೆ ಮಾರ್ಗದರ್ಶಕರಾಗಿದ್ದರು. ಜ್ಞಾನನಿಧಿಗಳಾಗಿದ್ದ ಮುತ್ತಿಗೆ ಶ್ರೀನಿವಾಸಾಚಾರ್ಯರಂತೂ

ತಮ್ಮ ಬದುಕಿನ ಸಂಧ್ಯಾ ಕಾಲದಲ್ಲಿ ತುರ್ಯಾಶ್ರಮವನ್ನು ಸ್ವೀಕರಿಸಿ ಶ್ರೀರಘುಪ್ರೇಮತೀರ್ಥರೆಂದು ಪ್ರಸಿದ್ಧರಾದರು. ಮಹಾಮಹಿಮರಾದ ಶ್ರೀಗಳವರ ವೃಂದಾವನ ಈಗಲೂ ಆದವಾನಿಯಲ್ಲಿ ನೋಡಬಹುದು.

ಜಂಬುಖಂಡಿ ಆಚಾರ್ಯರ ಶಿಷ್ಯರಾಗಿ ಅವರೊಂದಿಗೆ ಹೆಚ್ಚಿನ ಸಂಪರ್ಕವನ್ನು ಪಡೆದಿದ್ದವರಲ್ಲಿ ಶ್ರೀಕಾಶಿ ರಾಘವೇಂದ್ರಾಚಾರ್ಯರೂ ಒಬ್ಬರು. ಪಂಚವೃಂದಾವನಸ್ಥಿತ ವಾದಿರಾಜರ ಋಜುತ್ವದಾರ್ಢ್ಯವಲ್ಲದೆ ಪಂಚವ್ಯಾಕರಣದಲ್ಲಿಯೂ ಇವರ ಸಿದ್ಧಿ ಅಪಾರವಾಗಿದ್ದಿತು. ಬದರಿ ಯಾತ್ರೆಯ ಸಂದರ್ಭದಲ್ಲಿ ಗುರುಗಳ ಜೊತೆಗಿದ್ದು[1] ಅವರನ್ನು ಸೇವಿಸಿದ ರಾಘವೇಂದ್ರಾಚಾರ್ಯರು ಅವರಿಂದ ರಹಸ್ಯೋಪದೇಶಗಳನ್ನು ಹಲವಾರು ಬಾರಿ ಹೊಂದಿದ್ದಾರೆ. ವಿದ್ವನ್ಮಣಿಗಳಾಗಿದ್ದ ಇವರನ್ನು ವಿದ್ಯಾಕಾಂಕ್ಷಿಗಳು ಬೆಲ್ಲಕ್ಕೆ ಇರುವೆ ಮುತ್ತುವಂತೆ ಮುತ್ತಿರುತ್ತಿದ್ದರು. ಹಲವಾರು ಪ್ರಕಾಂಡ ಪಂಡಿತರನ್ನು ತಯಾರಿಸಿದ ಮಹಿಮೆ ಇವರದು.

ಜಂಬುಖಂಡಿ ಆಚಾರ್ಯರಿಗೆ ಮೂರು ಜನ ಮಕ್ಕಳಿದ್ದರು. ಅದರಲ್ಲಿ ಪ್ರಥಮ ಪುತ್ರರಾದ ಶ್ರೀಕೃಷ್ಣಾಚಾರ್ಯರು ಬಾಲ್ಯದಲ್ಲಿಯೇ ಪ್ರತಿಭಾ ಸಂಪನ್ನರಾಗಿದ್ದರಲ್ಲದೇ ಆಶುಕವಿತ್ವದಲ್ಲಿ ಸಿದ್ಧಿಯನ್ನು ಪಡೆದುಕೊಂಡಿದ್ದರು. ತಮ್ಮ ತಂದೆಯವರ ಬಳಿಯಲ್ಲಿಯೇ ಶಾಸ್ತ್ರಾಧ್ಯಯನವನ್ನು ಮಾಡಿದ ಕೃಷ್ಣಾಚಾರ್ಯರು ಒಮ್ಮೆ ಅವರೊಂದಿಗೆ ಬದರೀಯಾತ್ರೆ ಕೈಗೊಂಡಿದ್ದಾಗ ಮಾರ್ಗ ಮಧ್ಯದಲ್ಲಿ ಅಕಾಲ ಮರಣಕ್ಕೆ ತುತ್ತಾಗಿದ್ದರು. ದ್ವಿತೀಯ ಪುತ್ರರಾದ ಶ್ರೀಮಾಧವಾಚಾರ್ಯರು ತಮ್ಮ ತಂದೆಯವರ

---

1. ಇನ್ನೊಬ್ಬರು ನಮ್ಮ ಗುರುಗಳು, ಕಾಶಿಯಲ್ಲಿ ಇಪ್ಪತ್ತು ವರ್ಷವಿದ್ದವರು, ಶ್ರೀರಾಘವೇಂದ್ರಾಚಾರ್ಯ ನಾಮಕರು, ಚಿತ್ರದುರ್ಗ ದೇಶದವರು. ಅವರು ಜಂಖಂಡಿ ಆಚಾರ್ಯರ ಸಂಗಡ ಕಾಶಿಯಿಂದ ಬದರೀ ಯಾತ್ರೆಗೆ ಅವರೊಡನೆ ಹೋಗಿ ಕಾಶ್ಮೀರ ಸಭೆ ಚರ್ಚೆಯಲ್ಲೂ ಭಾಗವಹಿಸಿದ್ದರು; ಅವರು ವಾದಿರಾಜಾಚಾರ್ಯರು ವಿಜಯದಾಸರ ಪದವನ್ನು ಆಗಿಂದಾಗ್ಗೆ ಹಾಡುತ್ತಿದ್ದರೆಂದೂ ಹೇಳುತ್ತಿದ್ದರು.

– ಶ್ರೀ ಹೆಚ್. ಸುಬ್ಬರಾವ್. (ವಾದಿರಾಜ ಋಜುತ್ವ ಸಿದ್ಧಾಂತ)

ಬಳಿಯಲ್ಲಿಯೇ ಪ್ರಾರಂಭಿಕ ಶಿಕ್ಷಣವನ್ನು ಪಡೆದರೂ ಆಚಾರ್ಯರು ಹೆಚ್ಚಾಗಿ ಸಂಚಾರದಲ್ಲಿರುತ್ತಿದ್ದುದರಿಂದ ದಕ್ಷಿಣ ದೇಶಕ್ಕೆ ಹೋಗಿ ಅಲ್ಲಿ ನ್ಯಾಯ, ವ್ಯಾಕರಣ, ವೇದಾಂತಾದಿ ಶಾಸ್ತ್ರಗಳಲ್ಲಿ ಅಪರಿಮಿತವಾದ ಪಾಂಡಿತ್ಯವನ್ನು ಗಳಿಸಿಕೊಂಡರು. ತಂದೆಯಂತೆಯೇ ಅಪ್ರತಿಮ ವಾಗ್ಮಿಗಳೂ, ನಿಷ್ಣಾತ ಗ್ರಂಥಕರ್ತೃಗಳೂ ಆಗಿದ್ದ ಮಾಧವಾಚಾರ್ಯರು ಹಲವಾರು ವಿದ್ವತ್ಸಭೆಗಳಲ್ಲಿ ಭಾಗವಹಿಸಿ ಪರವಾದಿಗಳನ್ನು ಗೆದ್ದಿದ್ದಾರೆ. ಇವರ ವಿದ್ವತ್ಪ್ರಭಾವಕ್ಕೆ ಮನಸೋತಿದ್ದ ಗದ್ವಾಲರಾಜ ಆಚಾರ್ಯರನ್ನು ಆದರಿಸಿ ತನ್ನ ಆಸ್ಥಾನ ಪಂಡಿತರನ್ನಾಗಿ ನೇಮಿಸಿಕೊಂಡಿದ್ದ. ಮಾಧವಾಚಾರ್ಯರಿಗೆ ಮಕ್ಕಳಿರಲಿಲ್ಲ. ಹಾಗಾಗಿ ಅವರು ತಮ್ಮ ಕಿರಿಯ ಸಹೋದರರಾದ ಶ್ರೀನಿವಾಸಾಚಾರ್ಯರ ದ್ವಿತೀಯ ಪುತ್ರರಾದ ವಾದಿರಾಜಾಚಾರ್ಯರನ್ನು ದತ್ತು ತೆಗೆದುಕೊಂಡಿದ್ದರು. ಮಾಧವಾಚಾರ್ಯರೂ ಸಹ ತಮ್ಮ 55ನೇ ವಯಸ್ಸಿನಲ್ಲಿ ನಿಧನರಾದರೆಂದು ತಿಳಿದು ಬರುತ್ತದೆ. ಆಚಾರ್ಯರ ತೃತೀಯ ಪುತ್ರರಾದ ಶ್ರೀನಿವಾಸಾಚಾರ್ಯರು ತಮ್ಮ ತಂದೆಯವರಲ್ಲಿಯೇ ಪ್ರಾರಂಭಿಕ ಹಂತದ ವಿದ್ಯಾಭ್ಯಾಸ ಮಾಡಿದರಾದರೂ ಹೆಚ್ಚಿನ ಶಾಸ್ತ್ರಾಭ್ಯಾಸವಾಗಲಿಲ್ಲವೆಂಬ ಕೊರಗು ಅವರನ್ನು ಬಾಧಿಸುತ್ತಿತ್ತು. ಆದರೆ ತಮ್ಮ ತಂದೆಯವರ ಅಂತ್ಯಕಾಲದಲ್ಲಿ ಸದಾ ಜೊತೆಗಿದ್ದು ಅವರ ಸೇವೆಯನ್ನು ಮಾಡಿದ ಕೀರ್ತಿ ಶ್ರೀನಿವಾಸಾಚಾರ್ಯರದು. ಮಗನ ಕೊರಗನ್ನು ಕಂಡ ಆಚಾರ್ಯರು ಒಂದು ದಿವಸ ವಾದಿರಾಜರ ಮೃತ್ತಿಕಾ ಜಲದಲ್ಲಿ ಅದ್ದಿದ ತಮ್ಮ ಉಂಗುರದಿಂದ ಆತನ ನಾಲಿಗೆಯ ಮೇಲೆ ಬೀಜಾಕ್ಷರವನ್ನು ಬರೆದರಂತೆ. ಅಂದಿನಿಂದ ಶ್ರೀನಿವಾಸಾಚಾರ್ಯರು ಮಹಾಪ್ರಮೇಯಜ್ಞರಾಗಿ ರೂಪುಗೊಂಡರೆಂದು ತಿಳಿದುಬರುತ್ತದೆ.

ಇದೇ ಮಾದರಿಯ ಮತ್ತೊಂದು ಘಟನೆ : ಒಮ್ಮೆ ಹಂಪೆಯ ವಿಜಯವಿಠಲನ ಬಳಿಯಿರುವ ಶ್ರೀಪುರಂದರದಾಸರ ಮಂಟಪದ ಬಳಿ ತಮ್ಮ ತಂದೆಯೊಂದಿಗೆ ಬಂದಿದ್ದಾಗ ಶ್ರೀನಿವಾಸಾಚಾರ್ಯರು ಕೆಲವು ಸಮಯ ಮಂಟಪದಲ್ಲಿ ವಿಶ್ರಮಿಸಲು ಕುಳಿತುಕೊಂಡರು. ಆಗ

ಪಾರಾಯಣದಲ್ಲಿ ನಿರತರಾಗಿದ್ದ ಜಂಬುಖಂಡ್ಯಾಚಾರ್ಯರು ಹಠಾತ್ತನೆ ಮೇಲೆದ್ದು ತಮ್ಮ ಮಗನನ್ನು ಹೊರಬರಲು ಕೂಗಿದರು. ಇದರಿಂದ ಎಚ್ಚರಗೊಂಡ ಶ್ರೀನಿವಾಸಾಚಾರ್ಯರು ತಂದೆಯವರ ಆದೇಶದಂತೆ ಧಿಗ್ಗನೆದ್ದು ಹೊರಬಂದರು. ಅವರು ಹೊರಬರುತ್ತಿದ್ದಂತೆಯೇ ಶಿಥಿಲ ಗೊಂಡಿದ್ದ ಮಂಟಪದ ಒಂದು ಭಾಗ ಹಠಾತ್ತನೆ ಮುರಿದುಬಿತ್ತು. ಹೀಗೆ ಮುರಿದು ಬಿದ್ದ ಮಂಟಪದ ಅವಶೇಷವನ್ನು ಶ್ರೀನಿವಾಸಾಚಾರ್ಯರೇ ಖುದ್ದಾಗಿ ಹಲವರಿಗೆ ತೋರಿಸುತ್ತಿದ್ದರಂತೆ. ಆದರೆ ಇತ್ತೀಚೆಗೆ ಹಂಪೆಯಲ್ಲಿ ಕೈಗೊಂಡ ಪುನರುತ್ಥಾನ ಕಾರ್ಯದಲ್ಲಿ ಬಿದ್ದು ಹೋದ ಆ ಮಂಟಪದ ಸ್ತಂಭಗಳು ಬೇರೆಡೆಗೆ ಸ್ಥಳಾಂತರಗೊಂಡಿವೆ ಎಂದು ಹೇಳುತ್ತಾರೆ.

ಆಚಾರ್ಯರ ತೃತೀಯ ಪುತ್ರರಾದ ಶ್ರೀನಿವಾಸಾಚಾರ್ಯರು ತಮ್ಮ ತಂದೆಯವರಂತೆಯೇ ರಾಜರ ಋಜುತ್ವ ದೀಕ್ಷೆಯನ್ನು ಹೊಂದಿದ್ದು, ಭಾಗವತಾದಿ ಪುರಾಣಗಳ ಅಂತರಾರ್ಥವನ್ನು ಅರಿತು ಅವಧೂತರಂತೆ ಜೀವಿಸಿದರೆಂದು ತಿಳಿದುಬರುತ್ತದೆ. ಆಚಾರ್ಯರ ಹಲವಾರು ಕೃತಿಗಳನ್ನು ಅದರಲ್ಲಿಯೂ ಮುಖ್ಯವಾಗಿ ಶ್ರೀಸ್ವಾಪ್ನವೃಂದಾವನಾಖ್ಯಾನಕ್ಕೆ ಅವರು ರಚಿಸಿದ ಪ್ರಾಕೃತ ವ್ಯಾಖ್ಯಾನವನ್ನು ತೆಲುಗು ಲಿಪಿಯಲ್ಲಿ ಪ್ರತಿಮಾಡಿದ ಕೀರ್ತಿಯೂ ಸಹ ಶ್ರೀನಿವಾಸಾಚಾರ್ಯರಿಗೆ ಸಲ್ಲುತ್ತದೆ. ಶ್ರೀನಿವಾಸಾ ಚಾರ್ಯರ ಸಂತತಿಯೇ ಇಂದು ನಡೆದು ಬಂದಿದೆ. ಬಳ್ಳಾರಿ, ಶಿರಗುಪ್ಪ ಮೊದಲಾದ ಕಡೆ ಅವರ ವಂಶಸ್ಥರು ವಾಸಿಸುತ್ತಿದ್ದಾರೆ. ಇವರಲ್ಲಿ ಮಾಧವಾಚಾರ್ಯರಿಗೆ ದತ್ತು ಹೋಗಿದ್ದ ಶ್ರೀನಿವಾಸಾಚಾರ್ಯರ ಪುತ್ರಸಂತಾನವೂ ಸೇರಿದೆ.

## ಕಣ್ಮರೆಯಾದ ಕೇಸರಿ

ವಾದಿರಾಜರ ಋಜುತ್ವ ಪ್ರತಿಪಾದನೆಗೆ ಅಪೂರ್ವ ಚಾಲನೆಯನ್ನು ನೀಡಿ, ಹಲವಾರು ಪ್ರಮೇಯಭರಿತ ಕೃತಿಗಳಿಂದ ಸಾರಸ್ವತ ಭಂಡಾರ ವನ್ನು ಶ್ರೀಮಂತಗೊಳಿಸಿ, ತಮ್ಮ ನಂತರ ಸಾತ್ತ್ವಿಕ ಪರಂಪರೆಯನ್ನು ಮುಂದುವರೆಸುವ ಸಮರ್ಥ ಶಿಷ್ಯ ಸಂಪತ್ತನ್ನು ಗಳಿಸಿ, ಉಳಿಸಿ, ಬೆಳಸಿದ

ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ಹೆಚ್ಚು ವಾಸಿಸಿದ್ದು ಬಳ್ಳಾರಿ ಹಾಗೂ ಶಿರಗುಪ್ಪದಲ್ಲಾದರೂ ಅವರು ತಮ್ಮ ಜೀವಿತದ ಕೊನೆಗಾಲವನ್ನು ಕಳೆದದ್ದು ಹಂಪೆಯ ಬಳಿಯಿರುವ ಕಮಲಾಪುರದಲ್ಲಿ. ಆ ಸಂದರ್ಭದಲ್ಲಿ ಅವರ ಧರ್ಮಪತ್ನಿಯೂ ಸಹ ನಿಧನಹೊಂದಿದ್ದು, ದ್ವಿತೀಯ ಪುತ್ರರಾದ ಮಾಧವಾಚಾರ್ಯರು ವ್ಯಾಸಂಗದ ನಿಮಿತ್ತ ದಕ್ಷಿಣ ದೇಶಕ್ಕೆ ಹೋಗಿದ್ದರಿಂದ ಆಚಾರ್ಯರು ಆಗಷ್ಟೇ ತಾರುಣ್ಯಾವಸ್ಥೆಗೆ ಕಾಲಿಟ್ಟಿದ್ದ ತಮ್ಮ ಕಿರಿಯ ಪುತ್ರರಾದ ಶ್ರೀನಿವಾಸಾಚಾರ್ಯರನ್ನು ಕರೆದುಕೊಂಡು ತುಂಗಭದ್ರಾ ತೀರದ ಹಂಪೆಗೆ ಬಂದರು. ಅಲ್ಲಿಗೆ ಸಮೀಪದಲ್ಲಿರುವ ಗುಜಗಹ್ವರದಲ್ಲಿ ದಿಗ್ಗಜಗಳಂತೆ ವಿರಾಜಿಸುತ್ತಿರುವ ನವಯತಿಗಳ ವೃಂದಾವನಗಳನ್ನು ಸಂದರ್ಶಿಸಿ, ನಂತರ ಮನೋನಿಯಾಮಕನೂ, ಪಂಪಾಪುರಾಧೀಶನೂ ಆದ ವಿರೂಪಾಕ್ಷನಿಗೆ ಪೊಡಮಟ್ಟು ಚಕ್ರತೀರ್ಥದ ದಂಡೆಯ ಮೇಲೆ ಯಂತ್ರೋದ್ಧಾರಕರಾಗಿ ಮೆರೆಯುತ್ತಿರುವ ವ್ಯಾಸರಾಜ ಪ್ರತಿಷ್ಠಿತ ಮುಖ್ಯಪ್ರಾಣ ಹಾಗೂ ಕೋದಂಡರಾಮನ ಸನ್ನಿಧಿಯಲ್ಲಿ ಸೇವೆ ಸಲ್ಲಿಸುತ್ತಾ ಕೆಲಕಾಲ ನೆಲೆಸಿದರು. ವರಾಹತನಯೆಯಾದ ತುಂಗಭದ್ರೆಯ ಮಡಿಲಿನಲ್ಲಿ ಅರಳಿ ನಿಂತ ಪಂಪಾ ಕ್ಷೇತ್ರದ ಪಾವಿತ್ರತೆ ಅವರನ್ನು ಪುಳಕಿತ ಗೊಳಿಸಿತು. ಕಣ್ಣು ಹಾಯಿಸಿದ ಕಡೆ ಅವರಿಗೆ ಮಧ್ವದಿಗಂತದಲ್ಲಿ ದೇದೀಪ್ಯ ಮಾನವಾಗಿ ಬೆಳಗಿದ ನಕ್ಷತ್ರ ಪುಂಜಗಳೇ ಗೋಚರಿಸಿದವು. ನದಿಯ ಆ ಪಕ್ಕದ ಎದುರಿಗೆ, ಒರಿಸ್ಸಾ ನಗರದ ಗಜಪತಿ ಸಂಸ್ಥಾನದ ರಾಜಭಂಡಾರ ದಲ್ಲಿದ್ದ ಬ್ರಹ್ಮಕರಾರ್ಚಿತ ಮೂಲ ಸೀತಾರಾಮರನ್ನು ತಮ್ಮ ಗುರುಗಳಿಗೆ ತಂದುಕೊಟ್ಟ ಆಚಾರ್ಯರ ನೇರಶಿಷ್ಯರಾದ ಶ್ರೀನರಹರಿತೀರ್ಥರ ಮೂಲವೃಂದಾವನ[1]; ಎಡಗಡೆ, ಅಂತಹುದೇ ಸಾಹಸಕಾರ್ಯವನ್ನು ಪುನರಾವರ್ತಿಸಿದ ಧೀರ ಯತಿಪುಂಗವ ಶ್ರೀರಘುನಂದನ ತೀರ್ಥರ[2] ಮಹಾಸನ್ನಿಧಾನ. ಬಲಪಕ್ಕಕ್ಕೆ ಹರಿದಾಸ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ ದಾಸಶ್ರೇಷ್ಠ ಶ್ರೀಪುರಂದರದಾಸರ ದಿವ್ಯಸನ್ನಿಧಾನವುಳ್ಳ ಮಂಟಪ; ಭೃಗು ಅಂಶಸಂಭೂತರಾದ ಶ್ರೀವಿಜಯ ದಾಸರಿಂದ ಪುರಂದರಾರ್ಯರ ಆರಾಧನಾಂಗ ಅಖಂಡ ಜ್ಞಾನಯಜ್ಞಾದಿಗಳು ನಡೆದ ಪವಿತ್ರತಾಣ. ತಮ್ಮ

ಆರಾಧ್ಯ ಗುರುಗಳೂ ಸೇರಿದಂತೆ ಹಲವಾರು ಯತಿವರೇಣ್ಯರು ನಡೆದಾಡಿದ ಪುಣ್ಯನೆಲ – ಇವೆಲ್ಲವನ್ನೂ ಶುದ್ಧಾಂತಃಕರಣದಿಂದ ಸ್ಮರಿಸಿದಾಗ ಆಚಾರ್ಯರಿಗೆ ರೋಮಾಂಚನವುಂಟಾಯಿತು. ಅಲ್ಲಿಯೇ ಚಿರಕಾಲ ನೆಲೆಸುವ ಹಂಬಲ ಮೂಡುತ್ತಿದ್ದಂತೆಯೇ ಜ್ಞಾನಿಗಳಾದ ಅವರಿಗೆ ತಮ್ಮ ಅವತಾರ ಕಾರ್ಯದ ಅಂತ್ಯಕಾಲ ಸಮೀಪಿಸುತ್ತಿರುವುದೂ ಗೋಚರಿಸಿತು.

ಹೀಗಿರುವಾಗ ಆಚಾರ್ಯರು ಅಪರಿಮಿತವಾದ ಕಾಲುಬೇನೆಗೆ ಒಳಗಾಗಿ ಅಸ್ವಸ್ಥರಾದರು. ಕೂಡಲೇ ಕಮಲಾಪುರದಲ್ಲಿದ್ದ ತಮ್ಮ ಶಿಷ್ಯರಾದ ಸುಂಕದ ರಾಮಾಚಾರ್ಯರ ಪ್ರಾರ್ಥನೆಯಂತೆ ಅವರ ಮನೆಗೆ ಹೋದರು. ಅಲ್ಲಿ ಸ್ವಲ್ಪಕಾಲವಿದ್ದು ಶುಶ್ರೂಷೆ ನಡೆಸಿದರೂ ನೋವು ಹಿಂಗಲಿಲ್ಲ. ಇದು ಕಾಲನ ಕರೆಯ ಸಂಕೇತವಾದ್ದರಿಂದ ಎಷ್ಟು ಔಷಧೋಪಚಾರಗಳು ನಡೆದರೂ ಗುಣಕಾಣಲಿಲ್ಲ. ಜನ್ಮಾಂತರದ ಪ್ರಾರಬ್ಧದ ಫಲವಾಗಿ ದಿನೇ ದಿನೇ ಉಲ್ಬಣಗೊಂಡ ವ್ಯಾಧಿಯ ಬಾಧೆಯನ್ನು ಆಚಾರ್ಯರು ತಮ್ಮ ಸ್ವಭಾವ ಸಹಜವಾದ ಧೈರ್ಯದಿಂದಲೇ ಎದುರಿಸಿದರು. ಆ ಸಂದರ್ಭಕ್ಕೆ ಸರಿಯಾಗಿ ಸ್ವಪ್ನ ಪ್ರೇರಣೆಯಂತೆ ಮತ್ತು ಗುರುಗಳಾಗಿದ್ದ ಹತ್ತಿಬೆಳಗಲ್ ನರಸಿಂಹಾ ಚಾರ್ಯರ ಆದೇಶದಂತೆ ಕಮಲಾಪುರಕ್ಕೆ ಬಂದು ತಮ್ಮ ಪರಮಗುರುಗಳ ಸೇವೆಯಲ್ಲಿ ನಿರತರಾಗಿದ್ದ ಶ್ರೀಮುತ್ತಿಗೆ ಶ್ರೀನಿವಾಸಾಚಾರ್ಯರು ವಾಯು ದೇವರನ್ನು ಸೇವಿಸಿ ವಿಶೇಷ ಪ್ರಾರ್ಥನೆ ಸಲ್ಲಿಸಿದಾಗ 'ಹಿಂದೆ

---

1. ಸ ಸೀತಾ ಮೂಲರಾಮಾರ್ಚಾ ಕೋಶೇ ಗಜಪತೇ ಸ್ಥಿತಾ।
   ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ॥

2. ಪರೈರಪಹೃತಾಮೂಲರಾಮಾರ್ಚಾ ಗುರ್ವನುಗ್ರಹಾತ್।
   ಯೇನಾನೀತಾ ನಮಸ್ತಸ್ಮೈ ರಘುನಂದನಭಿಕ್ಷವೇ॥

– ಅನ್ಯೈರಪಹೃತಾಮರ್ಚಾಂ ರಾಮಸ್ಯ ರಘುನಂದನಃ।
  ಆಜಹಾರ ಪುನರ್ಮೌಲ್ಯಾಚ್ಛ್ರೀಸುರೇಂದ್ರಗುರೋಃ ಗುರುಃ॥

– ಚರಮಶ್ಲೋಕಗಳು ಮತ್ತು ಶ್ರೀವಾದೀಂದ್ರತೀರ್ಥರ 'ಅರ್ಚಾಗತಿಕ್ರಮ 30

ಜನ್ಮಾಂತರದಲ್ಲಿ ಇವರು ಭೀಮಸೇನ ದೇವರ ಮುಂದೆ ರೋಷದಿಂದ ಕಾಲನ್ನು ಮೆಟ್ಟಿದ್ದ ಕಾರಣ ಈ ಶಿಕ್ಷೆಯಾಗಿದೆ' ಎಂಬ ಸೂಚನೆಯಾಯಿತಂತೆ. ಹಾಗಾಗಿ ಕೆಲವರು ಆಚಾರ್ಯರನ್ನು ಬಲರಾಮಾಂಶ ಸಂಭೂತರೆಂಬ ಅಭಿಪ್ರಾಯಪಡುತ್ತಾರೆ.

ಕ್ರಿ.ಶ. 1896ರ ಸೆಪ್ಟೆಂಬರ್ 5ನೆಯ ದುರ್ಮುಖಿನಾಮ ಸಂವತ್ಸರದ ಶ್ರಾವಣಬಹುಳ ತ್ರಯೋದಶಿ[1] ಶನಿವಾರ ಪ್ರಾಪ್ತವಾಯಿತು. ಆಚಾರ್ಯರು ತಾವು ದೇಹವನ್ನು ಬಿಡುವ ಕಾಲ ಸನ್ನಿಹಿತವಾಯಿತೆಂಬುದನ್ನು ಅರಿತರು. ಕೂಡಲೇ ತಮ್ಮ ಪುತ್ರರೂ ಸೇರಿದಂತೆ ಅಲ್ಲಿ ನೆರೆದಿದ್ದ ಸಮಸ್ತ ಶಿಷ್ಯವೃಂದವನ್ನು ಕರೆದು "ಜನ್ಮಾಂತರದ ಪುಣ್ಯದ ಫಲದಿಂದ ಈ ಪವಿತ್ರ ಸಾಧನ ಭೂಮಿಯಲ್ಲಿ ವಿಪ್ರಜನ್ಮ ಅದರಲ್ಲಿಯೂ ವೈಷ್ಣವಜನ್ಮ ಪ್ರಾಪ್ತವಾಗಿದೆ. ಇದಕ್ಕೆ ಕಳಶವಿಟ್ಟಂತೆ ಋಜೂತ್ತಮರಾದ ಶ್ರೀಮದ್ವಾದಿರಾಜ ಪೂಜ್ಯ ಚರಣರ ಸೇವಾಭಾಗ್ಯವೂ ಲಭ್ಯವಾಗಿದೆ. ಈ ಸೌಭಾಗ್ಯವನ್ನು ಎಂದಿಗೂ ವ್ಯರ್ಥಗೊಳಿಸದಿರಿ. ವಿಷ್ಣು ಸರ್ವೋತ್ತಮನೆಂಬ ಜ್ಞಾನ ನಿಶ್ಚಲವಾಗಿರಲಿ. ಶ್ರೀಮದಾಚಾರ್ಯರ ಸಚ್ಛಾಸ್ತ್ರಗಳನ್ನು ಸದಾ ಮನನ

---

1. ಇತ್ಯಾದ್ಯಮಾನುಷಕೃತಿಂ ಕೃತ್ವಾನುಗ್ರಾಹ್ಯ ಶಿಷ್ಯಕಾನ್ ।
ಶ್ರಾವಣಸ್ಯಾಸಿತೇ ಪಕ್ಷೇ ದುರ್ಮುಖಾಭಿಧವತ್ಸರೇ ॥
ತ್ರಯೋದಶ್ಯಾಂ ಹಿ ಪಂಪಾಯಾಂ ಅಗಾತ್ ಸ್ವರ್ಗಂ ಗುರೋರ್ಗುರುಃ ।
ದೇವಾನ್ ಶ್ರೀವಾದಿರಾಡಂಘ್ರಿಮೃದ್ಯಶ ಕಥಯನ್ನಿವ ॥
– ಶ್ರೀಸುಧಾಕರಗುರುಗುಣರತ್ನಮಾಲಾ (ಪಂಚಮಾವಲಿ 30–31)

– ಶ್ರಾವಣಸ್ಯಾಸಿತೇ ಪಕ್ಷೇ ಹ್ಯಬ್ದೇದುರ್ಮುಖಿನಾಮಕೇ ।
ಸ್ಥಿರವಾಸರಯುಕ್ತಾಯಾಂ ತ್ರಯೋದಶ್ಯಾಂ ಭಗೋದಯೇ ॥
ತುಂಗಭದ್ರಾನದೀತೀರೇ ಪಂಪಾಕ್ಷೇತ್ರ ಸಮೀಪಗೇ ।
ಕಮಲಾಪುರವಿಖ್ಯಾತೇ ವಸಂತಃ ಪುಟಭೇದನೇ ॥
ಸುಂಕೋಪಪದರಾಮಾರ್ಯಪುತ್ರಾಶ್ವತ್ಥಗೃಹೇ ಶುಭೇ ।
ಶ್ರೀಮತ್ಸಂಕರ್ಷಣಧ್ಯಾನನಿರತಾ ಗುರುವರ್ಯಕಾಃ ॥
– ಶ್ರೀಮತ್ಕಿರಿಣೀ ಪಾಂಡುರಾಂಗಾಚಾರ್ಯಕೃತ
ಶ್ರೀಜಂಬುಖಂಡೀ ವಾದಿರಾಜಾಷ್ಟಕಮ್ ॥ 12–14 ॥

ಮಾಡುತ್ತಿರಿ. ಲಾತವ್ಯ ಚಕ್ರವರ್ತಿಗಳಾದ ಶ್ರೀವಾದಿರಾಜ ಪ್ರಭುಗಳು ಮುಂದಿನ ಸಮೀರಪದಾರ್ಹರೆಂಬ ಅಚಲ ವಿಶ್ವಾಸ ಸದಾ ಇರಲಿ" ಎಂದು ಮುಂತಾಗಿ ಉಪದೇಶಿಸಿದರಲ್ಲದೆ, "ನಮ್ಮ ಅವಸಾನವಾದ ನಂತರ ನಮ್ಮ ಪಾರ್ಥಿವ ಶರೀರದ ಅಂತ್ಯಕ್ರಿಯೆಯನ್ನು ಹಂಪೆಯ ಚಕ್ರತೀರ್ಥದ ದಂಡೆಯಲ್ಲಿ ಮಂತ್ರಾಕ್ಷೆಗಳಿರುವ ಬಂಡೆಯೊಂದರ ಮೇಲೆ ನಡೆಸಿರಿ" ಎಂದು ಆದೇಶವಿತ್ತು ಎಲ್ಲರನ್ನೂ ಅನುಗ್ರಹಿಸಿದರು. ನಂತರ ತಮ್ಮ ಆರಾಧ್ಯ ಗುರುಗಳ ಚರಣಾರವಿಂದವನ್ನು ಸ್ಮರಿಸಿ ಅವರ ಅಂತಃಸ್ಥನಾದ ಲಕ್ಷ್ಮೀಹಯಾಸ್ಯಾಭಿನ್ನ ತಮ್ಮ ಬಿಂಬ ಮೂರ್ತಿಯ ದರ್ಶನದಿಂದ ಅಂತರ್ಯದಲ್ಲಿಯೇ ಸಂಭ್ರಮಪಟ್ಟರು. ಈ ಸಂದರ್ಭ ದಲ್ಲಿಯೇ ತಮ್ಮ ಪುತ್ರರು ನೀಡಿದ ರಾಜರ ಪವಿತ್ರ ಮೃತ್ತಿಕಾಜಲವನ್ನು ಸೇವಿಸಿ ಲಯಚಿಂತನೆ ಮಾಡುತ್ತಾ ತಮ್ಮ ಅವತಾರ ಕಾರ್ಯವನ್ನು ಸಮಾಪ್ತಿಗೊಳಿಸಿದರು. ವಾದಿರಾಜರ ಋಜುತ್ವ ಸ್ಥಾಪನೆಯಲ್ಲಿ ಅಲ್ಲಿಯ ತನಕ ಜಗತ್ತು ಕಂಡರಿಯದ ಧೈರ್ಯ, ಸಾಹಸಗಳನ್ನು ಮೆರೆದ 'ಜಂಬುಖಂಡಿ' ಎಂಬ ಹೆಸರಿನ ಅಪೂರ್ವ ಕೇಸರಿಯೊಂದು ಕಣ್ಮರೆಯಾಗಿ ಹೋಯಿತು.

ಆಚಾರ್ಯರ ಅಗಲಿಕೆಯಿಂದ ಇಡೀ ಶಿಷ್ಯ ವೃಂದ ದುಃಖತಪ್ತವಾಗಿ ಕಂಬನಿ ಸುರಿಸಿತು. "ಎಷ್ಟು ಜನ್ಮಗಳ ಸಾಧನೆಯ ಫಲವೋ, ಎಷ್ಟು ಪುಣ್ಯ ವೆಗ್ಗಳಿಸಿತೋ, ಎಷ್ಟು ದೇವತೆಗಳು ಹರಸಿದರೋ ಇಂತಹ ಸದ್ಗುಣಮಣಿ ಭೂಷಿತರಾದ ಸದ್ಗುರುಗಳ ಸಂಪರ್ಕ ನಮಗಾಯಿತು. ಅವರ ಉಪದೇಶಾಮೃತದಿಂದ ನಮ್ಮ ಬದುಕು ಪಾವನವಾಯಿತು. ಹೇ ಕಮಲಾಪತೇ! ಜನ್ಮಜನ್ಮದಲ್ಲಿಯೂ ಜಂಬುಖಂಡ್ಯಾರ್ಯರಂತಹ ಮಹಾತ್ಮರನ್ನು ನಮಗೆ ಗುರುಗಳಾಗಿ ಕರುಣಿಸು. 'ಭವೇ ಭವೇ ಗುರುರ್ಭೂಯಾದಯಂ ಮೇ ಕಮಲಾಪತೇ' ಎಂಬುದು ಅಲ್ಲಿ ನೆರೆದಿದ್ದ ಸಮಸ್ತ ಶಿಷ್ಯರ ಪ್ರಾರ್ಥನೆಯಾಗಿ ಮಾರ್ದನಿಸಿತು. ಜಂಬುಖಂಡಿ ಆಚಾರ್ಯರ ಆದೇಶದಂತೆ ಅವರ ಪಾರ್ಥಿವ ಶರೀರದ ಅಂತ್ಯ

ಸಂಸ್ಕಾರವನ್ನು ಚಕ್ರತೀರ್ಥದ ತಟದಲ್ಲಿದ್ದ ಮಂತ್ರಾಕ್ಷತಾಯುಕ್ತ ಬಂಡೆಯ ಮೇಲೆ ವಿಧ್ಯುಕ್ತವಾಗಿ ನೆರವೇರಿಸಲಾಯಿತು.

## ಅಪೂರ್ವ ಗುರುಪರ್ವ

ಅಲ್ಪಾಯುಷಿಗಳಾದರೂ ಲೋಕವೇ ಬೆಕ್ಕಸ ಬೆರಗಾಗುವಂತಹ ಅದ್ಭುತ ಕಾರ್ಯಗಳನ್ನು ಸಾಧಿಸಿ, ವ್ಯಾಸದಾಸ ಸಾಹಿತ್ಯಭಂಡಾರಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿ ಕಣ್ಮರೆಯಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು ನಿಸ್ಸಂದೇಹವಾಗಿ ಅವತಾರ ಪುರುಷರು. ತಮ್ಮನ್ನು ಆಶ್ರಯಿಸಿದ ಸಜ್ಜನರ ಹೃದಯಾಂತರಾಳದಲ್ಲಿ ನಿರೂಢವಾದ ಅಜ್ಞಾನಾಖ್ಯ ಅಂಧಕಾರವನ್ನು ತಮ್ಮ ಉಪದೇಶ ಕಿರಣಗಳಿಂದ ತೊಡೆಯಲು ಭುವಿಗವತರಿಸಿದ 'ಶ್ರೀಸುಧಾಕರಾಚಾರ್ಯ'ರೆಂಬ ಜ್ಞಾನ ಸೂರ್ಯರು. ಇದನ್ನು ಅವರ ಮಹಿಮೆಗಳನ್ನು ಕಣ್ಣಾರೆ ಕಂಡು ವಿಸ್ಮಿತರಾದ ಎಲ್ಲ ಜ್ಞಾನಿಗಳೂ ಒಕ್ಕೊರಲಿನಿಂದ ಉದ್ಗರಿಸಿದ್ದಾರೆ. ಶ್ರೀಸುಧಾಕರಗುರುಗುಣರತ್ನಮಾಲಾಕಾರರಂತೂ 'ಸಾಮಾನ್ಯೋ ನೇತಿ ಸುಜನೈಸ್ತರ್ಕಿತಃ ಶುಶುಭೇ ಗುರುಃ' ಎಂದು ಕರಗಳೆತ್ತಿ ಸಾರುತ್ತಾರೆ. ಆದರೆ ಅವರ ಸ್ವರೂಪದ ವಿಷಯವಾಗಿ 'ಇಂಥದೇ ಅಂಶ' ಎಂದು ನಿಶ್ಚಯ ಅಭಿಪ್ರಾಯವಿದ್ದಂತೆ ತೋರುವುದಿಲ್ಲ. ಸೋದೇ ಕ್ಷೇತ್ರಕ್ಕೆ ಹೋದಾಗಲೆಲ್ಲಾ ಭೂತರಾಜರ ಮೂಲೆಯಲ್ಲಿಯೇ ನಿರ್ಭಯವಾಗಿ ಸ್ನಾನ ಮಾಡುತ್ತಾ 'ರಾಜರ ಋಜುತ್ವ ಸಮರ್ಥಕರ ಸೇನಾಧಿಪತಿ'ಯಾಗಿ ಕಂಗೊಳಿಸಿದ ಆಚಾರ್ಯರನ್ನು ಕೆಲವರು ಭೂತರಾಜರ [1]ಅಂಶಸಂಭೂತರೆಂದೂ;

---

1. 'ಸೋದೆ ಮಠದ ಶ್ರೀವಿಶ್ವಾಧೀಶರ ಪತ್ರದ ಒಕ್ಕಣೆಯಲ್ಲಿ 'ಫಾಲ್ಗುಣಾಸಿತ ಶ್ರೀಭೂತರಾಜಾಭಿವ್ಯಂಜಕಚತುರ್ದಶೀ ಮಂಗಳವಾರ ಪರ್ಯಂತ' ಎಂದು ಉಲ್ಲೇಖಿಸಿ, ಮುಂಡೆ 1873ರಲ್ಲಿ ಆಚಾರ್ಯರಿಗೆ ಮರ್ಯಾದೆ ಮಾಡಿದ ವಿಚಾರ ತಿಳಿಸಿ, ನಂತರ ಇವತ್ತು ಎಂಬುದರಿಂದ ಪೂರ್ವೋಕ್ತ ಚತುರ್ದಶೀ ಮಂಗಳವಾರವೇ ಆಯಿತಷ್ಟೆ. ಅಲ್ಲಿ ಹೇಳಿದಂತೆ ಭೂತರಾಜರ ಪೂಜಾ ದಿವಸವೇ 'ಆಚಾರ್ಯರಿಗೆ ಬೆನ್ನೆ ಮಣೆ, ತಟ್ಟೀ ಮರ್ಯಾದೆಗಳು →

ಮತ್ತೆ ಕೆಲವರು ಅವರ ಆವೇಶಯುಕ್ತರೆಂದೂ ಕರೆದರೆ; ಇನ್ನು ಕೆಲವರು ಲಕ್ಷವಿಪ್ರಭೋಜನದ ಹರಕೆಯ ಪೂರೈಕೆಗಾಗಿ ಮಂತ್ರಾಲಯಧಲ್ಲಿ ಸೇವಿಸುತ್ತಿದ್ದ ಭಕ್ತರೊಬ್ಬರಿಗೆ ಶ್ರೀರಾಘವೇಂದ್ರ ಸ್ವಾಮಿಗಳ ಸ್ವಪ್ನದ ಮೂಲಕ ಆಚಾರ್ಯರ ಆಗಮನವನ್ನು ತಿಳಿಸಿ, ನೀಲನಾಮಕ ಕಪಿಗಳಾದ ಅವರಿಗೆ ಭೋಜನ ಮಾಡಿಸಿದರೆ ಲಕ್ಷವಿಪ್ರ ಭೋಜನದ ಫಲಪ್ರಾಪ್ತಿ ಯಾಗುವುದು ಎಂಬ ಸೂಚನೆಯನ್ನು ನೀಡಿದರೆನ್ನಲಾದ ಘಟನೆ ಯೊಂದನ್ನು ಉಲ್ಲೇಖಿಸಿ ಜಂಬುಖಂಡ್ಯಾರ್ಯರು ನೀಲನಾಮಕ ಕಪಿ ಗಳೆಂಬ ನಿಲುವಿಗೆ ಬರುತ್ತಾರೆ. ಮತ್ತಷ್ಟು ಜನ ಅವರ ಅಂತ್ಯಕಾಲದಲ್ಲಿ ಪ್ರಾಣಪತಿಯ ದ್ವಾರಾ ಸ್ವಪ್ನ ಸೂಚಿತವಾದ ವಿಷಯವನ್ನು ಪ್ರಸ್ತಾಪಿಸಿ ಅವರನ್ನು ಬಲರಾಮಾಂಶರೆಂದು ಶಂಕಿಸುತ್ತಾರೆ. ಇದೇನೇ ಇರಲಿ, ಆಚಾರ್ಯರು ದೇವಾಂಶಸಂಭೂತರೆಂಬುದಂತೂ ನಿಶ್ಚಯ.

ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ಅಸಂಖ್ಯಾತ ಭಕ್ತರು ಮತ್ತು ಅವರ ಅಭಿಮಾನಿಗಳು ದೇಶದಾದ್ಯಂತ ಹರಡಿದ್ದಾರೆ. ಈ ಹೊತ್ತಿಗೂ ಆಚಾರ್ಯರ ಭಕ್ತವರ್ಗ ಅವರ ಆರಾಧನೆಯನ್ನು ಬಳ್ಳಾರಿಯಲ್ಲಿ "ಗುರುಪರ್ವ"ವಾಗಿ ಆಚರಿಸಿ ಅವರ ಅಪೂರ್ವಗುಣ ಸಾಹಸಗಳನ್ನು ಸ್ಮರಿಸುತ್ತದೆ.

---

→ ಕೊಟ್ಟಿದ್ದೇವೆ. ಭಾಜಂತ್ರ್ಯಾದಿ ಮಂಗಳ ಘೋಷದಿಂದ, ಈ ಗುರು ವಾದಿರಾಜರ ಭಟರನ್ನು ಕರಕೊಂಡು ಹೋಗೋದು. ಹರಿ ಪ್ರೀತನಾಗುವ' ಎಂದು ಶ್ರೀಗಳವರ ಮಾತು. ಈ ದಿವಸವೇ ಆಚಾರ್ಯರಿಗೆ ಮರ್ಯಾದೆ ಮಾಡಬೇಕೆಂದಾಗಲೀ, ಅಥವಾ ಅವರಿಗೆ ಮರ್ಯಾದೆ ಮಾಡಿದ ದಿವಸ ಶ್ರೀಭೂತರಾಜಾಭಿವ್ಯಂಜಕ ದಿವಸವೇ ಕೂಡುತ್ತೆಂದು ಯಾರಿಗೆ ತಾನೇ ಪೂರ್ವಭಾವಿಯಾಗಿ ಹೊಳೆದಿರುತ್ತದೆ? ಇವೆಲ್ಲವೂ ದೈವನಿಯಾಮಕವು. ಭಾವುಕನಾದವನು ಅದರ ಅಂತರಾರ್ಥವನ್ನು ತಿಳಿದು ಹರಿಸಂಕಲ್ಪವನ್ನು ಕೊಂಡಾಡುತ್ತಾ ಸಂತೋಷಪಡುತ್ತಾನೆ. ನಾಸ್ತಿಕನಾದವನಿಗೆ ಇದೊಂದು ಆಕಸ್ಮಿಕ ಸನ್ನಿವೇಶದಂತೆ ಕಾಣುತ್ತದೆ. ಈ ಆಚಾರ್ಯರು ಶ್ರೀಭೂತರಾಜರ ಏಕಾಂಶದಿಂದ ಉತ್ಪನ್ನರೆಂಬುದಕ್ಕೆ ಅವಕಾಶವಿರುತ್ತದೆ."

– ಶ್ರೀಗುರುಗೋವಿಂದದಾಸರು (ಹರಿಭಕ್ತವಿಜಯ ಭಾಗ–1)



ಭಾವಿಸಮೀರರೆಂದು ಪ್ರಸಿದ್ಧರಾದ ಶ್ರೀವಾದಿರಾಜರ ಕರುಣಾ ವಿಶೇಷದಿಂದಲೇ ಜನ್ಮ ತಳೆದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರು 'ರಾಜರ ಋಜುತ್ವ ಪ್ರತಿಪಾದನೆ'ಗಾಗಿ ತಮ್ಮ ಬಾಳಿನ ಸಾರ ಸರ್ವಸ್ವವನ್ನೂ ಮೀಸಲಾಗಿಟ್ಟಿದ್ದ ಮಹಾನುಭಾವರು. ರಾಜರ ಋಜುತ್ವ ಸಾಧಕ ಪ್ರಮಾಣಗಳನ್ನು ಸಂಗ್ರಹಿಸಿ ಋಜುತ್ವ ವಿರೋಧಿಗಳ ಅಪಲಾಪಗಳು ಆಧಾರರಹಿತವೆಂದು ಆಚಾರ್ಯರು ಸಮರ್ಥಿಸಿದರು.

ತಮಗೆ ಒಲಿದು ಬಂದಿದ್ದ ವೀಣಾಪಾಣಿ ಮಾರುತಿಯ ಮೂರ್ತಿಯೊಂದನ್ನು ಕೊರಳಿಗೆ ಹಾರದಂತೆ ಹಾಕಿಕೊಂಡು ಜಾಂಗಟೆಯನ್ನು ಬಾರಿಸುತ್ತಾ "ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವಚ! ಪೂರ್ಣಪ್ರಜ್ಞಃ ತೃತೀಯಸ್ತು ಚತುರ್ಥೋ ವಾದಿರಾಜಕಃ!! ಎಂದುಗಟ್ಟಿಯಾಗಿ ಘೋಷಿಸುತ್ತಾ ಆಚಾರ್ಯರು ಸಂಚರಿಸುತ್ತಿದ್ದರಂತೆ. ಹಾಗಾಗಿ ಆಚಾರ್ಯರ ಶಿಷ್ಯರಾದ ಶ್ರೀ ಷಟ್ಪುರಾಚಾರ್ಯರು ತಾವು ರಚಿಸಿರುವ "ಶ್ರೀಸುಧಾಕರ ಗುರುಗುಣ ರತ್ನಮಾಲಾ" ಎಂಬ ಕೃತಿಯಲ್ಲಿ: "ವಾದಿರಾಜರ ದ್ವೇಷಿಗಳೆಂಬ ನರಿಗಳೇ, ಈ ಕೂಡಲೇ ಇಲ್ಲಿಂದ ತೊಲಗಿರಿ, ಏಕೆಂದರೆ ಜಂಬುಖಂಡಿ ಎಂಬ ಹೆಸರಿನ ಸಿಂಹವು ತನ್ನ ತೀಕ್ಷ್ಣವಾದ ನಖ ಸದೃಶ ವಾಕ್ಯಗಳಿಂದ ರಾಜರ ಋಜುತ್ವ ವಿಷಯದಲ್ಲಿ ದುರಾಗ್ರಹವುಳ್ಳ ದುಷ್ಟ ಕವಿಗಳೆಂಬ ಆನೆಯ ಕುಂಭಸ್ಥಳವನ್ನು ಸೀಳುತ್ತಾ ಬರುತ್ತಿದೆ. ಪ್ರಖ್ಯಾತವಾದ ಈ ಅಪೂರ್ವ ಕೇಸರಿಯನ್ನು ನೀವು ಕಂಡಿಲ್ಲವೇನು? ಆದ್ದರಿಂದ ತ್ವರಿತವಾಗಿ ಪಲಾಯನ ಮಾಡಿರಿ" ಎಂದು ಮಾರ್ಮಿಕವಾಗಿ ಕರೆನೀಡುತ್ತಾರೆ.

"ಇಭವರದವಿಠಲ" ಎಂಬ ಅಂಕಿತದಲ್ಲಿ ಹರಿದಾಸ ದೀಕ್ಷೆಯನ್ನು ಸಹ ಪಡೆದಿದ್ದ ವ್ಯಾಸದಾಸಸಾಹಿತ್ಯಗಳ ಸವ್ಯಸಾಚಿಗಳಾದ ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ರೋಮಾಂಚಕರ ಜೀವನ, ಸಾಧನೆ ಮತ್ತು ಮಹಿಮಾ ಪರಿಚಯವನ್ನು 'ಹರಿದಾಸ ಕುಲತಿಲಕ' ಶ್ರೀಗುರುಗೋವಿಂದ ವಿಠಲ ದಾಸರ ಶಿಷ್ಯರೂ, ಶ್ರೀತಿರುಮಲೇಶ ಹರಿ ವಿಠಲಾಂಕಿತರೂ ಆದ ಶ್ರೀಜಯಸಿಂಹ ಅವರು ತಮ್ಮ ಕಮನೀಯ ಸರಳ ಶೈಲಿಯಲ್ಲಿ ಮಾಡಿಕೊಟ್ಟಿದ್ದಾರೆ. ವಾದಿರಾಜರ ಭಕ್ತರಿಗೆ ಮತ್ತು ಅಧ್ಯಾತ್ಮ ಪಿಪಾಸುಗಳಿಗೆ ಸಂಗ್ರಹಾರ್ಹವಾದ ಉಪಯುಕ್ತ ಕೃತಿಯದು.



ಪರಿಮಳ ಪ್ರಕಾಶನ

₹ 150/-